# ಹೊಸತು




## ನೆಮ್ಮದಿಯ ನಾಳೆ ನಮ್ಮದು


ಭಗವದ್ಗೀತೆ : ಒಂದು ಅವಲೋಕನ
೧೦. ವೈಚಾರಿಕ ಸಾಹಿತ್ಯದ ಮರುಭೂಮಿ — ಜಿ. ರಾಮಕೃಷ್ಣ ... ೧೩

'ಸಾಯದೇ ಬದುಕುಳಿದವರು' – ರಂಜನಾ ಪಡಿ
ಸಂದರ್ಶಕರು : ಡಾ॥ ಎನ್. ಗಾಯತ್ರಿ ... ೩೫

ಸರಕು ಮತ್ತು ಸೇವಾ ತೆರಿಗೆ – ಒಂದು ಕಿರು ಪರಿಚಯ
ವಿನಾಯಕ ಎಲ್. ಕುಲಕರ್ಣಿ ... ೧೭

ಸಾಕಿದ ಗಿಳಿಮರಿಯ ವಿಶ್ವಾಸ — ರಾಧಾ ಟೇಕಲ್ ... ೩೧
ಎಸ್ ಎಮ್ ಎಸ್ — ಮೂಲ : ಶ್ರೀ ಬಿನೋದ ಘೋಸಾಲ್
ಕನ್ನಡಕ್ಕೆ : ಡಾ॥ ಬಸವರಾಜ ಸಾದರ ... ೨೫

ಹೊಸ ರಾಮಾಯಣ "ಉತ್ತರಕಾಂಡ"ದ ರಾಮರಾಜ್ಯದಲ್ಲಿ
"ಬರ"ವನ್ನು ತಂದ ಭೈರಪ್ಪನವರು !! — ಎಮ್. ಸಿ. ಡೋಂಗ್ರೆ ... ೩೯

ಕಾವ್ಯಲೋಕ : — ೨೬, ೩೨, ೩೮, ೪೭, ೫೦, ೫೪, ೫೮

ತತ್ವಪದ ಸಂಪಾದನೆಯ ಅನುಭವಗಳು — ಡಾ॥ ರಹಮತ್ ತರೀಕೆರೆ ... ೪೫

ಗ್ವಾನೊ ಕಥನ — ಡಾ॥ ಎಚ್. ಎಸ್. ಅನುಪಮಾ ... ೨೧

ಅಂಕ ಗಳಿಕೆಯ ಸಂತೆಯಲ್ಲಿ ನರಳುತ್ತಿರುವ ಶಿಕ್ಷಣ — ನಾ. ದಿವಾಕರ ... ೨೭
ಉನ್ನತ ಶಿಕ್ಷಣ ಹಾಗೂ ಖಾಸಗೀಕರಣದ ಸವಾಲುಗಳು — ಗೌರಿತನಯ ... ೪೩

ಬ್ರಿಟನ್ ಸಾರ್ವತ್ರಿಕ ಚುನಾವಣೆ – ಲೇಬರ್ ಪಕ್ಷದ ಮುನ್ನಡೆ
ಮ. ಶ್ರೀ. ಮುರಳಿ ಕೃಷ್ಣ ... ೨೯

ಮಾತಿಗೊಂದು ಎಲ್ಲೆ ಎಲ್ಲಿದೆ... — ಸ್ಮಿತಾ ಅಮೃತರಾಜ್ ... ೫೩

ನೈಸರ್ಗಿಕ ವಿಕೋಪಗಳ ಉಸ್ತುವಾರಿ – ಕರ್ನಾಟಕ ಒಂದು ಮಾದರಿ
ಜಿ. ಎಸ್. ಶ್ರೀನಿವಾಸ ರೆಡ್ಡಿ, ಸಿ. ಎನ್. ಪ್ರಭು ... ೬೦

ಕನ್ನಡ ಜಾನಪದ ಸಾಹಿತ್ಯಕ್ಕೆ ಚೆನ್ನಣ್ಣ ವಾಲೀಕಾರರ ಕೊಡುಗೆ
ಪ್ರೊ॥ ಸೀ. ನಾ. ಬಾಲಪ್ಪ ವಾಂಕಡೋತ ... ೫೭

ತಳ ವರ್ಗಗಳ ಪ್ರತೀಕವಾಗಿ 'ಗೊಬ್ಬರ'
ಶೆಟ್ಟಿಹಳ್ಳಿ ನಾರಾಯಣಸ್ವಾಮಿ ಎಂ. ... ೫೬

ಶಾಸ್ತ್ರೀಯ ಭಾಷೆ ಹಾಗೂ ರಾಜ್ಯ ಭಾಷಾ ಮಾಧ್ಯಮ
ಡಾ॥ ರಾಜೇಗೌಡ ಹೊಸಹಳ್ಳಿ ... ೧೨

ನಾನು ಓದಿದ ಪುಸ್ತಕ : ಮನುಷ್ಯ ಸಂಬಂಧಗಳ ಸುತ್ತಣ ಪ್ರವಾಸ
ಡಾ॥ ಎಚ್. ಎಸ್. ಗೋಪಾಲ ರಾವ್ ... ೫೧
ವಿಶ್ವವೀಕ್ಷಣೆ : ಚೀಣಾದ ಮಹದಾಕಾಂಕ್ಷೆಯ ರಸ್ತೆ ನಿರ್ಮಾಣ ಯೋಜನೆ
ಸೀಯಾರ್ಕೆ ... ೪೯
ನಭಾವಲೋಕನ : 'ಮಿನಿ' ಗ್ರಹಣ – ಆಚ್ಛಾದನೆ
ಡಾ॥ ಬಿ. ಎಸ್. ಶೈಲಜಾ ... ೪೮
ಹೊಸ ಓದು — ಇಂದಿರಾಕುಮಾರಿ ... ೨೪



**ಚಿತ್ರಗಳು** : ನಾಮದೇವ ಕಾಗದಗಾರ, ಕಮಲಂ ಅರಸು, ವಿ. ಗೋಪಾಲ್, ಆಯ್. ಬಿ. ರಾಠೋಡ್, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ
**ಮುಖಪುಟ** : ರಾಷ್ಟ್ರಪತಿ ಭವನ
**ವಿನ್ಯಾಸ** : ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು

ಸರ್ವೋಚ್ಚ ನ್ಯಾಯಾಲಯವು ನ್ಯಾಯಮೂರ್ತಿ ಕರ್ಣನ್ ಅವರ ದಸ್ತಗಿರಿಗೆ ಆಜ್ಞೆ ಹೊರಡಿಸಿದ್ದು ಒಂದು ತಿಂಗಳಿಗೂ ಹೆಚ್ಚು ಹಿಂದೆ. ಪಶ್ಚಿಮ ಬಂಗಾಳ ಮತ್ತು ತಮಿಳುನಾಡು ಪೊಲೀಸರು ನ್ಯಾಯಮೂರ್ತಿಗಳನ್ನು ಇನ್ನೂ ಹುಡುಕುತ್ತಲೇ ಇದ್ದಾರೆ. ಎಂತೆಂತಹ ಅಪರಾಧವೆಸಗಿರುವ ಗಟ್ಟಿ ಕುಳಗಳನ್ನೇ ಪೊಲೀಸರು ಹಿಡಿದುಹಾಕುತ್ತಾರೆ, ಈ ನ್ಯಾಯಮೂರ್ತಿಗಳ ಚಲನವಲನಗಳನ್ನು ಅವರು ಭೇದಿಸಲಾಗದೆ ಹೋದರಲ್ಲ ಎಂದು ಸೋಜಿಗವೆನಿಸುತ್ತದೆ. ಅವರು ಸುಭದ್ರ ಜಾಗದಲ್ಲೆಲ್ಲೋ ಅಡಗಿ ಕುಳಿತರೆಂದು ತೋರುತ್ತದೆ. ಇರಲಿ, ಅವರ ದಸ್ತಗಿರಿಯಾಗಲಿಲ್ಲವೆಂದು ಬೇಸರಿಸುವ ಪ್ರಮೇಯವಿಲ್ಲ. ಕಲ್ಬುರ್ಗಿ–ಪಾನ್ಸರೆ–ದಾಭೋಲ್ಕರ್ ಅವರ ಹಂತಕರನ್ನೇ ಹಿಡಿದಿಲ್ಲ, ಪಾಪ, ಕರ್ಣನ್ ಅವರದೇನು ಲೆಕ್ಕ. ಅವರೆತ್ತಿದ ಪ್ರಶ್ನೆಗಳು ಸರ್ವೋಚ್ಚ ನ್ಯಾಯಾಲಯಕ್ಕೆ ಸಾಕಷ್ಟು ಮುಜುಗರ ಉಂಟುಮಾಡಿತೆಂಬುದು ಮುಖ್ಯ ವಿಷಯ. ನ್ಯಾಯದೇವತೆ ಅದೆತ್ತ ವಾಲುತ್ತಾಳೋ ಕಾದುನೋಡೋಣ, ಏನವಸರ ! ಮಾಧ್ಯಮಗಳು ಪೂರ್ಣವಾಗಿ ವರದಿ ಮಾಡಿಲ್ಲದಿದ್ದರೂ ಕರ್ಣನ್ ಅವರು ನ್ಯಾಯಮೂರ್ತಿಗಳಾದ ಪರಿಯನ್ನು ಸಂಶೋಧನೆ ಮಾಡಿವೆ. ನ್ಯಾಯಮೂರ್ತಿ ಬಾಲಕೃಷ್ಣ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದಾಗ ಅವರ ನೇತೃತ್ವದ ಕೊಲೀಜಿಯಂ ಇವರನ್ನು ಆಯ್ಕೆ ಮಾಡಿದ್ದಿತಂತೆ ಮತ್ತು ತಮಿಳುನಾಡಿನ ಅಂದಿನ ಮುಖ್ಯ ನ್ಯಾಯಾಧೀಶರು ನಂತರ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದರಂತೆ. ಇದಕ್ಕೂ ನ್ಯಾಯಮೂರ್ತಿ ಕರ್ಣನ್ ಅವರನ್ನು ದಸ್ತಗಿರಿ ಮಾಡಬೇಕೆಂಬ ಆಜ್ಞೆಗೂ ಸುತರಾಂ ಸಂಬಂಧವಿಲ್ಲವೆಂದು ಹೇಳಲಾಗಿದೆ. ಅವರ ದಸ್ತಗಿರಿಗಿಂತಲೂ ಅವರು ಎತ್ತಿದ ಪ್ರಶ್ನೆಗಳು ಹೆಚ್ಚು ಪ್ರಸ್ತುತ. ಅವಕ್ಕೆ ಎಂತಹ ಸಮಜಾಯಿಷಿ ನೀಡಲಾಗುತ್ತದೋ ತಿಳಿಯದು. ಎಲ್ಲಾ ಕಾಲಗರ್ಭದಲ್ಲಿ ಅಡಗಿದೆ.

✶ ✶ ✶

ಜೂನ್ ೧೩ರಂದು ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ (ತಿದ್ದುಪಡಿ) ವಿಧೇಯಕ, ೨೦೧೭, ರಾಜ್ಯದ ಶಾಸನಸಭೆಯಲ್ಲಿ ಮಂಡನೆಯಾಯಿತು. ಆರೋಗ್ಯ ಸಚಿವ ಶ್ರೀ. ರಮೇಶಕುಮಾರ್ ಅದನ್ನು ಮಂಡಿಸಿದ್ದಾರೆ. ೧೫ರಂದು ಚರ್ಚೆ ನಡೆದು ಅಂದೇ ಅದು ಅಂಗೀಕಾರದ ಮುದ್ರೆ ಪಡೆಯುತ್ತದೆಂಬ ನಿರೀಕ್ಷೆ ಇತ್ತು. ಶಾಸನದ ಸಾಧಕ–ಬಾಧಕಗಳ ಬಗ್ಗೆ ವಿಭಿನ್ನ ಅಭಿಪ್ರಾಯಗಳು ವ್ಯಕ್ತವಾಗಿವೆ. ಅದು ಸಹಜ ಸಹ, ಏಕೆಂದರೆ ವಿಧೇಯಕದ ಕೆಲವು ಅಂಶಗಳು ಅನೇಕರಿಗೆ ಒಪ್ಪಿಗೆಯಾಗಿಲ್ಲ; ಅವನ್ನು ಯಾವ ಕಾರಣಕ್ಕೂ ಕೈಬಿಡಕೂಡದೆಂದು ಇನ್ನು ಕೆಲವರ ಆಗ್ರಹ. ಪ್ರಶ್ನಾರ್ಹವಾಗಿ ನಡೆದುಕೊಳ್ಳುವ ಖಾಸಗಿ ಆಸ್ಪತ್ರೆಗಳಿಗೆ ನಮ್ಮಲ್ಲಿ ಕೊರತೆ ಇಲ್ಲ. ರೋಗಿಗಳಿಗೆ ಮತ್ತು ಅವರ ಸಂಬಂಧಿಕರಿಗೆ ಕೆಲವೇಳೆ ಉಂಟಾಗುವ ಕಿರುಕುಳವು ಬೇರೆ ಬೇರೆ ಪ್ರಕಾರಗಳದ್ದು. ವಿಧೇಯಕವು ಅವನ್ನು ನಿವಾರಿಸುತ್ತದೆಯೇ ಎಂಬುದು ಚರ್ಚೆಯ ವಿಷಯ. ಪೂರ್ಣಪ್ರಮಾಣದಲ್ಲಿ ಪರಿಣಾಮಕಾರಿ ಆಗದಿದ್ದರೂ ಇಂಥದೊಂದು ಕಾಯಿದೆಯ ಅವಶ್ಯಕತೆ ಖಂಡಿತಕ್ಕೂ ಇದೆಯೆಂಬುದು ಒಂದು ಅಭಿಮತ. ರೋಗಿಗಳು ಮತ್ತು ಅವರ ಸಂಬಂಧಿಕರು ಬಾಣಲೆಯಿಂದ ಬೆಂಕಿಗೆ ಬೀಳುವ ಸಂಭವವಿದೆ ಎಂದು ಇನ್ನೊಂದು ಗುಂಪಿನ ಅಭಿಮತ. ಸರ್ಕಾರಿ ಆಸ್ಪತ್ರೆಗಳು ಇಂದಿಗಿಂತಲೂ ಹೆಚ್ಚು ಕಳಪೆಯಾಗಿಬಿಡುತ್ತವೆಂಬ ಆತಂಕವೂ ವ್ಯಕ್ತವಾಗಿದೆ. ನಗರಕೇಂದ್ರಿತವಲ್ಲದ ಸಣ್ಣ ಪ್ರಮಾಣದ ಖಾಸಗಿ ಆಸ್ಪತ್ರೆಗಳು ಸಾವಧಾನವಾಗಿ ಸೇವೆ ಸಲ್ಲಿಸಲು ಅಡೆತಡೆಗಳು ವಿಪರೀತವಾಗಿ ಕಡೆಗೆ ಅವು ಮುಚ್ಚಿಹೋಗುವ ಸಾಧ್ಯತೆ ಇದೆ, ಅಧಿಕಾರಿಗಳು ಭ್ರಷ್ಟತನಕ್ಕೆ ಇಳಿಯಲು ಈಗಿಗಿಂತಲೂ ಹೆಚ್ಚು ಅವಕಾಶವಿರುತ್ತದೆ, ಸರ್ಕಾರಿ ಆಸ್ಪತ್ರೆಗಳು ಸಹ ರೋಗಿಗಳಿಗೆ ಮುಕ್ತವಾಗಿ ದೊರೆಯದಾಗಬಹುದು, ಇತ್ಯಾದಿ ಆತಂಕಗಳನ್ನು ವಿವಿಧ ವಲಯಗಳು ಗುರುತಿಸಿವೆ. ಕ್ಷಮಾರ್ಹವಲ್ಲದ ವ್ಯವಹಾರಗಳು ಅನೇಕ ಖಾಸಗಿ ಆಸ್ಪತ್ರೆಗಳಲ್ಲಿ ಜಾರಿಯಲ್ಲಿರುವುದಂತೂ ಅನುಭವಸಿದ್ಧವಾಗಿದೆ. ಕಾರ್ಪೊರೇಟ್ ಆಸ್ಪತ್ರೆಗಳೂ ಸೇರಿದಂತೆ ಖಾಸಗಿವಲಯದ ಆಸ್ಪತ್ರೆಗಳು ಸದರಿ ಶಾಸನಕ್ಕೆ ಹೇಗೆ

**(೬ನೇ ಪುಟಕ್ಕೆ )**



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೮ ಸಂಚಿಕೆ-೧೨ ಜುಲೈ ೨೦೧೭

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೯೧೧೧, ೨೨೧೬೯೧೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಜನಮನದ ಮಾತು ಕೇಳುವವರು ರಾಷ್ಟ್ರಾಧ್ಯಕ್ಷರಾಗಬೇಕು

**ಭಾ**ರತದ ರಾಷ್ಟ್ರಾಧ್ಯಕ್ಷರ ಚುನಾವಣೆ ಘೋಷಣೆಯಾಗಿದೆ. ಬಿ.ಜೆ.ಪಿ. ನಾಯಕತ್ವದ ಎನ್‌ಡಿಎ ಕೂಟದಿಂದ ರಾಮನಾಥ ಕೋವಿಂದ್ ಅವರನ್ನು ಅಭ್ಯರ್ಥಿಯಾಗಿ ಘೋಷಿಸಲಾಗಿದೆ. ಈ ಹೆಸರನ್ನು ಯಾರೂ ನಿರೀಕ್ಷಿಸಿರಲಿಲ್ಲ. ಪ್ರಧಾನಿ ಮೋದಿಯವರು, ಬಿ.ಜೆ.ಪಿ. ಅಧ್ಯಕ್ಷ ಅಮಿತ್ ಷಾ ಅವರು ಸರ್ವಸಮ್ಮತ ಅಭ್ಯರ್ಥಿಗಾಗಿ ವಿರೋಧ ಪಕ್ಷಗಳ ಅಭಿಪ್ರಾಯ ಕೇಳಿದರು. ರಾಷ್ಟ್ರಾಧ್ಯಕ್ಷರ ಸ್ಥಾನಕ್ಕೆ ಸಹಮತದ ಅಭ್ಯರ್ಥಿಯನ್ನು ಆಯ್ಕೆ ಮಾಡುವುದು ಸ್ವಾಗತಾರ್ಹ ನಿಲುವೇ ಆಗಿತ್ತು. ಆದರೆ ಸರ್ವಪಕ್ಷಗಳಿಗೆ ಒಪ್ಪಿಗೆಯಾಗುವಂಥ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಿ ಅಭಿಪ್ರಾಯ ಸಂಗ್ರಹಕ್ಕೆ ಮುಂದಾಗಿದ್ದರೆ, ಅಥವಾ ವಿರೋಧ ಪಕ್ಷಗಳನ್ನು ಅಭ್ಯರ್ಥಿಯ ಕುರಿತು ಕೇಳಿದ್ದರೆ ಅದು ಪ್ರಾಮಾಣಿಕ ನಡೆಯಾಗಿರುತ್ತಿತ್ತು. ಅಂಥ ಯಾವ ಸೂಚನೆಗಳೂ ಇಲ್ಲದೆ ನೆಪಮಾತ್ರಕ್ಕೆ ನಡೆಸಿದ ಪ್ರಹಸನ ಒಂದು ಸುದ್ದಿಯಾಗಿ ಹೋಯಿತು. ಈಗ ರಾಮನಾಥ ಕೋವಿಂದ್ ಅವರನ್ನು ಮಿತ್ರ ಪಕ್ಷಗಳನ್ನೂ ಕೇಳದೆ ತಮ್ಮ ಅಭ್ಯರ್ಥಿ ಎಂದು ಕಣಕ್ಕಿಳಿಸಿದ್ದು ಸರ್ವಸಮ್ಮತ ಅಭ್ಯರ್ಥಿಗಾಗಿ ನಡೆಸಿದ ಪ್ರಯತ್ನ ಒಂದು ಪ್ರಹಸನ ಮತ್ತು ರಾಜಕೀಯ ನಡೆ ಎಂಬುದು ಸಾಬೀತಾಗಿದೆ. ಬಿ.ಜೆ.ಪಿ. ಹಾಗೂ ಮಿತ್ರ ಪಕ್ಷಗಳಿಗೆ ಸಂಸತ್‌ನಲ್ಲಿ ಹಾಗೂ ಹಲವಾರು ರಾಜ್ಯಗಳ ವಿಧಾನ ಸಭೆಗಳಲ್ಲಿ ಬಹುಮತವಿರುವುದರಿಂದ, ಕೆಲವು ಪ್ರಾದೇಶಿಕ ಪಕ್ಷಗಳು ಬೆಂಬಲ ಘೋಷಿಸುವುದರಿಂದ ರಾಮನಾಥ್ ಕೋವಿಂದ್ ಅವರು ಸಲೀಸಾಗಿ ಗೆಲ್ಲಬಹುದು. ರಾಮನಾಥ್ ಅವರು ದಲಿತ ಕುಟುಂಬದಿಂದ ಬಂದವರು, ಕಳಂಕರಹಿತ ವ್ಯಕ್ತಿ, ಹೈಕೋರ್ಟ್, ಸುಪ್ರೀಂ ಕೋರ್ಟ್‌ಗಳಲ್ಲಿ ನ್ಯಾಯವಾದಿಗಳಾಗಿದ್ದು ಸಂವಿಧಾನದ ತಿಳುವಳಿಕೆ ಉಳ್ಳವರೂ ಆಗಿದ್ದಾರೆ. ವೈಯಕ್ತಿಕವಾಗಿ ಅವರ ಬಗ್ಗೆ ಯಾವುದೇ ನಿಲುವು ತಳೆದರೆ ಪೂರ್ವಗ್ರಹವಾಗುತ್ತದೆ. ಆದರೆ ಭಾರತ ಎದುರಿಸುತ್ತಿರುವ ಇಂದಿನ ಸಂಕಷ್ಟದ ಸಂದರ್ಭದಲ್ಲಿ ಒಂದು ಪಕ್ಷದ ಕಾರ್ಯಕರ್ತನಾಗಿ ಬೆಳೆದ ಅವರು ತಮ್ಮ ಪಕ್ಷದ ಆಡಳಿತದಲ್ಲಿ ಸಂಭವಿಸಬಹುದಾದ ಸಂವಿಧಾನಕ್ಕೆ ಚ್ಯುತಿ ತರುವ ನಡೆಗಳನ್ನು ಆಕ್ಷೇಪಿಸಬಲ್ಲರೇ, ನಿಯಂತ್ರಿಸಬಲ್ಲರೇ ಎನ್ನುವುದು ಮುಖ್ಯ.

ಭಾರತಕ್ಕೀಗ ಮನದ ಮಾತು (ಮನ್‌ಕೀ ಬಾತ್) ಕೇಳುವ ರಾಷ್ಟ್ರಾಧ್ಯಕ್ಷನಿಗಿಂತ ಜನದ ಮಾತು ಕೇಳುವ ರಾಷ್ಟ್ರಾಧ್ಯಕ್ಷನ ಅವಶ್ಯಕತೆ ಹೆಚ್ಚಿದೆ. ಜನರ ಎದೆಗೆ ಕಿವಿ ತಗಲಿಸುವ ಶಕ್ತಿ ಈ ರಾಷ್ಟ್ರಾಧ್ಯಕ್ಷ ಅಭ್ಯರ್ಥಿ ರಾಮನಾಥ್ ಕೋವಿಂದ್ ಅವರಿಗೆ ಇದೆಯೇ ಎನ್ನುವುದು ಈ ಚುನಾವಣೆಯ ವಿಷಯವಾಗಬೇಕು. ಇವರ ಆಯ್ಕೆಯಲ್ಲಿ ಖಂಡಿತ ಆರ್.ಎಸ್.ಎಸ್.ನ ಪಾತ್ರವಿರುತ್ತದೆ. ಪಕ್ಷಾತೀತ ರಾಷ್ಟ್ರಾಧ್ಯಕ್ಷರಾಗಿದ್ದ ವಿಜ್ಞಾನಿ ಡಾ॥ ಅಬ್ದುಲ್ ಕಲಾಂ ಕುರಿತು ರಾಷ್ಟ್ರೀಯ ಸ್ವಯಂಸೇವಕ ಸಂಘದ ನಾಯಕರಿಗೆ ಅತೃಪ್ತಿ ಇತ್ತು. ಆದರೆ ಅಂದು ಅವರಿಗೆ ಅದು ಅನಿವಾರ್ಯ ಆಯ್ಕೆಯಾಗಿತ್ತು ಮತ್ತು ಅಂದಿನ ಸಂದರ್ಭದಲ್ಲಿ ಅದು ಅವರ ರಾಜಕೀಯ ನಡೆಯೂ ಆಗಿತ್ತು. ಸ್ವತಂತ್ರ ಭಾರತದ ಇತಿಹಾಸದಲ್ಲಿ ರಾಷ್ಟ್ರಾಧ್ಯಕ್ಷರ ಆಯ್ಕೆ ಯಾವತ್ತೂ ಆಳುವ ಪಕ್ಷದ ಅಧಿಕಾರಸ್ಥರ ಅಭಿಲಾಷೆಗೆ ಪೂರಕವಾಗಿಯೇ ನಡೆದಿದೆ. ೧೯೬೯ರಲ್ಲಿ ಕಾಂಗ್ರೆಸ್ ಪಕ್ಷದ ಆಂತರಿಕ ಸಂಘರ್ಷದಲ್ಲಿ ನೀಲಂ ಸಂಜೀವರೆಡ್ಡಿಯವರು ಆಡಳಿತಾರೂಢ ಕಾಂಗ್ರೆಸ್ ಪಕ್ಷದ ಅಧಿಕೃತ ಅಭ್ಯರ್ಥಿಯಾಗಿದ್ದರೂ, ಕಾಂಗ್ರೆಸ್ ಪಕ್ಷಕ್ಕೆ ಬಹುಮತವಿದ್ದರೂ, ಪ್ರಧಾನಿ ಇಂದಿರಾ ಗಾಂಧಿಯವರು ವಿ. ವಿ. ಗಿರಿಯವರನ್ನು ಸ್ವತಂತ್ರ ಅಭ್ಯರ್ಥಿಯಾಗಿ ನಿಲ್ಲಿಸಿ ಗೆಲ್ಲಿಸಿದರು. ಅಲ್ಲಿಗೆ ಪಕ್ಷಕ್ಕಿಂತ ಅಧಿಕಾರಸ್ಥರ ಅಭಿಪ್ರಾಯ ಮುಖ್ಯ ಎಂಬುದು, ಸಾಬೀತಾಯಿತು. ಈಗ ಬಿ.ಜೆ.ಪಿ. ಹಾಗೂ ಮಿತ್ರಕೂಟಕ್ಕಿಂತ ಆರ್.ಎಸ್.ಎಸ್.ನ ಹಿಡಿತ ಪ್ರಬಲವಾಗಿರುವುದರಿಂದ, ಬಿ.ಜೆ.ಪಿ. ಆರ್.ಎಸ್.ಎಸ್.ನ ಒಂದು ಸಾಮೂಹಿಕ ಸಂಘಟನೆ ಆಗಿದ್ದರಿಂದ, ಇಂದಿನ ರಾಷ್ಟ್ರಪತಿ ಅಭ್ಯರ್ಥಿಯ ಆಯ್ಕೆಯ ಹಿಂದೆ ರಾಜಕೀಯೇತರ ಹಿತಾಸಕ್ತಿ ಪ್ರಮುಖವಾಗಿದೆ. ಇಂದು ಅವರಿಗೆ ಸಂವಿಧಾನನಿಷ್ಠ ರಾಷ್ಟ್ರಾಧ್ಯಕ್ಷರಿಗಿಂತ ಆಳುವ ಪಕ್ಷಕ್ಕೆ ನಿಷ್ಠನಾಗಿರುವ ಪರೋಕ್ಷವಾಗಿ ಆರ್.ಎಸ್.ಎಸ್.ಗೆ ನಿಷ್ಠನಾಗಿರುವ ರಾಷ್ಟ್ರಾಧ್ಯಕ್ಷನ ಅವಶ್ಯಕತೆ ಇದೆ. ಇಂಥ ಸಂದರ್ಭದಲ್ಲಿ ಸರ್ವಸಮ್ಮತ ಅಭ್ಯರ್ಥಿಯ ಹುಡುಕಾಟ ಎನ್ನುವುದೂ ಒಂದು ಮುಖವಾಡದ ನಡೆಯಾಗಿತ್ತು.

ರಾಷ್ಟ್ರಾಧ್ಯಕ್ಷರ ಚುನಾವಣೆಗಳ ಇತಿಹಾಸ ಗಮನಿಸಿದರೆ ಆ ಸ್ಥಾನಕ್ಕೆ 'ರಬ್ಬರ್ ಸ್ಟ್ಯಾಂಪ್' ಎಂಬ ಕಳಂಕ ತಗುಲಿದೆ. ಆಳುವ ಪಕ್ಷದ 'ಕೈಗೊಂಬೆ' ಎಂಬ ಆರೋಪ ಹಲವಾರು ಸಂದರ್ಭದಲ್ಲಿ ಸಾಬೀತಾಗಿದೆ. ಇದಕ್ಕೆ ರಾಷ್ಟ್ರಾಧ್ಯಕ್ಷರು ಮಾತ್ರ ಕಾರಣರಲ್ಲ, ನಮ್ಮ ಸಂವಿಧಾನವೂ ಕಾರಣವಾಗಿದೆ. ನಮ್ಮ ಸಂವಿಧಾನದ ೪೨ ಮತ್ತು ೪೪ನೇ ತಿದ್ದುಪಡಿಗಳು ರಾಷ್ಟ್ರಾಧ್ಯಕ್ಷರ ಕೈಗಳನ್ನು ಕಟ್ಟಿಹಾಕಿವೆ. ರಾಷ್ಟ್ರಾಧ್ಯಕ್ಷರು ಸರಕಾರದ, ಸಂವಿಧಾನದ ಮುಖ್ಯಸ್ಥರಾಗಿದ್ದರೂ, ಎಲ್ಲ ಕಾನೂನುಗಳು ಅವರ ಅಂಕಿತದಿಂದಲೇ ಹೊರಬಂದರೂ ಅವರು ೧೯೭೬ರ ೪೨ನೇ ಸಂವಿಧಾನ ತಿದ್ದುಪಡಿಯಂತೆ ಪ್ರಧಾನಮಂತ್ರಿ ನೇತೃತ್ವದ ಮಂತ್ರಿಮಂಡಲದ ಸಲಹೆಯಂತೆ ನಡೆದುಕೊಳ್ಳಬೇಕು. ೧೯೭೮ರಲ್ಲಿ ಸಂವಿಧಾನಕ್ಕೆ ತಂದ ೪೪ನೇ ತಿದ್ದುಪಡಿ ಪ್ರಕಾರ ಮಂತ್ರಿಮಂಡಲದ ಯಾವುದೇ ಮಸೂದೆಯನ್ನು ಮರುಪರಿಶೀಲನೆಗೆ ಕಳಿಸಬಹುದು. ಆದರೆ ಅದೇ ಮಸೂದೆ ಪುನರ್ ಪರಿಶೀಲನೆಯ ಹೆಸರಲ್ಲಿ ಬಂದರೆ ಅದಕ್ಕೆ ಪೂರಕವಾಗಿ ರಾಷ್ಟ್ರಾಧ್ಯಕ್ಷರು ನಡೆಯುವುದನ್ನು ಕಡ್ಡಾಯ ಮಾಡಲಾಯಿತು. ಹೆಚ್ಚೆಂದರೆ ಅವರು ಅಂಕಿತ ಹಾಕಲು ವಿಳಂಬ ಮಾಡಬಹುದು. ೧೯೭೬ರಲ್ಲಿ ಮಾಡಲಾದ ೪೨ನೇ ತಿದ್ದುಪಡಿ ಕಾಂಗ್ರೆಸ್ ಸರಕಾರದಲ್ಲಾದರೆ, ೧೯೭೮ರಲ್ಲಿ ಆದ ೪೪ನೇ ತಿದ್ದುಪಡಿ ಜನತಾಪಕ್ಷದ ಸರಕಾರದಲ್ಲಿ

ಆಗಿದ್ದು. ಕಾಂಗ್ರೆಸ್ ಪಕ್ಷದ ಬಹುಮತದ ಸರಕಾರವಿದ್ದಾಗ ಮಾಡಲಾದ ೪೨ನೇ ಸಂವಿಧಾನ ತಿದ್ದುಪಡಿಯಲ್ಲಿ ಹಲವಾರು ವಿಷಯಗಳಿವೆ. ಅದರಲ್ಲಿ ಮೊದಲನೆಯದಾಗಿ ನಮ್ಮ ಸಂವಿಧಾನದ ಪ್ರಸ್ತಾವನೆಯಲ್ಲಿ 'ಸಮಾಜವಾದಿ, ಜಾತ್ಯತೀತ ಮತ್ತು ಸಮಗ್ರತೆ' ಎಂಬ ಪದಗಳನ್ನು ಸೇರಿಸಲಾಯಿತು. ಇಂದು ದೇಶದ ಆಡಳಿತ ವ್ಯವಸ್ಥೆಯಲ್ಲಿ 'ಸಮಾಜವಾದಿ' ಪರಿಕಲ್ಪನೆ ನಾಶವಾಗಿದೆ. ಕಾರ್ಪೊರೇಟ್ ಕಂಪನಿಗಳು ನಮ್ಮ ಸಂಸತ್ತನ್ನೇ ನಿಯಂತ್ರಿಸಿ ಸಾಮಾಜಿಕ ಸಂಪತ್ತನ್ನು ಲೂಟಿ ಮಾಡುತ್ತಿವೆ. ಜಾತಿವಾದಿ, ಕೋಮುವಾದಿ ಶಕ್ತಿಗಳು ಗ್ರಾಮ ಪಂಚಾಯಿತಿಯಿಂದ ಪಾರ್ಲಿಮೆಂಟ್ ವರೆಗೆ ತಮ್ಮ ಹಿಡಿತವನ್ನು ಸಾಧಿಸಿವೆ. ಸಮಾಜದ ಸರ್ವ ರಂಗಗಳಲ್ಲಿ 'ಜಾತ್ಯತೀತ'ತೆ ನಗೆಪಾಟಲಿಗೀಡಾಗಿ ತನ್ನ ಮೌಲ್ಯವನ್ನು ಕಳೆದುಕೊಂಡಿದೆ. ಒಂದು ದೇಶ, ಒಂದು ಧರ್ಮ, ಒಂದು ಭಾಷೆ ಘೋಷಣೆಗಳು ಬರುತ್ತಿವೆ. ಭಾರತ ಒಂದು ಒಕ್ಕೂಟ ವ್ಯವಸ್ಥೆಯಾಗಿ ಬಹುಭಾಷೆ, ಬಹುಸಂಸ್ಕೃತಿ, ವಿವಿಧ ಧರ್ಮಗಳನ್ನು ಗೌರವಿಸಿ ಸಂವಿಧಾನದ ಅನುಚ್ಛೇದ ೫೨ರ ಪ್ರಕಾರ ಧಾರ್ಮಿಕ ಸ್ವಾತಂತ್ರ್ಯದ ಆಶಯಗಳನ್ನು ಎತ್ತಿಹಿಡಿಯದಿದ್ದರೆ, ವಿವಿಧ ರಾಜ್ಯಗಳ ಹಿತಾಸಕ್ತಿಯಲ್ಲಿ ಸಂವಿಧಾನದ ೨೪೯ನೇ ಅನುಚ್ಛೇದ ಬಳಸಿ ಮೂಗುತೂರಿಸಿದರೆ, ಅನುಚ್ಛೇದ ೩೫೬ ಬಳಸಿ ರಾಜ್ಯ ಸರಕಾರ ಪತನಗೊಳಿಸಿದರೆ, ವಿರೋಧ ಪಕ್ಷಗಳ ಆಡಳಿತವಿರುವ ರಾಜ್ಯಗಳಿಗೆ ತಾರತಮ್ಯ ತೋರಿದರೆ ದೇಶದ ಸಮಗ್ರತೆ ನಾಶವಾಗುತ್ತದೆ. ಆದರೆ ಇಂದಿನ ದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ ವಲಯದ ಬೆಳವಣಿಗೆಗಳನ್ನು ನೋಡಿದರೆ ಸಂವಿಧಾನದ ಪ್ರಸ್ತಾವನೆಯಲ್ಲಿರುವ 'ಸಮಾಜವಾದಿ, ಜಾತ್ಯತೀತ, ಸಮಗ್ರತೆ' ಎಂಬ ಆಶಯಗಳು ಕೇವಲ ಪದಗಳಾಗಿ ಉಳಿದಿವೆ. ಈಗಿರುವ ಕೇಂದ್ರ ಸರಕಾರ ತನ್ನ ಬಹುಮತದ ಅಹಂಕಾರದಿಂದ ಈ ಮೂರು ಪದಗಳನ್ನೂ ಸಂವಿಧಾನದಿಂದ ತೆಗೆದುಹಾಕುವ ಅಪಾಯಗಳಿವೆ. 'ಸಮಾಜವಾದಿ, ಜಾತ್ಯತೀತ, ಸಮಗ್ರತೆ' ಎಂಬ ಪರಿಕಲ್ಪನೆಗಳೇ ನಮ್ಮ ದೇಶದ ಒಕ್ಕೂಟ ವ್ಯವಸ್ಥೆಯ ಸ್ತಂಭಗಳಾಗಿವೆ. ಮಾತ್ರವಲ್ಲ, ನಮ್ಮ ಸಂವಿಧಾನದ ಶ್ರೇಷ್ಠತೆಗೆ ಕಾರಣವಾಗಿವೆ. ಸಂವಿಧಾನದ ಆಶಯಗಳಿಗೆ, ಸಂವಿಧಾನಕ್ಕೆ ಅಪಾಯವಾಗುವ ಸಂದರ್ಭದಲ್ಲಿ ರಾಷ್ಟ್ರಾಧ್ಯಕ್ಷರ ಪಾತ್ರ ಮಹತ್ವದ್ದು. ಸಂವಿಧಾನವನ್ನು ರಕ್ಷಿಸಲು ಸಂವಿಧಾನಾತ್ಮಕ ಬಲ ರಾಷ್ಟ್ರಾಧ್ಯಕ್ಷರಿಗೆ ಇಲ್ಲದೇ ಇದ್ದರೂ ಭಾರತದಲ್ಲಿ ಜನ ಆ ಸ್ಥಾನಕ್ಕೆ ಗೌರವ ಕೊಡುತ್ತಾರೆ, ಭಾವನಾತ್ಮಕವಾಗಿ ಸ್ಪಂದಿಸುತ್ತಾರೆ. ಯಾರೇ ರಾಷ್ಟ್ರಾಧ್ಯಕ್ಷರಾದರೂ ತಮ್ಮ ಪಕ್ಷದ ಸಂಬಂಧಗಳನ್ನು ತೊರೆದು, ಆ ಸ್ಥಾನದಲ್ಲಿ ಕುಳಿತು ಜನತೆಯ ಧ್ವನಿಗೆ ಕಿವಿಗೊಡಬೇಕು. ಸಂವಿಧಾನದ ರಕ್ಷಕನಾಗಿ ತನ್ಮೂಲಕ ದೇಶದ, ಜನತೆಯ ಪಾಲಕನಾಗಿ ಕೆಲಸ ಮಾಡಬೇಕಾಗುತ್ತದೆ. ಆ ಕಾರಣಕ್ಕೆ ಹಿಂದಿನ ಹದಿನಾಲ್ಕು ರಾಷ್ಟ್ರಾಧ್ಯಕ್ಷರಿಗಿಂತಲೂ ಇಂದು ಮತ್ತು ಮುಂದೆ ಬರುವ ರಾಷ್ಟ್ರಾಧ್ಯಕ್ಷರ ಜವಾಬ್ದಾರಿ ದೊಡ್ಡದಿದೆ. ಯಾಕೆಂದರೆ ಇಂದು ರಾಜನೀತಿಶಾಸ್ತ್ರವಿಲ್ಲದ ರಾಜಕಾರಣ ದೇಶದಲ್ಲಿ ತಾಂಡವವಾಡುತ್ತಿದೆ. ತಮ್ಮ ಸಂವಿಧಾನಾತ್ಮಕ ಮಿತಿಯಲ್ಲಿಯೂ ದೇಶದ ಜನತೆಯನ್ನು ಜೊತೆಗಿರಿಸಿಕೊಳ್ಳುವ ರಾಷ್ಟ್ರಾಧ್ಯಕ್ಷರು ಬರಲಿ ಎಂದು ಆಶಿಸೋಣ.

## ಗೋಸಂರಕ್ಷಣೆಯ ಹೆಸರಿನ ಹಿಂದೆ

**ಭಾ**ರತದ ರಾಜಕೀಯ ರಂಗದಲ್ಲಿ ಈಗ ಗೋರಕ್ಷಣೆ ಬಹುಮುಖ್ಯವಾದ ಪ್ರಶ್ನೆಯಾಗಿಬಿಟ್ಟಿದೆ. ಮನುಷ್ಯರಿಗಿಂತ ಗೋವೇ ವಾಸಿಯೇನೋ ಎನ್ನುವ ಪರಿಸ್ಥಿತಿ ಉಂಟಾಗಿದೆ. ಮೋದಿ ಸರಕಾರ ಅರ್ಥಾತ್ ಸಂಬಂಧ ಇಲ್ಲದ ಕಾಯಿದೆ ಒಂದರ ಅಡಿಯಲ್ಲಿ ಜಾನುವಾರು ಮಾರುಕಟ್ಟೆಯಲ್ಲಿ ದನಗಳ ಮಾರಾಟ ಕುರಿತು ಹೇರಿರುವ ನಿರ್ಬಂಧಗಳು ದೇಶಾದ್ಯಂತ ಪ್ರತಿರೋಧವನ್ನು ತಂದಿವೆ. ಗೋಹತ್ಯೆಯನ್ನು ತಡೆಯುವುದು, ಕಸಾಯಿಖಾನೆಗಳಿಗೆ ದನದ ಮಾರಾಟವನ್ನು ನಿಷೇಧಿಸುವುದು, ಗೋಮಾಂಸ ಭಕ್ಷಣೆ ವರ್ಜಿಸುವಂತೆ ಮಾಡುವುದು ಕೇಂದ್ರದ ನಿಯಮಾವಳಿಯ ಗುರಿ. ಗೋಹತ್ಯೆಯನ್ನು ಸಂಪೂರ್ಣವಾಗಿ ನಿಷೇಧಿಸುವಂತೆ ಸರಕಾರವನ್ನು ಒತ್ತಾಯಪಡಿಸುತ್ತಿರುವುದು ಇದು ಮೊದಲ ಬಾರಿಯೇನಲ್ಲ. ಹಿಂದುತ್ವವಾದಿಗಳ ಬೇಡಿಕೆ ಯಾವತ್ತಿನಿಂದಲೂ ಇದೆ. ಅರವತ್ತರ ದಶಕದಲ್ಲಿ ಗಾಂಧಿವಾದಿ, ಭೂದಾನ ಚಳವಳಿಯ ನಾಯಕ ವಿನೋಬಾ ಭಾವೆ ಕೂಡ ಗೋಹತ್ಯೆ ನಿಷೇಧ ಒತ್ತಾಯಿಸಿದ್ದರು. ಆರೆಸ್ಸೆಸ್ ಮತ್ತು ಜನಸಂಘಗಳು (ಈಗ ಭಾಜಪ ಆಗಿದೆ), ಹಿಂದೂ ಸಂಘಟನೆಗಳು ೧೯೬೬ರಲ್ಲಿ 'ಗೋಹತ್ಯೆ ವಿರೋಧ' ಚಳವಳಿ ಪ್ರಾರಂಭಿಸಿದ್ದವು. ಇದು ಮತೀಯ ಗಲಭೆಗಳನ್ನು ಉದ್ರೇಕಿಸಿತ್ತು. ೧೯೬೮ರಲ್ಲಿ ನಡೆದ ಮತೀಯ ಗಲಭೆಗಳಿಗೆ ಮುಸ್ಲಿಂ ಹುಡುಗನೊಬ್ಬ ಹಸುವನ್ನು ಕೊಂದನೆಂಬ ಸುಳ್ಳು ಸುದ್ದಿಯೇ ಕಾರಣವಾಯಿತು. ಗೋರಕ್ಷಣೆಯ ಹೆಸರಿನಲ್ಲಿ ಈ ದೇಶದಲ್ಲಿ ರಕ್ತದ ಹೊಳೆಯೇ ಹರಿದಿದೆ. ಈಗೇನೂ ಕಡಿಮೆಯಿಲ್ಲ, ಗೋರಕ್ಷಣೆಯ ಹೆಸರಿನಲ್ಲಿ ದೇಶದಲ್ಲಿ ಹಲವು ಕೊಲೆಗಳು ನಡೆದಿವೆ. ಅವರೆಲ್ಲ ಮುಸ್ಲಿಮರೇ ಆಗಿದ್ದಾರೆ. ಗೋರಕ್ಷಣೆ ಹಿಂದುತ್ವವಾದಿಗಳಿಗೆ ಒಂದು ದಂಧೆಯಾಗಿದೆ.

ಭಾಜಪ ಸರಕಾರ ಕೇಂದ್ರದಲ್ಲಿ ಮೂರು ವರ್ಷ ಆಡಳಿತ ಮುಗಿಸುತ್ತಿದ್ದ ಹಾಗೆಯೇ ಗೋವಿನ ಪ್ರಶ್ನೆ ಭುಗಿಲೆದ್ದಿದೆ. ಇದಕ್ಕೆ ಎರಡು ಕಾರಣಗಳು. ಮೊದಲನೆಯದು, ಅಲ್ಪಸಂಖ್ಯಾತರಾದ ಮುಸಲ್ಮಾನರನ್ನು ಹತ್ತಿಕ್ಕುವುದು; ಎರಡನೆಯದು, ದೇಶ ಎದುರಿಸುತ್ತಿರುವ ಸಮಸ್ಯೆಗಳಿಂದ ಜನರ ಗಮನವನ್ನು ಬೇರೆಡೆಗೆ ಹರಿಸುವುದು. ಚುನಾವಣೆಗಳ ಕಾಲದಲ್ಲಿ ಜನರಿಗೆ ನೀಡಲಾಗಿದ್ದ ಭರವಸೆಗಳನ್ನು ಈಡೇರಿಸಲಾಗದೆ ಇರುವುದರಿಂದ ಹಿಂದುತ್ವವಾದಿಗಳು ಹೂಡಿರುವ ತಂತ್ರ ಇದು. ಕಸಾಯಿಖಾನೆಗಳನ್ನು ನಡೆಸುವವರು, ಮಾಂಸ ಮಾರಾಟ ಮಾಡುವವರು ಹೆಚ್ಚಾಗಿ ಮುಸಲ್ಮಾನರು. ಇವರು ಹಾಗೂ ದಲಿತರು ಪ್ರಮುಖವಾಗಿ ಅಗ್ಗದ ದರದಲ್ಲಿ ದೊರಕುವ ದನದ ಮಾಂಸವನ್ನು ಆಹಾರವಾಗಿ ಬಳಸುವವರು. ಚರ್ಮ ಹದಮಾಡುವ ಉದ್ಯಮದಲ್ಲಿ ತೊಡಗಿಕೊಂಡಿರುವವರು ಅಧಿಕವಾಗಿ ದಲಿತರು. ಸತ್ತ ದನದ ಚರ್ಮ ಸುಲಿದು


ತಿಂಗಳ ಪತ್ರಿಕೆ
ಹೊಸತು
ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ,
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳಿಧರ್
ವಿಜಯಾ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಒದಗಿಸುವವರು ಗ್ರಾಮಗಳಲ್ಲಿ ದಲಿತರೇ ಆಗಿರುತ್ತಾರೆ. ವಿದ್ವಾಂಸರ ಪ್ರಕಾರ ಹಿಂದೂಧರ್ಮದಲ್ಲಿ ಗೋಮಾಂಸ ಭಕ್ಷಣೆ ನಿಷಿದ್ಧವೇನಾಗಿರಲಿಲ್ಲ. ವೇದ, ಉಪನಿಷತ್ ಕಾಲಗಳಲ್ಲಿ ಯಜ್ಞಯಾಗಾದಿಗಳಲ್ಲಿ ಗೋಹತ್ಯೆ ಮಾಡುತ್ತಿದ್ದುದಕ್ಕೆ ಅನೇಕ ಪುರಾವೆಗಳಿಗೆ. ಶ್ರೇಷ್ಠರು ಎನಿಸಿಕೊಂಡಿದ್ದ ಬ್ರಾಹ್ಮಣರೂ ಕೂಡ ಒಂದು ಕಾಲದಲ್ಲಿ ಗೋಮಾಂಸ ಭಕ್ಷಕರಾಗಿದ್ದರು. ಅದರ ನಿಷೇಧವೆಲ್ಲ ಬಂದದ್ದು ಅನಂತರದ ಕಾಲದಲ್ಲಿ. ಈಗ ಅಲ್ಪಸಂಖ್ಯಾತರನ್ನು ಬಗ್ಗುಬಡಿಯಲು ಹಿಂದುತ್ವವಾದಿಗಳಿಗೆ ಅದು ಅಸ್ತ್ರವಾಗಿದೆ.

ಆಧುನಿಕ ಹಿಂದುಗಳಿಗೆ ಗೋವು ಪವಿತ್ರವಾಗಿದೆ. "ಗೋವು ಭಾರತಕ್ಕೆ ಸೀಮಿತವಾದ ಪ್ರಾಣಿಯೇನಲ್ಲ. ಜಗತ್ತಿನ ಅನೇಕ ದೇಶಗಳಲ್ಲಿ ಆಹಾರಕ್ಕಾಗಿ ದಿನನಿತ್ಯ ಸಹಸ್ರಾರು ಗೋವುಗಳು ಕಡಿಯಲ್ಪಡುತ್ತಿವೆ. ಯಾವ ಅಮೆರಿಕವನ್ನು 'ಧರ್ಮದ ರಕ್ಷಕ'ನೆಂದು ದಿವಂಗತ ಆರೆಸ್ಸೆಸ್ ಮುಖಂಡ ಗೊಲ್ವಾಲ್ಕರ್ ಅವರು ೧೯೬೦ರಲ್ಲಿ ಕರೆದಿದ್ದರೋ, ಅಂತಹ ಅಮೆರಿಕದಲ್ಲಿ ಗೋಮಾಂಸ ಜನರ ದೈನಂದಿನ ಆಹಾರದ ಒಂದು ಪ್ರಧಾನ ವಸ್ತು. ಆದರೆ ಭಾರತದಲ್ಲಿ ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು ಅದೇ ಗೋಮಾಂಸವನ್ನು ಭಕ್ಷಿಸಿದಾಗ ಆರೆಸ್ಸೆಸ್ ನಾಯಕರಿಗೆ ಮತ್ತು ಇತರ ಹಿಂದೂ ಮತಾಂಧರಿಗೆ ಎಲ್ಲಿಲ್ಲದ ಸಿಟ್ಟು ಬರುತ್ತದೆ" ಎಂಬುದಾಗಿ ವಿದ್ವಾಂಸ ಎಸ್. ಆರ್. ಭಟ್ ವಿದ್ವತ್ಪೂರ್ಣ ಲೇಖನವೊಂದರಲ್ಲಿ ಬರೆದಿದ್ದಾರೆ ಐವತ್ತು ವರ್ಷಗಳ ಹಿಂದೆಯೇ. ಅದೇ ಬಗೆಯಲ್ಲಿ ಪ್ರಖ್ಯಾತ ವಿಜ್ಞಾನ ಲೇಖಕ ನಾಗೇಶ ಹೆಗಡೆಯವರು ಪ್ರಕಟಿಸಿರುವ ಕಿರುಹೊತ್ತಿಗೆಯಲ್ಲಿ ಆರ್ಥಿಕವಾಗಿ, ಆಹಾರವಾಗಿ, ಔಷಧಿಯಾಗಿ, ಚರ್ಮೋದ್ಯಮದಲ್ಲಿ, ನಾನಾಬಗೆಯಲ್ಲಿ ದನದ ಬಹೂಪಯೋಗವನ್ನು ವಿವರಿಸಿದ್ದಾರೆ.

ಕಟ್ಟಾ ಧಾರ್ಮಿಕ ನಂಬಿಕೆಗಳಿಂದ ಗೋಹತ್ಯೆ ನಿಷೇಧವನ್ನು ಬಯಸುತ್ತಿರುವ ಹಿಂದುತ್ವವಾದಿಗಳು ರೈತರ ಮೇಲೆ ಅದರಿಂದಾಗುವ ಹೊರೆಯನ್ನು ಪರಿಗಣಿಸುವುದೇ ಇಲ್ಲ. ಈಗಾಗಲೇ ಸಾಲದ ಹೊರೆಯಿಂದ ಬಳಲುತ್ತಿರುವ, ತಾನು ಬೆಳೆದ ಬೆಳೆಗೆ ಸರಿಯಾದ ಬೆಲೆ ದೊರಕದೆ ಇರುವ, ಆತ್ಮಹತ್ಯೆಗೆ ಶರಣಾಗುತ್ತಿರುವ ರೈತ ಇನ್ನು ಮೇಲೆ ಗೊಡ್ಡು ದನಗಳನ್ನು ಸಾಕುವ ಹೊರೆಯನ್ನೂ ಹೊರಬೇಕಾಗುತ್ತದೆ. ರಾಸುಗಳನ್ನು ಮಾರಾಟ ಮಾಡಿಕೊಂಡು ಜೀವನ ನಿಭಾಯಿಸುತ್ತಿದ್ದ ರೈತ, ಧರ್ಮಾಂಧರ ಮೂರ್ಖತನದಿಂದ ಪರಿತಪಿಸಬೇಕಾಗಿ ಬಂದಿದೆ. ಈಗಾಗಲೇ ಮೋದಿ ಸರಕಾರ ವಿಧಿಸಿರುವ ನಿರ್ಬಂಧಗಳಿಗೆ ದೇಶಾದ್ಯಂತ ಭಾರಿ ಪ್ರತಿಭಟನೆ ಬಂದಿದೆ. ನೋಟು ರದ್ದತಿಯಿಂದಾಗಿ ಸಂಭವಿಸಿರುವ ಆರ್ಥಿಕ ಹಿನ್ನಡೆ, ಸರಕಾರದ ಹಲವು ನೀತಿಗಳ ವೈಫಲ್ಯ, ಉದ್ಯೋಗ ಸೃಷ್ಟಿಯ ಪೊಳ್ಳು ಭರವಸೆ ದೂರವಾಗಿ ಹೆಚ್ಚುತ್ತಿರುವ ನಿರುದ್ಯೋಗ, ಬೆಳೆಯುತ್ತಿರುವ ರೈತರ ಸಮಸ್ಯೆ, ಮೊದಲಾದವುಗಳಿಂದ ಜನರ ಗಮನವನ್ನು ವಿಮುಖಗೊಳಿಸುವ ಸರಕಾರದ ಪ್ರಯತ್ನ ಖಂಡಿತ ಫಲಿಸದು. ಸಂವಿಧಾನಬಾಹಿರ ಕ್ರಮಗಳನ್ನು ಜನ ಸಹಿಸರು. ಮೋದಿ ಸರಕಾರ ಇದನ್ನು ಅರಿಯಬೇಕು.

---

*(ಈ ತಿಂಗಳು ೩ನೇ ಪುಟದಿಂದ)*

ಪ್ರತಿಕ್ರಿಯಿಸಬಹುದು ಮತ್ತು ಸರ್ಕಾರದ ಕ್ರಮಗಳು ಎಷ್ಟು ಫಲದಾಯಕವಾಗಬಹುದು ಎಂಬುದನ್ನು ಶಾಸನದ ಅನುಷ್ಠಾನಕ್ಕೆ ಮುಂಚೆಯೇ ಕ್ಲುಪ್ತವಾಗಿ ತಿಳಿಯಲಾಗುವುದಿಲ್ಲವೆಂದು ಹೇಳಲಾಗಿದೆ. ಆರೋಗ್ಯ ಸಚಿವರು ಇಡೀ ಸನ್ನಿವೇಶವನ್ನು ಜನಪರವಾಗಿ ನಿಭಾಯಿಸುವ ಆಶ್ವಾಸನೆ ನೀಡಿದ್ದಾರೆ. ಅವರೇ ಹೇಳುವಂತೆ ಸದ್ಯದ ಸಮಸ್ಯೆಗೆ ಸಮರ್ಥ ಪರಿಹಾರವೆಂದರೆ ಸರ್ಕಾರಿ ಆಸ್ಪತ್ರೆಗಳ ಗುಣಮಟ್ಟವನ್ನು ಹಾಗೂ ಸೇವಾ ವಿಧಾನವನ್ನು ಸುಧಾರಿಸುವುದು ಮತ್ತು ಸಾಮಾನ್ಯ ಜನರು ಒಲವಿನಿಂದ ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಲು ಮುಂದಾಗುವಂತೆ ಮಾಡುವುದು. ಆ ದಿಕ್ಕಿನಲ್ಲಿ ಈಗಾಗಲೆ ಒಂದು ಹೆಜ್ಜೆಯನ್ನು ಇರಿಸಲಾಗಿದೆ. ಚಿಕಿತ್ಸೆಗೆ ಸರ್ಕಾರದಿಂದ ಧನಸಹಾಯ ಪಡೆಯುವವರು ಕಡ್ಡಾಯವಾಗಿ ಸರ್ಕಾರಿ ಆಸ್ಪತ್ರೆಗಳಲ್ಲಿ ಆ ಚಿಕಿತ್ಸೆ ಪಡೆಯಬೇಕು; ಸರ್ಕಾರಿ ಆಸ್ಪತ್ರೆಗಳಲ್ಲಿ ನಿಗದಿತ ರೋಗಸಮಸ್ಯೆಗೆ ಚಿಕಿತ್ಸೆಯ ಸೌಲಭ್ಯ ಇಲ್ಲದಿದ್ದಾಗ ಮಾತ್ರ ರೋಗಿಗಳು ಖಾಸಗಿ ಆಸ್ಪತ್ರೆಗಳಿಗೆ ದಾಖಲಾಗಬೇಕು, ಎಂಬುದು ಆ ಹೊಸ ನಿರ್ದೇಶನ. ವಿವಿಧ ಹಂತಗಳಿಗೆ ಸೇರಿದ ಸರ್ಕಾರಿ ನೌಕರರು ಸರ್ಕಾರಿ ಆಸ್ಪತ್ರೆಗಳಲ್ಲಿ ದಾಖಲಾಗುವುದಾದರೆ ಆ ಆಸ್ಪತ್ರೆಗಳ ಬಗ್ಗೆ ಸರ್ಕಾರ ಸಹ ಹೆಚ್ಚು ನಿಗಾ ವಹಿಸುವುದು ಅನಿವಾರ್ಯವಾಗುತ್ತದೆ. ಈಗಿನ ವಿಧೇಯಕವು ಗುಣಾತ್ಮಕ ಬದಲಾವಣೆಯನ್ನು ತರುತ್ತದೆಯೇ ಎಂಬುದನ್ನು ಪ್ರಯೋಗದ ತರುವಾಯದಲ್ಲಿ ತಿಳಿದು ಲೋಪಗಳನ್ನು ಇಲ್ಲವಾಗಿಸ ಬೇಕು. ಏನೇ ಇರಲಿ, ಜನತೆಗೆ ಚಿಕಿತ್ಸೆಯು ಇನ್ನೊಂದು ಸಾಮಾಜಿಕ ರೋಗದಂತೆ ಬಾಧಿಸುವಂತಾಗಬಾರದು.

* * *

ನಮ್ಮ ವರ್ತಮಾನ ಪತ್ರಿಕೆಗಳು ಜಾಗತಿಕ ಸಂಗತಿಗಳ ವಿಶ್ಲೇಷಣೆಗೆ ವಿದೇಶಗಳ ಪತ್ರಿಕೆಗಳನ್ನಾಶ್ರಯಿಸುವುದು ಈಚಿನ ವಿದ್ಯಮಾನವಲ್ಲ. ಬಹುಕಾಲದಿಂದ ಇರುವ ಪಿಡುಗು ಅದು. ಲಂಡನ್ ಟೈಮ್ಸ್, ಗಾರ್ಡಿಯನ್, ನ್ಯೂಯಾರ್ಕ್ ಟೈಮ್ಸ್, ವಾಷಿಂಗ್ಟನ್ ಪೋಸ್ಟ್, ಹೀಗೆ ಪಾಶ್ಚಿಮಾತ್ಯ ದೇಶಗಳ "ಪ್ರಸಿದ್ಧ" ವಿಶ್ಲೇಷಕರ ಅಡಿಗೆಯನ್ನು ನಮ್ಮ ಓದುಗರಿಗೆ ಉಣಬಡಿಸುವುದು ರೂಢಿಯಲ್ಲಿತ್ತು, ಈಗಲೂ ಇದೆ. ಯಾವುದೇ ಜಾಗತಿಕ ವಿದ್ಯಮಾನವಿರಲಿ ಅದಕ್ಕೆ ಭಾರತದ್ದೇ ಒಂದು ಪ್ರತಿಕ್ರಿಯೆ, ವಿಶ್ಲೇಷಣೆ, ಭವಿಷ್ಯದ ಯೋಜನೆ, ಮತ್ತು ನೀತಿನಿರೂಪಣೆ ಇರಬೇಕೆಂಬುದು ಅತಿಸಹಜವಾದ ಆಶಯ. ಉದಾಹರಣೆಗೆ, ಸಿರಿಯಾದ ಸಮಸ್ಯೆಯಾಗಲಿ, ಬೊಲಿವಿಯಾದ ಸಮಸ್ಯೆಯಾಗಲಿ, ಪಾಶ್ಚಿಮಾತ್ಯ ದೇಶಗಳ ಕಣ್ಣಿಂದ ಮಾತ್ರ ವೀಕ್ಷಿಸಲ್ಪಟ್ಟರೆ ಅದು ಭಾರತದ ದೃಷ್ಟಿಗೆ, ಭಾರತದ ಅಂತರರಾಷ್ಟ್ರೀಯ ಸಂಬಂಧಗಳಿಗೆ, ಸಮಂಜಸವಾಗಿರುವುದಿಲ್ಲ. ಆದ್ದರಿಂದ ಮಾಧ್ಯಮಗಳು ಅಂಕಣಕಾರರನ್ನು ಮತ್ತು ಅವರು ನೀಡುವ ಖಾದ್ಯವನ್ನು ಕಣ್ಣುಮುಚ್ಚಿ ನುಂಗುವುದು ಅನಾರೋಗ್ಯಕರವಾದ್ದು. ಅಂಕಣಕಾರರು ಮತ್ತು ಅವರು ಆಯ್ಕೆ ಮಾಡಿಕೊಳ್ಳುವ ವಿಷಯ ವಿಶ್ಲೇಷಣೆಯ ದಿಕ್ಕನ್ನು ಮಾಧ್ಯಮಗಳು ವಿಚಕ್ಷಣೆಯಿಂದ ಗಮನಿಸಬೇಕಾದ್ದು ಅವಶ್ಯಕ.

ಕಳೆದ ಮೂರು ವರ್ಷಗಳಲ್ಲಿ ಪತ್ರಿಕೆಗಳಲ್ಲಿ ಕೇಂದ್ರ ಸರ್ಕಾರದ ಮಂತ್ರಿಗಳು ಹಾಗೂ ಸರ್ಕಾರದ ಆಯೋಗಗಳ ಅಧ್ಯಕ್ಷರು ಅಂಕಣಗಳನ್ನು ಬರೆಯಲಾರಂಭಿಸಿದ್ದಾರೆ. ಅವರಿಗೆ ಪತ್ರಿಕೆಗಳು ಆಹ್ವಾನ ನೀಡಿದುವೋ ಅಥವಾ ಅವರೇ ಹೇರಿಕೊಂಡರೋ ತಿಳಿಯದು, ಪತ್ರಿಕಾ ವರದಿಗಳಲ್ಲಿ ಹೇಗೂ ಅವರ ಹೇಳಿಕೆಗಳು ಹೇರಳವಾಗಿರುತ್ತವೆ; ಜೊತೆಗೆ ಈಗ ಅಂಕಣಗಳನ್ನೂ ಆಕ್ರಮಿಸಿದ್ದಾರೆ. ಉದಾಹರಣೆಗೆ, ಕೇಂದ್ರ ಮಂತ್ರಿ ವೆಂಕಯ್ಯ ನಾಯ್ಡು ಮತ್ತು ವಾರ್ತಾ ಆಯೋಗದ ಅಧ್ಯಕ್ಷ ಶ್ರೀ. ಸೂರ್ಯಪ್ರಕಾಶ್ 'ಪ್ರಜಾವಾಣಿ' ಪತ್ರಿಕೆಯಲ್ಲಿ ಅಂಕಣಕಾರರಾಗಿ ಪ್ರತಿವಾರ ಏನಾದರೂ ಪ್ರಕಟಿಸುತ್ತಿರುತ್ತಾರೆ. ನಿರೀಕ್ಷೆಯಂತೆ ಅವರ ಬರಹಗಳು ಸರ್ಕಾರದ ಪ್ರಚಾರ ಮತ್ತು ಸಮರ್ಥನೆಗೆ ಮೀಸಲಾಗಿರುತ್ತವೆ. ಪತ್ರಿಕಾ ಸ್ವಾತಂತ್ರ್ಯವನ್ನು ಕುರಿತು ಬರ್ನಾರ್ಡ್ ಶಾ ಕಠಿಣವಾದ ನಿಲುವನ್ನು ತನ್ನ ಎಂದಿನ ಭಾಷಾ ಚಮತ್ಕಾರದಿಂದ ಹೊರಗೆಡಹಿದ್ದ. "ಮಾಧ್ಯಮದ ಸ್ವಾತಂತ್ರ್ಯವೇನೆಂದರೆ ನಿಗ್ರಹಿಸುವುದು" (ಫ್ರೀಡಂ ಆಫ್ ದ ಪ್ರೆಸ್ ಈಸ್ ಟು ಸಪ್ರೆಸ್), ಎಂದವನು ನಗೆಯಾಡಿದ್ದ. ಸರ್ಕಾರದ ವತಿಯಿಂದ ಅಂಕಣಕಾರರಾಗಿ ಬರೆಯುವವರು ಅದನ್ನು ಚೆನ್ನಾಗಿಯೇ ಮಾಡಬೇಕು. ಮಾನ್ಯ ವೆಂಕಯ್ಯ ನಾಯ್ಡು ಮತ್ತು ಸೂರ್ಯಪ್ರಕಾಶ್ ತಮ್ಮ ಭಾವೋದ್ವೇಗವನ್ನು ತಡೆಯಲಾರರು; ಆದ್ದರಿಂದ ಆಗಾಗ್ಗೆ ಎಡವಟ್ಟು ಮಾತುಗಳನ್ನಾಡಿಬಿಡುತ್ತಾರೆ. ಅದಕ್ಕೊಂದು ಉದಾಹರಣೆಗೆ ಜೂನ್ ೧೪ರಂದು 'ಪ್ರಜಾವಾಣಿ'ಯಲ್ಲಿ ಶ್ರೀ. ಸೂರ್ಯಪ್ರಕಾಶ್, ಕಾಂಗ್ರೆಸ್ ಹಿಂದುಗಳನ್ನು ಹೀಗಳೆಯುತ್ತದೆಂಬ ಶೀರ್ಷಿಕೆಯಡಿ "ಪ್ರಾಣಿ ಹಿಂಸೆ ತಡೆ (ಜಾನುವಾರು ಮಾರುಕಟ್ಟೆ ನಿಯಂತ್ರಣ) ನಿಯಮ ೨೦೧೭" ಎಂಬುದನ್ನು ಶುದ್ಧ ಅತಾರ್ಕಿಕ ರೀತಿಯಲ್ಲಿ ಅರ್ಥೈಸುವ ಮುಗ್ಗಟ್ಟಿಗೆ ಸಿಲುಕಿದ್ದಾರೆ. ಮೂಲತಃ ಪ್ರಾಣಿಗಳೆಂದರೆ ಕೇವಲ ಗೋಮಾತೆಯಲ್ಲ; ಮಾತಾಪಿತೃ ಸ್ಥಾನಗಳನ್ನು ಎಂದೂ ಪಡೆಯದ ಕೋಳಿ, ಕುರಿ, ಹಂದಿ, ಮೀನು, ಇತ್ಯಾದಿಗಳೂ ಪ್ರಾಣಿಗಳೇ. ಅವು ೩೩ ಕೋಟಿ ದೇವತೆಗಳ ಆವಾಸಸ್ಥಾನವಾಗಿರದಿದ್ದರೂ ಒಂದೋ ಎರಡೋ ದೇವತೆಗಳಿಗೆ ಆವಾಸ ಒದಗಿಸಿರಲಿಕ್ಕೆ ಸಾಕು. ಪ್ರಸ್ತುತ ಆಜ್ಞೆಯ ಮಹಾ ವೈಚಿತ್ರ್ಯವೆಂದರೆ ಅದನ್ನು ಪರಿಸರ ಮಂತ್ರಾಲಯವು ಹೊರ ತಂದಿರುವುದು. ಆಜ್ಞೆಯ ಉದ್ದೇಶವನ್ನು ತಿಳಿಸುವಾಗ ಸೂರ್ಯಪ್ರಕಾಶ್ "ಪ್ರಾಣಿಗಳನ್ನು ಹಿಂಸೆಯಿಂದ ರಕ್ಷಿಸುವುದು, ಕಸಾಯಿಖಾನೆಗಳಿಗೆ ದನಗಳ ಮಾರಾಟ ನಿಯಂತ್ರಿಸುವುದಲ್ಲ" ಎಂದಿದ್ದಾರೆ. ಅದು ನಿಜವಾಗಿದ್ದರೆ

ದೇಶದ ಹಲವೆಡೆಗಳಲ್ಲಿ ಈ ಆಜ್ಞೆಯಿಂದಾಗಿ ಕಸಾಯಿಖಾನೆಗಳು ಮುಚ್ಚಿಹೋಗಬಾರದಾಗಿತ್ತು, ಅಲ್ಲವೆ? ಆದರೆ ಅನೇಕ ರಾಜ್ಯಗಳಲ್ಲಿ ಅದು ನಡೆದಿರುವುದು ವ್ಯಾಪಕವಾಗಿ ವರದಿಯಾಗಿದೆ. ಅಷ್ಟೇ ಅಲ್ಲ, ದನ ಹೊಡೆದುಕೊಂಡು ಹೋಗುತ್ತಿದ್ದವರು ಅನೇಕ ಕಡೆಗಳಲ್ಲಿ ಗೂಂಡಾಗಳ ಹಲ್ಲೆಗೊಳಗಾಗಿ ಹೊಡೆತ ತಿಂದಿದ್ದಾರೆ. ಅದು ಸೂರ್ಯಪ್ರಕಾಶ್ ಅವರಿಗೆ ತಿಳಿದಿಲ್ಲದಿರುವುದು ಅಶಕ್ಯ. "ಅಕ್ರಮ" ಮಾರಾಟ ತಡೆಯಲು ಕೆಲ ವೇಳೆ ಹಲ್ಲೆಗಳಾಗಿರ ಬಹುದೆಂಬ ಊಹೆಯನ್ನು ಕೇಂದ್ರ ಸರ್ಕಾರದ ವಕ್ತಾರರು ಆಗಾಗ್ಗೆ ಜನರ ಮುಂದಿಟ್ಟಿದ್ದಾರೆ. "ಸಕ್ರಮ ಮಾರಾಟ" ಯಾವುದು ? ಮಾರಾಟ ಕೇಂದ್ರಗಳನ್ನು ಮುಚ್ಚಿ "ಸಕ್ರಮ" ಮಾರಾಟ ಮಾಡಿರೆಂದರೆ ಹೇಗೆ ಮಾಡುವುದು ? ಅದೇನೋ "ಆನ್‌ಲೈನ್" ಮಾರಾಟ ಮಾಡಬಹುದು ಎನ್ನುತ್ತಾರೆ. ದನ ಮಾರುವವರಿಗೆ ಅದು ತಿಳಿದಿದೆಯೆ ? ಅಕ್ರಮವಾಗಿ ನೆರೆದೇಶಗಳಿಗೆ ದನಗಳನ್ನು ಸಾಗಿಸಲು ಕೆಲವರು ಹೊಂಚುಹಾಕು ತ್ತಿರುತ್ತಾರೆ, ಅದನ್ನು ತಡೆಯಲು ಈ ಆಜ್ಞೆ ನೆರವಾಗುತ್ತದೆ, ಎನ್ನುತ್ತಾರೆ ಸೂರ್ಯಪ್ರಕಾಶ್. ನೇಪಾಳಕ್ಕೋ ಬಂಗ್ಲಾ ದೇಶಕ್ಕೋ ದನ ಸಾಗಿಸುತ್ತಾರೆಂಬ ಗುಮಾನಿ ಇದ್ದರೆ ದೇಶದ ಗಡಿಗಳ ಬಳಿ ಭದ್ರತೆ ಒದಗಿಸಬೇಕು; ಕಾನ್ಪುರದ ಬಳಿ ಹಲ್ಲೆ ಏಕೆ ನಡೆಯಬೇಕು ? ತಪಾಸಣೆ ಮಾಡುವುದು ಕಾನ್ಪುರದ ಬಳಿ ಏನು ? ಹೀಗಾಗಿ, ನೇಪಾಳದ ಸಬೂಬು ತೀರಾ ಅಪಕ್ವವಾಗಿದೆ. ಅದನ್ನು ಸೂರ್ಯಪ್ರಕಾಶ್ ನೀಡಿದ್ದಾರೆ. ಒಂದು ಸರ್ಕಾರಿ ನಿಗಮದ ಅಧ್ಯಕ್ಷರು ಇಷ್ಟೊಂದು ಅದಕ್ಷರಾಗಬಾರದಿತ್ತು. ಪ್ರಸ್ತುತ ಆಜ್ಞೆಯಲ್ಲಿ ವಿಪರ್ಯಾಸವೇನೆಂದರೆ ದನ ಕೊಳ್ಳಲು ಅಭ್ಯಂತರವಿಲ್ಲ, ಆದರೆ ಮಾರಲು ಭಾರಿ ನಿಯಮಗಳಿವೆ ! ಮಾರುವವರು ಕೋರ್ಟಿನಿಂದ ಅಫಿಡವಿಟ್ ಪಡೆದುಕೊಂಡಿರಬೇಕಂತೆ. ಕೋರ್ಟಿನಿಂದ ೨೦-೩೦ ಕಿಲೋಮೀಟರ್ ದೂರದಲ್ಲಿರುವವರ ಪರದಾಟ ಮತ್ತು ಕೋರ್ಟು ಖರ್ಚು ಹೇಗಿರಬಹುದು? ಹೇಳುವವನು ಮೂರ್ಖನಾದರೆ ಕೇಳುವವನು ಶುದ್ಧ ಮಡ್ಡಿ ಆಗಿರುವುದಿಲ್ಲವಲ್ಲ ! ದನಗಳನ್ನು ಕಸಾಯಿಖಾನೆಗೆ ಕಳಿಸಲು ಅಡ್ಡಿಯಿಲ್ಲ ಎಂಬ ಸೂರ್ಯಪ್ರಕಾಶರ ಮಾತು ನಿಜವಾದರೆ ಪ್ರಸ್ತುತ ಆಜ್ಞೆಯು "ಪ್ರಾಣಿಹಿಂಸೆಯನ್ನು" ಹೇಗೆ ತಡೆಯುತ್ತದೆ? "ದನದ ಮಾಂಸ ತಿನ್ನುವವರು ತಿನ್ನಲಿ, ನಮ್ಮದೇನೂ ಅಡ್ಡಿಯಿಲ್ಲ" ಎಂದು ಗೃಹಮಂತ್ರಿ ರಾಜನಾಥ ಸಿಂಗ್ ಮುಂತಾದವರು ಹೇಳಿದ್ದಾರೆ. ಕಸಾಯಿಖಾನೆಯನ್ನು ಮುಚ್ಚಿರುವಾಗ ಆ ಮಾಂಸ ದೊರೆಯುವುದು ಎಲ್ಲಿಂದ? ಇಷ್ಟು ವೈರುಧ್ಯಗಳಿಂದ ತುಂಬಿರುವ ಆಜ್ಞೆಯನ್ನು ಕೇಂದ್ರ ಪರಿಸರ ಸಚಿವಾಲಯವು ಹೊರಡಿಸಿದೆ. ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ವಿಚಾರಗೋಷ್ಠಿಯ ಅಧ್ಯಕ್ಷ ಸ್ಥಾನದಿಂದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಶ್ರೀ. ವಿ. ಗೋಪಾಲ ಗೌಡ ಅವರು ಸುದೀರ್ಘವಾಗಿ ಆಜ್ಞೆಯ ಪರಾಮರ್ಶೆ ಮಾಡಿದ್ದು ವರದಿಯಾಗಿದೆ. ಈ ನ್ಯಾಯಮೂರ್ತಿಗಳು ಆಜ್ಞೆಯನ್ನು ಖಂಡತುಂಡವಾಗಿ ವಿಶ್ಲೇಷಿಸಿ ಕೊನೆಗೆ ಹೇಳಿದ್ದಾರೆ, "ಈ ಆಜ್ಞೆಯು ಸಂವಿಧಾನದ ನಿಬಂಧನೆಗಳಿಗೆ ಪೂರ್ತಿಯಾಗಿ ಹೊರತಾದುದು" ಎಂದು. ವಿಚಾರವು ಈಗಾಗಲೆ ಸರ್ವೋಚ್ಚ ನ್ಯಾಯಾಲಯದ ಮುಂದೆ "ಸಾರ್ವಜನಿಕ ಹಿತಾಸಕ್ತಿಯ ಅರ್ಜಿ" ರೂಪದಲ್ಲಿ ಬಂದಿದೆ. ಆಜ್ಞೆಯು ಸಂವಿಧಾನ ಬಾಹಿರವಾದುದೆಂದು ಸರ್ವೋಚ್ಚ ನ್ಯಾಯಾಲಯವು ತೀರ್ಪು ನೀಡುತ್ತದೋ ಇಲ್ಲವೋ ಕಾದುನೋಡಬೇಕು. ಅಲ್ಲಿಯವರೆಗೆ ಪ್ರಹಸನಗಳು ಮತ್ತು ಗೂಸಾಗಳು ಮುಂದುವರಿಯುತ್ತವೆ !

* * *

ಹೊಸ ರಾಷ್ಟ್ರಾಧ್ಯಕ್ಷರ ಚುನಾವಣೆಯ ದಿನ ಸನ್ನಿಹಿತವಾಗುತ್ತಿದೆ. ತೆರೆಮರೆಯಲ್ಲಿ ಮತ್ತು ತೆರೆಯ ಮುಂದೆ ಬಿರುಸಿನ ರಾಜಕೀಯ ಚಟುವಟಿಕೆಗಳು ನಡೆಯುತ್ತಿವೆ. ಭಾರತೀಯ ಜನತಾ ಪಕ್ಷವು ತನ್ನ ಮೂರು ಮುತ್ಸದ್ದಿಗಳಿಗೆ ಅಭ್ಯರ್ಥಿಯ ಆಯ್ಕೆಯ ಹೊಣೆಯನ್ನು ವಹಿಸಿದೆ. ಅವರು ವಿರೋಧ ಪಕ್ಷಗಳನ್ನು ಸಂಪರ್ಕಿಸಿ ಸರ್ವರ ಅಂಗೀಕಾರಕ್ಕೆ ಅರ್ಹರಾದ ಅಭ್ಯರ್ಥಿಯೊಬ್ಬರನ್ನು ಆಯ್ಕೆ ಮಾಡಲು ಯತ್ನಿಸುತ್ತಾರೆಂದು ಹೇಳಲಾಗಿದೆ. ಆ ಸಂಬಂಧದಲ್ಲಿ ಸಚಿವ ವೆಂಕಯ್ಯ ನಾಯ್ಡು ಯಥಾಪ್ರಕಾರ ಅರ್ಥ ವಿಲ್ಲದ ವಾದವೊಂದನ್ನು ದೇಶದ ಮುಂದಿಟ್ಟಿದ್ದಾರೆ. ಅವರು ಎಲ್ಲ ಪಕ್ಷಗಳಿಗೂ ಮನವಿ ಮಾಡಿಕೊಂಡಿದ್ದಾರೆ, "ದೇಶದ ಜನತೆಯು ನಮಗೆ (ಅಂದರೆ, ಭಾಜಪಕ್ಕೆ) ಆಳುವ ಅಧಿಕಾರವನ್ನು ನೀಡಿದೆ, ಅದನ್ನು ನೀವು ಮಾನ್ಯ ಮಾಡಿ", ಎಂದು. ಅಂದರೆ, ಭಾಜಪ ಹೇಳುವ ಹೆಸರನ್ನು ಉಸಿರೆತ್ತದೆ ಸ್ವೀಕರಿಸಿ, ಎಂದರ್ಥ. ಇಲ್ಲೇ ಇರುವುದು ನಾಯ್ಡು ಅವರ "ಮ್ಯಾಂಡೇಟ್ ಕಲ್ಪನೆಯ ಟೊಳ್ಳುತನ", ಜನತೆ ಅವರಿಗೆ ನೀಡಿರುವ "ಮ್ಯಾಂಡೇಟ್" ಎಂಥದು ? 'ಆಳ್ವಿಕೆ ನಡೆಸಿ' ಎಂದು ಮತದಾರರಲ್ಲಿ ಶೇ. ೩೪ ಮಂದಿ ಹೇಳಿದ್ದಾರೆ; ಅದನ್ನು ಮಾನ್ಯ ಸಚಿವರು ಬೇಕೆಂದೇ ಮರೆಮಾಚಿದ್ದಾರೆ. ಮತದಾರರಲ್ಲಿ ಶೇ. ೬೬ ಮಂದಿ "ನಿಮ್ಮ ಆಳ್ವಿಕೆಯು ದೇಶಕ್ಕೆ ಬೇಡ" ಎಂದು ಹೇಳಿದ್ದಾರೆ. ಆ ಬಗ್ಗೆ ಅನುಮಾನವಿದ್ದರೆ ಕೇಂದ್ರ ಚುನಾವಣಾ ಆಯೋಗವನ್ನು ಕೇಳಿ ತಿಳಿಯಬಹುದು. ವೆಂಕಯ್ಯ ನಾಯ್ಡು ಅವರ "ಮ್ಯಾಂಡೇಟ್ ಪ್ರತಿಪಾದನೆ"ಯ ಪ್ರಕಾರ ಶೇ. ೬೬ ಮಂದಿ ಮತದಾರರನ್ನು ಪ್ರತಿನಿಧಿಸುವ ವಿರೋಧ ಪಕ್ಷಗಳವರು ಒಮ್ಮತದಿಂದ ಯಾವುದಾದರೂ ಒಬ್ಬ ವ್ಯಕ್ತಿಯನ್ನು ಹೆಸರಿಸಿದರೆ ಅದನ್ನು ಮಾನ್ಯ ಸಚಿವರು ತಲೆಬಾಗಿ ಸ್ವೀಕರಿಸಬೇಕು. ನಮ್ಮ ಪ್ರಸಿದ್ಧ "ಮ್ಯಾಂಡೇಟ್ ಮಾಂತ್ರಿಕ" ವೆಂಕಯ್ಯ ನಾಯ್ಡು ಅದಕ್ಕೆ ಸಿದ್ಧರಾಗಿದ್ದರೆ ಕೂಡಲೆ ಪ್ರಧಾನ ಮಂತ್ರಿಯವರಿಗೆ ತಿಳಿಸಿಬಿಡಲಿ.

* * *

ಇಪ್ಪತ್ತೊಂದನೇ ಶತಮಾನದಲ್ಲಿದ್ದರೂ ಭಾಜಪ ಚಿಂತಕರು ಇನ್ನೂ ಹಲವು ಶತಮಾನಗಳ ಹಿಂದೆ ಇದ್ದಾರೆ. ಶುದ್ಧ ಅವೈಜ್ಞಾನಿಕ ವಿಚಾರಗಳಿಗೆ ಅಂಟಿಕೊಂಡು ವೈಭವೀಕರಿಸಿ ಹೇಳುವುದನ್ನು ಆರೆಸ್ಸೆಸ್ ಸೇವಕರು ಮೊದಲಿಂದಲೂ ರೂಢಿಸಿಕೊಂಡು ಬಿಟ್ಟಿದ್ದಾರೆ. ಈ ದೇಶದ ಪ್ರಧಾನಿ ಪಟ್ಟದಲ್ಲಿರುವ ವ್ಯಕ್ತಿಯೇ ಪುರಾಣಗಳ ಕಾಲದಲ್ಲೇ ಭಾರತದಲ್ಲಿ ಅಂಗಾಂಶ ಜೋಡಣೆ, ಕೃತಕ ಗರ್ಭಧಾರಣೆ ಚಾಲ್ತಿಯಲ್ಲಿತ್ತು ಎಂಬುದಾಗಿ ಗಣೇಶ, ಕುಂತಿಯರನ್ನು ಉದಾಹರಿಸಿದ್ದು ಯಾರೂ ಮರೆಯಲಾರರು. ಅವರು ಇಂಥ ಶೋಧೆಯನ್ನು ವಿವರಿಸಿದ್ದು ವಿಜ್ಞಾನಿಗಳ ಸಮ್ಮುಖದಲ್ಲಿ. ಆಗ ಯಾರೂ ಸೊಲ್ಲೆತ್ತಲಿಲ್ಲ ಪ್ರಧಾನಿ ಮಾತಿಗೆ. ಅದು ಪ್ರಾರಂಭ. ಈಗ ಪಂಚಗವ್ಯದ ಔಷಧೀಯ ಗುಣಗಳನ್ನು ಪತ್ತೆ ಮಾಡಲು ಸರಕಾರ ವಿಜ್ಞಾನಿಗಳ ತಂಡವೊಂದನ್ನು ರಚಿಸಿರುವುದು, ಅದಕ್ಕಾಗಿ ತೆರಿಗೆದಾರರ ಹಣವನ್ನು ದುರುಪಯೋಗ ಪಡಿಸುತ್ತಿರುವುದು ದುಸ್ಸಾಹಸವಲ್ಲದೆ ಬೇರೇನು ? ಪಂಚಗವ್ಯ ಎನ್ನುವುದು ಸಗಣಿ, ಗೋಮೂತ್ರ, ಹಾಲು, ಮೊಸರು, ತುಪ್ಪದ ಮಿಶ್ರಣದಿಂದ ತಯಾರಾದ ಪದಾರ್ಥ. ಹಿಂದೆ ಶುದ್ಧೀಕರಣಕ್ಕಾಗಿ ಇದನ್ನು ಕೊಡುವ ಪರಿಪಾಠ ಇತ್ತು. ಮೂವತ್ತಮೂರು ಕೋಟಿ ದೇವಾನುದೇವತೆಗಳನ್ನು ಹುದುಗಿಸಿಕೊಂಡಿರುವ ಗೋಮಾತೆ ಸಾಮಾನ್ಯವೇನಲ್ಲ, ಮನುಷ್ಯ ಜೀವಕ್ಕಿಂತ ಪವಿತ್ರ, ಶ್ರೇಷ್ಠ !

ಗೋವಿನ ಸುತ್ತ ಇಲ್ಲದ ಕತೆ ಹೆಣೆಯುತ್ತಿದ್ದಾರೆ. ಗೋಮಾಂಸ ಭಕ್ಷಣೆ ಈಗ ದೊಡ್ಡ ವಿವಾದದ ಸಂಗತಿ. ಯಾರು ಏನು ತಿನ್ನಬೇಕು, ತಿನ್ನಕೂಡದು ಎಂದು ನಿರ್ಧರಿಸುವ ಹಕ್ಕನ್ನು ವ್ಯಕ್ತಿಯಿಂದ ಕಸಿದು ಕೊಂಡು ಕಾನೂನು ಕೈಗೆತ್ತಿಕೊಂಡಿರುವ ಹಿಂದುತ್ವ ಕಾರ್ಯಕರ್ತರು ನಿರ್ಧರಿಸುತ್ತಿದ್ದಾರೆ. ಇದಕ್ಕೆ ಬೇಕಾದಷ್ಟು ನಿದರ್ಶನಗಳಿದ್ದರೂ ಸರಕಾರ ಕಣ್ಮುಚ್ಚಿ ಕುಳಿತಿದೆ. ಅಲ್ಪಸಂಖ್ಯಾತರನ್ನು, ದಲಿತರನ್ನು ಬಗ್ಗು ಬಡಿಯಲು ಇದೊಂದು ಅಸ್ತ್ರವಾಗಿಬಿಟ್ಟಿದೆ ಅವರಿಗೆ.

ರೈತರ ಸಾಲ ಮನ್ನಾ ಮಾಡುವುದು ರಾಜ್ಯ ಸರಕಾರಗಳಿಗೆ ಬಿಟ್ಟದ್ದು, ಕೇಂದ್ರ ಸರಕಾರದಿಂದ ಒಂದು ದೊಮ್ಮಡಿ ಕೂಡ ನೀಡುವುದಿಲ್ಲ ಎಂದು ಹೇಳಿ ಹಣಕಾಸಿನ ಸಚಿವ ಅರುಣ್ ಜೇಟ್ಲಿ ಕೈ ತೊಳೆದು ಕೊಂಡುಬಿಟ್ಟಿದ್ದಾರೆ. ಅಂದಹಾಗೆ ಕೇಂದ್ರ ಸರಕಾರದಲ್ಲಿ ಜೇಟ್ಲಿ, ರಾಜನಾಥ ಸಿಂಗ್, ವೆಂಕಯ್ಯ ನಾಯ್ಡು ಮೋದಿಗೆ ಹತ್ತಿರವಾಗಿದ್ದಾರೆ. ಭಾಜಪ ಅಧಿಕಾರದಲ್ಲಿ ಇರುವ ಉತ್ತರಪ್ರದೇಶ, ಮಹಾರಾಷ್ಟ್ರ, ಮಧ್ಯಪ್ರದೇಶ ಮೊದಲಾದ ರಾಜ್ಯಗಳು ಈಗಾಗಲೇ ರೈತರ ಸಾಲ ಮನ್ನಾ ಮಾಡುವುದಾಗಿ ಪ್ರಕಟಿಸಿವೆ, ಈ ಹಿನ್ನೆಲೆಯಲ್ಲೇ ದೇಶದ ರಿಸರ್ವ್ ಬ್ಯಾಂಕ್ ಗವರ್ನರ್‌ರವರು ರೈತರ ಸಾಲ ಮನ್ನಾ ಮಾಡುವ ಕ್ರಮ ಬ್ಯಾಂಕಿಂಗ್ ವ್ಯವಸ್ಥೆಯ ಮೇಲೆ ದುಷ್ಪರಿಣಾಮ ಬೀರುತ್ತದೆ ಎಂದು ಎಚ್ಚರಿಕೆ ನೀಡಿದ್ದು. ಆದರೆ ಆತ ಬ್ಯಾಂಕುಗಳ ಉಪಯೋಗವಾಗದಿರುವ ನಿಷ್ಪ್ರಯೋಜಕ ನಿಧಿಯ ಕುರಿತು ಏನೂ ಹೇಳದೇ ಇದ್ದುದು ಆಶ್ಚರ್ಯ. ಹಾಗೆಯೇ ಉದ್ಯಮಿಗಳ ಸಾಲದ ಮೊತ್ತ ಕೂಡ ಪ್ರಸ್ತಾಪ ಮಾಡದಿದ್ದುದು ಹೇಗೆ ? ಅಂದಾಜು ಮಾಡಿದರೆ ಉದ್ಯಮಿಗಳ ಸಾಲಕ್ಕೂ, ರೈತರ ಸಾಲಕ್ಕೂ ಹೋಲಿಕೆ ಮಾಡುವುದೇ ಸರಿಯಲ್ಲ. ರೈತರ ಸಾಲ ಮನ್ನಾ ಮಾಡುವುದು ಹಿಂದಿನಿಂದ ಬಂದದ್ದು. ಸರಕಾರ ರೈತನ ರಕ್ಷಣೆಗೆ ಬಾರದೆ ಬೇರೆ ಯಾರು ಬರುತ್ತಾರೆ ? ನಮ್ಮ ರಾಜ್ಯದಲ್ಲೂ ಕೂಡ ರೈತರ ಸಾಲ

*(ಈ ತಿಂಗಳು ೧೧ನೇ ಪುಟಕ್ಕೆ)*




✉ ಕೇಂದ್ರ ಸರ್ಕಾರ ಪರಿಸರ ಉಳಿಸುವ ನೆವದಲ್ಲಿ ಪಶ್ಚಿಮ ಘಟ್ಟ ಪ್ರದೇಶವನ್ನೆ ಪರಿಸರ ಸೂಕ್ಷ್ಮಪ್ರದೇಶ ಅಂತ ಘೋಷಣೆ ಮಾಡಿದೆ ಹಾಗೂ 'ಕಸ್ತೂರಿ ರಂಗನ್ ವರದಿ'ಯನ್ನೆ ಜಾರಿ ಮಾಡ್ಲಿಕ್ಕೆ ಹೊರಟಿದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಪರಿಸರ ಅಂದ್ರೆ ಏನು ಅಂತ ಸ್ವಲ್ಪ ಯೋಚ್ನೆ ಮಾಡಬೇಕಾಗಿದೆ ಮತ್ತು ಚರ್ಚೆ ನಡೆಯಬೇಕಿದೆ.

ಪರಿಸರ ಅಂದಾಕ್ಷಣ ಎಲ್ಲರ ಮನಸ್ಸಿಗೆ ಬರೋದು ದಟ್ಟ ಕಾಡು, ನದಿ, ತೊರೆ, ಗದ್ದೆ ಬಯಲುಗಳು, ಗುಡ್ಡ–ಬೆಟ್ಟಗಳು ಇತ್ಯಾದಿ. ಆದ್ರೆ ನಿಜವಾಗ್ಲೂ ಪರಿಸರ ಅಂದ್ರೆ ಏನು ? ಇವಿಷ್ಟೇನಾ ? ಅಲ್ಲ ಅಂತ ಸ್ವಲ್ಪ ಕಣ್ಣು ಬಿಟ್ಟು ಇಡೀ ಜಗತ್ತನ್ನ ನೋಡಿದ್ರೆ ಕಾಣುತ್ತೆ. ಪರಿಸರ ಅಂದ್ರೆ ಮಾನವನನ್ನೂ ಸೇರಿದಂತೆ ಕಾಡು, ಗುಡ್ಡ–ಬೆಟ್ಟ, ಪ್ರಾಣ–ಪಕ್ಷಿ, ನದಿ–ತೊರೆ, ನಗರ–ಪಟ್ಟಣ ಅಲ್ಲಿರುವ ಕೆರೆ, ಮನೆ, ಸುತ್ತಲಿನ ಪರಿಸರ ಎಲ್ಲವೂ ಆಗಿದೆ. ಕಾಡಿನ ಒಂದು ಮರ ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ನಗರದ ಸುತ್ತಲಿನ ವಾತಾವರಣ ಕೂಡ. ಇಲ್ಲಿ ಕಾಡು ಉಳಿದು ನಗರದ ಸುತ್ತಮುತ್ತಲಿನ ಹಳ್ಳಿಗಳು ದೊಡ್ಡ ದೊಡ್ಡ ಕಾರ್ಖಾನೆಗಳಿಗಾಗಿ, ವಸತಿ ಸಮುಚ್ಚಯಕ್ಕಾಗಿ ತಮ್ಮನ್ನ ಬಲಿಕೊಡ್ತಿದ್ರೆ, ಅಲ್ಲಿನ ಜಲಮೂಲಗಳು ರಾಸಾಯನಿಕಗಳಿಂದ ಕಲುಷಿತ ಗೊಂಡಿದ್ರೆ ಪರಿಸರ ಸಮತೋಲನ ಸಾಧ್ಯವಿದೆಯಾ ? ಇಲ್ಲಿನ ಕಾಡಿನಷ್ಟೇ ಅಲ್ಲಿನ ಕೆರೆ, ಮರಗಳ ಸಾಲು, ಹೊಲಗದ್ದೆಗಳು ಅಷ್ಟೇ ಮುಖ್ಯ.

ಇದೆಲ್ಲ ನಮ್ಮನ್ನಾಳುವವರಿಗೆ ಗೊತ್ತಿಲ್ವ? ಗೊತ್ತಿದೆ. ಆದ್ರೆ ಅವರನ್ನಾಕ್ರಮಿಸಿರುವ ಬಂಡವಾಳಶಾಹಿ ಭೂತ ಅವರನ್ನ ಅದರ ಬಗ್ಗೆ ಕಾನೂನು ಕ್ರಮ ಕೈಗೊಳ್ಳಿಕ್ಕೆ ಬಿಡ್ತಿಲ್ಲ. ಅಲ್ಲದೆ ಪರಿಸರ ಸಂರಕ್ಷಣೆ ಹೆಸರಲ್ಲಿ ಇಲ್ಲಿನ ಕಾಡುಗಳನ್ನ ಉಳಿಸಿಕೊಳ್ಳುವ ನೆವದಲ್ಲಿ ಮುಂದೊಂದು ದಿನ ಅವೂ ಇವರ ಭೂತಗಳಿಗೆ 'ಎಡೆ' ಆಗ್ತಾವಾ ಅನ್ನೋ ಅನುಮಾನ ನಮ್ಮನ್ನೆಲ್ಲಾ ಕಾಡ್ತಿದೆ.

ಈಗಾಗ್ಲೆ ಕೇಂದ್ರ ಸರ್ಕಾರ ಈ ಮೂರು ವರ್ಷದಲ್ಲಿ ತಾನು ಹೇರುವ, ಮಾಡುವ 'ಅನಾಚಾರ'ಗಳಿಗೆಲ್ಲ ಜನ ಮರುಮಾತಿಲ್ಲದೆ ಒಪ್ಪಿಕೊಳ್ಳುವ ಸಂಮೋಹಿನಿ ಬೂದಿಯನ್ನ ಎಲ್ಲರ ಮೇಲೂ ಚೆಲ್ಲಿದೆ. ಅದರಿಂದ ಜನ ತಪ್ಪಿಸಿಕೊಂಡು ಸ್ವತಂತ್ರವಾಗಿ ಯೋಚ್ನೆ ಮಾಡಿದ್ರೆ ಸರ್ಕಾರದ ಪ್ರತಿ ಹೆಜ್ಜೆಗಳ ಬಗ್ಗೆಯೂ ನಮಗೆ ಅರ್ಥ ಆಗುತ್ತೆ. ಪರಿಸರ ಅಂದ್ರೆ ಏನು ಅಂತ ಯೋಚ್ನೆ ಮಾಡುವ ವಿಶಾಲ ಮನಸ್ಸು ನಮ್ಮದಾಗುತ್ತೆ. ಕೆಲವರು ಮಾತ್ರ ತ್ಯಾಗಮಾಡಿ ಉಳಿಸುವ ಕಾಡಿಗಿಂತ ಪ್ರಪಂಚದ ಜನರೆಲ್ಲರೂ ಸರಳ ಬದುಕನ್ನ ರೂಢಿಸಿಕೊಂಡು ಪರಿಸರಕ್ಕೆ ಧಕ್ಕೆ ಆಗದ ರೀತಿಯಲ್ಲಿ ಬದುಕು ಕಟ್ಟಿಕೊಂಡ್ರೆ ಅದು ನಿಜವಾದ ಪರಿಸರ ಸಂರಕ್ಷಣೆ ಮತ್ತು ನಿಜವಾದ ಪರಿಸರ ವಾದ.

ಕುಂಜಿಬೈಲು — ***ಭಾಗ್ಯ ಹಾಗಲಗಂಚಿ***

## ಶಿಕ್ಷಣ ಕ್ಷೇತ್ರದಲ್ಲಿ ಡೊನೇಶನ್ ಹಾವಳಿ

✉ ಭಾರತ ಸರ್ಕಾರವು ಪ್ರಾಥಮಿಕ ಶಿಕ್ಷಣವನ್ನು ೨೦೦೨ರಲ್ಲಿ 'ಮಕ್ಕಳ ಮೂಲಭೂತ ಹಕ್ಕು' ಎಂದು ಪರಿಗಣಿಸಿತು. ಇಷ್ಟು ಮಹಾನ್ ವ್ಯಾಪ್ತಿಯುಳ್ಳ ಶಿಕ್ಷಣವನ್ನು ಕೊಡಿಸಲು ಇಂದು ತಾಯ್ತಂದೆಯರು, ಪೋಷಕರು ಇನ್ನಿಲ್ಲದ ಪ್ರಯತ್ನ ಮಾಡುತ್ತಿದ್ದಾರೆ. ಅವರ ಹೆಬ್ಬಯಕೆಗೆ ತಡೆಯಾಗಿ ನಿಂತಿರುವ ಹೆಬ್ಬಂಡೆ 'ಡೊನೇಶನ್' ಎಂಬ ಶನಿ. ಎಂಸಿಎ, ಎಂಬಿಎ,




ಮೆಡಿಕಲ್, ಇಂಜಿನಿಯರ್, ಕಂಪ್ಯೂಟರ್ ಕೋರ್ಸ್‌ಗಳಿಗೆ ಲಕ್ಷಗಟ್ಟಲೆ ತೆರಬೇಕಾಗಿದೆ. ಅಲ್ಲದೆ, ಸರಕಾರಿ ಕೋಟಾದ ಸಂಸ್ಥೆಗಳಲ್ಲಿಯೂ ಸೀಟುಗಳ ದರ ನಿಗದಿಯಾಗಿರುವುದು ಶೋಚನೀಯ ಸಂಗತಿಯಾಗಿದೆ. ಆದರೆ ಡೊನೇಶನ್‌ಗೆ ಜೀವ ಕೊಟ್ಟವರು ನಾವೇ. ಸರ್ಕಾರಿ ಶಾಲೆಗಳಲ್ಲಿ ಓದಿದ ಅನೇಕರು ಉನ್ನತ ಹುದ್ದೆಯಲ್ಲಿಲ್ಲವೆ ? ಡೊನೇಶನ್ ಹಾವಳಿಯ ನಿರ್ಮೂಲನೆ ಸಾಧ್ಯವಿಲ್ಲದಿದ್ದರೂ ಅದನ್ನು ಒಂದು ಹತೋಟಿಗಾದರೂ ತರುವ ನಿಟ್ಟಿನಲ್ಲಿ ಸರ್ಕಾರ ಮತ್ತು ಸಂಘ–ಸಂಸ್ಥೆಗಳು ಕೆಲಸ ಮಾಡಬೇಕಿದೆ. ಡೊನೇಶನ್ ಕೊಟ್ಟರೆ ಶಿಕ್ಷಣ ಎಂಬ ಫಲಕವಿಲ್ಲದಿರುವುದೊಂದನ್ನು ಬಿಟ್ಟರೆ, ಈಗಿನ ಶಿಕ್ಷಣ ಪದ್ಧತಿ ಡೊನೇಶನ್ ಆಧಾರಿತವಾಗಿದೆ.

ಹಣ, ಆಸ್ತಿ ಇದ್ದರೆ ಶಿಕ್ಷಣವೆಂಬ ಮನಃಸ್ಥಿತಿ ಜನರಲ್ಲಿ ಬೇರೂರುತ್ತದೆ. ಅದರಲ್ಲೂ ಬಡವರು, ದಲಿತರು, ಮಧ್ಯಮ ವರ್ಗದವರು ಈ ಪಿಡುಗಿಗೆ ಬಲಿಯಾಗಿ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಹಣ ಕೊಟ್ಟರೆ ಶಿಕ್ಷಣವಂತರಾಗಬಹುದೆಂದು ಎಣಿಸಿ ತಮ್ಮಲ್ಲಿರುವ ಅಲ್ಪ ಸ್ವಲ್ಪ ಆಸ್ತಿಯನ್ನು ಮಾರಿ ಜೀವನವನ್ನೇ ಬರಿದುಮಾಡಿಕೊಳ್ಳುತ್ತಿದ್ದಾರೆ. ಸಾಲದ ಶೂಲಕ್ಕೆ ಸಿಲುಕಿ, ಆತ್ಮಹತ್ಯೆಯಲ್ಲಿ ಪರ್ಯವಸಾನ ಗೊಂಡಿರುವುದನ್ನು ನೋಡುತ್ತಲೇ ಇದ್ದೇವೆ. ಆದ್ದರಿಂದ ಈ ಜನರಿಗೆ ಶಿಕ್ಷಣ ಗಗನ ಕುಸುಮವಾಗಿದೆ. ಮುಗ್ಧ ಮಕ್ಕಳ ಭವಿಷ್ಯ ಡೊನೇಶನ್ ಎಂಬ ಬುಲ್ಡೋಜರ್ ಅಡಿಗೆ ಸಿಲುಕಿ ಅಪ್ಪಚ್ಚಿಯಾಗಿ ಕಮರಿಹೋಗಿದೆ.

ಹಳ್ಳಿಗರು ತಮ್ಮ ಮಕ್ಕಳನ್ನು ಜ್ಞಾನವಂತರಾಗಿ, ಉತ್ತಮ ಶಿಕ್ಷಿತರನ್ನಾಗಿ ಮಾಡಲು ಆಶಾಭಾವನೆ ತುಂಬಿಕೊಂಡಿರುತ್ತಾರೆ. ಆದರೆ ಇಂದಿನ ಪರಿಸ್ಥಿತಿ ನೋಡಿದರೆ ತಮ್ಮ ಆಸೆಗಳಿಗೆ ತಣ್ಣೀರೆರಚಿಕೊಂಡು ಹಳ್ಳಿಗಳಲ್ಲೇ ಕೊನೆಯುಸಿರೆಳೆಯಬೇಕಾಗುತ್ತದೆ. ಆದರೂ ಶಕ್ತಿಮೀರಿ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸಬೇಕಾದರೆ ತಮಗಿರುವ ಗದ್ದೆ, ಜಮೀನು, ಮನೆ, ಹೆಂಡತಿಯ ಆಭರಣಗಳನ್ನೋ ಅಥವಾ ತಾಳಿ, ಕಾಲುಂಗುರ, ಒಡವೆಗಳನ್ನು ಅಡವಿಟ್ಟು ಅಥವಾ ಮಾರಿ ಒಂದು ದಾರಿ ತೋರಬೇಕಿದೆ. ಇದರಿಂದ ಹಳ್ಳಿಗರ ಆಸಕ್ತಿ ಕುಂದಿ, ಹಿಂದುಳಿಯಲು ಖಾಸಗಿ ಶಿಕ್ಷಣ ಸಂಸ್ಥೆಗಳು ನೇರವಾಗಿ ಹೊಣೆಯಾಗಿವೆ.

**ಡೊನೇಶನ್ ಪಿಡುಗಿಗೆ ಕಾರಣಗಳು :** ಹಣವಿಲ್ಲದೆ ಇಂದು ಯಾವ ಖಾಸಗಿ ಶಿಕ್ಷಣ ಸಂಸ್ಥೆಗಳು ಪ್ರವೇಶ ನೀಡುತ್ತಿಲ್ಲ. ಇಲ್ಲಿ ಹಣವೇ ಸಿಂಹಾಸನದ ಮೇಲಿರುವ ಅಗ್ರಜ ! ಕೆಲವೊಂದು ಗುಣಾತ್ಮಕ ಶಿಕ್ಷಣ ನೀಡುತ್ತವೆ, ನಿಜ. ಆದರೂ ಇದನ್ನೇ ಪ್ರಚಾರವಾಗಿರಿಸಿಕೊಂಡು ಅಗಾಧ ಹಣವನ್ನು ಸಂಗ್ರಹಿಸುವ ಪ್ರವೃತ್ತಿ ಬೆಳೆಸಿಕೊಂಡಿವೆ. ಪೋಷಕರು ತಮ್ಮ ಮಕ್ಕಳು ಬೇರೆಯವರ ಮಕ್ಕಳಿಗಿಂತ ಭಿನ್ನವಾಗಿರಬೇಕು, ಅಧಿಕ ಜಾಣರಿರಬೇಕು, ಹೆಚ್ಚು ಅಂಕ ಗಳಿಸಬೇಕು ಎಂದು ಅಭಿಲಾಷೆ ಹೊಂದಿರುತ್ತಾರೆ. ಆದ ಕಾರಣ ಹೆಸರಾಂತ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಎಷ್ಟೇ ಹಣವಾದರೂ ಸೀಟು ಕೊಡಿಸಲು ಕೈಮೀರಿ ಪ್ರಯತ್ನಪಡುತ್ತಾರೆ. ಸಾಲವೋ ಸೋಲವೋ ಮಾಡಿ ಕೇಳಿದಷ್ಟು ಹಣ ನೀಡಿ ಸ್ವರ್ಗದ ಬಾಗಿಲೇರಿದಂತೆ ಭಾಸಹೊಂದುತ್ತಾರೆ.

ಖಾಸಗಿ ಶಾಲೆಗಳೊಂದಿಗೆ ನಮ್ಮ ಕೆಲವು ಸರ್ಕಾರಿ ಶಾಲೆಗಳನ್ನು ಹೋಲಿಸಲು ಪ್ರಯತ್ನಿಸಿದಾಗ ಅಲ್ಲಿ ಸೌಲಭ್ಯಗಳ ಕೊರತೆ ಗೋಚರವಾಗುತ್ತದೆ. ಜೊತೆಗೆ ಅಶಿಸ್ತು, ಬೇಜವಾಬ್ದಾರಿತನ ತಾಂಡವವಾಡುತ್ತದೆ. ಗ್ರಂಥಾಲಯ, ವಾಚನಾಲಯ, ಪ್ರಯೋಗಾಲಯ, ಶೌಚಾಲಯ ಹೀಗೆ ಅನೇಕ ರೀತಿಯ ಸಮಸ್ಯೆಗಳು ಕಾಣಸಿಗುತ್ತವೆ. ಇವೆಲ್ಲ ಕಾರಣಗಳಿಂದ ಪೋಷಕರಿಗೆ ಸರ್ಕಾರಿ ಶಾಲೆಗಳ ಮೇಲೆ ತಾತ್ಸಾರ ಮನೋಭಾವನೆ ಮೂಡಲು ಎಡೆಮಾಡಿಕೊಟ್ಟಂತಾಗುತ್ತದೆ. ಕೆಲವೊಂದು ಶಾಲೆಗಳು ಇದರ ಹೊರತಾಗಿಯೂ ಅತ್ಯಾಕರ್ಷಕವಾಗಿವೆ. ಆದರೆ ಬಹುತೇಕರು ಎಷ್ಟೇ ಹಣವಾದರೂ ಸರಿ, ಡೊನೇಶನ್ ನೀಡಿ ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳಲ್ಲಿ ಓದಿಸಲು ಪ್ರಯತ್ನಿಸುತ್ತಾರೆ.

ಈ ಡೊನೇಶನ್ ಎಂಬ ಭೀಕರ ರೋಗವನ್ನು ಬೇರುಸಹಿತ ಕಿತ್ತು ಹಾಕುವ ಶಕ್ತಿ ಸರ್ಕಾರಕ್ಕಿದೆ. ಖಾಸಗಿ

ಶಾಲಾ ಕಾಲೇಜಿನ ಆಡಳಿತ ಕ್ರಮವನ್ನು ಸೂಕ್ಷ್ಮವಾಗಿ ಅವಲೋಕಿಸಿ, ಡೊನೇಶನ್ ತೆಗೆದುಕೊಂಡು ಪ್ರವೇಶ ನೀಡುವ ಶಿಕ್ಷಣ ಸಂಸ್ಥೆಗಳ ವಿರುದ್ಧ ಶಿಸ್ತಿನ ಕ್ರಮ ತೆಗೆದುಕೊಳ್ಳುವುದರ ಜೊತೆಗೇ ಯಾವುದೇ ರೀತಿಯಲ್ಲಿ ಸರ್ಕಾರ ಅನುಕೂಲಕರ ಸಹಾಯವನ್ನು ಕಡಿತಗೊಳಿಸಬೇಕು. ಸಾಧ್ಯವಾದರೆ ಮಾನ್ಯತೆಯನ್ನು ರದ್ದುಗೊಳಿಸಬೇಕು. ಆದರೆ ಸಮಾಜಪರ ಚಿಂತನೆಗಳನ್ನು ಹೊಂದಿದ ಸಂಸ್ಥೆಗಳಿಗೆ ಅಗತ್ಯ ಸಹಾಯವನ್ನೂ ಮಾಡಬೇಕಾಗುತ್ತದೆ. ಈ ಡೊನೇಶನ್ ರೋಗವನ್ನು ಪರಿಶೀಲಿಸಲು ರಾಜ್ಯಮಟ್ಟದಲ್ಲಿ ತನಿಖಾ ದಳಗಳನ್ನು ರೂಪಿಸಿ, ರಾಜ್ಯಾದ್ಯಂತ ಶಿಷ್ಟಾಚಾರದಿಂದ ಕರ್ತವ್ಯ ನಿರ್ವಹಿಸಲಿ. ಜೊತೆಗೆ ಸರ್ಕಾರ ತನ್ನ ಸರ್ಕಾರಿ ಶಾಲೆಗಳಿಗೆ ವೈಜ್ಞಾನಿಕ ರೀತಿಯಲ್ಲಿ ಸೌಲಭ್ಯಗಳನ್ನು ದೊರಕಿಸಬೇಕು.

ಇಂದು ಖಾಸಗಿ ಶಿಕ್ಷಣ ಸಂಸ್ಥೆಗಳು ಇಷ್ಟರಮಟ್ಟಿಗೆ ತಲೆಯೆತ್ತಿ ನಿಲ್ಲಲು ಒಂದು ರೀತಿಯಲ್ಲಿ ಸರ್ಕಾರಿ ಶಾಲೆಗಳು ಮತ್ತು ಶಿಕ್ಷಕರು ನೇರವಾಗಿ ಹೊಣೆಯಾಗುತ್ತಾರೆ. ಏಕೆಂದರೆ ಸರ್ಕಾರ ಕೋಟಿಗಟ್ಟಲೆ ಹಣ ಸುರಿದು ತರಬೇತಿಗಳನ್ನು, ಇನ್ನಿತರ ಸೌಲಭ್ಯಗಳನ್ನು ಒದಗಿಸಿದರೂ ಶಿಕ್ಷಕರು ದಕ್ಷತೆಯಿಂದ ಕಾರ್ಯ ನಿರ್ವಹಿಸದಿರುವುದು ಶೋಚನೀಯ ಸಂಗತಿಯಾಗಿದೆ. ಪ್ರಾಮಾಣಿಕತೆ, ಆಸಕ್ತಿ , ಆಕರ್ಷಣೀಯ ಬೋಧನೆಗಳು ಇಲ್ಲವಾಗಿವೆ. ಈ ನಿಟ್ಟಿನಲ್ಲಿ ಪ್ರತಿಯೊಬ್ಬ ಶಿಕ್ಷಕನು ಮೇಲಿನ ಅಂಶಗಳನ್ನು ಮೈಗೂಡಿಸಿಕೊಂಡು ಕರ್ತವ್ಯ ನಿರ್ವಹಿಸಿದ್ದೇ ಆದರೆ ಸರ್ಕಾರಿ ಶಾಲೆಗಳು ಮತ್ತೆ ಉನ್ನತಮಟ್ಟದಲ್ಲಿ ಪ್ರಜ್ವಲಿಸುವಂತಾಗುತ್ತದೆ. ಆಗ ಮಾತ್ರ ಖಂಡಿತ ಡೊನೇಶನ್ ಎಂಬ ಪೀಡೆಯನ್ನು ಓಡಿಸಲು ಸಾಧ್ಯವಾಗುತ್ತದೆ.

*ಆಲೂರು* **ಕೊಟ್ರೇಶ್ ಎಸ್. ಉಪ್ಪಾರ್**

## ಬೀದರದ ವೈಭವ

✉ ಡಾ॥ ಗುರುಲಿಂಗಪ್ಪ ಧಬಾಲೆಯವರು ಚರಿತ್ರೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಬೀದರದ ಮಹತ್ವವನ್ನು ಬಹಳ ಮನೋಜ್ಞವಾಗಿ ನಿರೂಪಿಸಿದ್ದಾರೆ (ಜೂನ್ ೨೦೧೭ರ ಸಂಚಿಕೆ). ಅಂತರರಾಷ್ಟ್ರೀಯವಾಗಿ ಸಹ ಬೀದರ ಕರ್ನಾಟಕದ ಸಾಂಸ್ಕೃತಿಕ ಕೊಡುಕೊಳೆಯ ವಿಚಾರದಲ್ಲಿ ಅನನ್ಯವಾದ ಸ್ಥಾನವನ್ನು ಹೊಂದಿದೆ. ರಷ್ಯಾದಿಂದ ಭಾರತಕ್ಕೆ ಪ್ರವಾಸಿಯಾಗಿ ಬಂದಿದ್ದ ಅಫನಾಸಿ ನಿಕಿಟಿನ್ ಹಾಗೆ ಪ್ರವಾಸ ಮಾಡಿದ ರಷ್ಯನರಲ್ಲಿ ಮೊಟ್ಟಮೊದಲಿಗ. ಅವನು ೧೫ನೆಯ ಶತಮಾನದಲ್ಲಿ ಬಂದು ಕೆಲಕಾಲ ಬೀದರದಲ್ಲಿ ತಂಗಿದ್ದ. ಅವನ ಪ್ರವಾಸ ಕಥನದಲ್ಲಿ ಅದನ್ನವನು ದಾಖಲಿಸಿದ್ದಾನೆ. ಬಿದರಿ ಕಲೆಯ ಬಗೆಗೆ ಅವನು ಪ್ರಶಂಸಾತ್ಮಕ ಮಾತುಗಳನ್ನಾಡಿದ್ದಾನೆ; ಕೆಲವು ಕಲಾತ್ಮಕ ವಸ್ತುಗಳನ್ನು ತನ್ನೊಡನೆ ಕೊಂಡುಹೋದುದಾಗಿಯೂ ದಾಖಲಿಸಿದ್ದಾನೆ.

ವಾಸ್ಕೋ ದ ಗಾಮನಿಗಿಂತಲೂ ಮುಂಚೆ ಬಂದಿದ್ದವನು ನಿಕಿಟಿನ್. ಗಾಮನ ಪರಂಪರೆಯು ವಸಾಹತುಶಾಹಿ ದರ್ಪ ಮತ್ತು ಲೂಟಿಗೆ ಹೆಸರಾಗಿದೆ; ಆದರೆ ನಿಕಿಟಿನ್‌ನ ಪರಂಪರೆ ಸ್ನೇಹ ಮತ್ತು ಸಹಕಾರಕ್ಕೆ ಪ್ರಸಿದ್ಧವಾಗಿದೆ. ಭಾರತವು ರಷ್ಯಾದೊಡನೆ ಸ್ವಾತಂತ್ರ್ಯಪೂರ್ವದಿಂದಲೂ ಸ್ನೇಹಸಂಬಂಧ ಹೊಂದಿದೆ. ತಿಲಕರನ್ನು ಆಂಗ್ಲರು ಬಂಧಿಸಿದ್ದಾಗ ರಷ್ಯಾದಿಂದ ಲೆನಿನ್ ಅದನ್ನು ಖಂಡಿಸಿದ್ದ ಮತ್ತು ಮುಂಬೈನ ಕಾರ್ಮಿಕರು ತಿಲಕರ ಪರವಾಗಿ ಮುಷ್ಕರ ಹೂಡಿದ್ದುದನ್ನು ಮೆಚ್ಚಿ ಸಂಭ್ರಮಿಸಿದ್ದ. ಬ್ರಿಟನ್, ಫ್ರಾನ್ಸ್ ಮತ್ತು ಪೋರ್ಚುಗಲ್‌ಗಳಿಂದ ಅಂತಹ ಪ್ರತಿಕ್ರಿಯೆ ಎಂದಿಗೂ ಬರಲಿಲ್ಲ. ನಿಕಿಟಿನ್ ಬೀದರಕ್ಕೆ ಬಂದು ಅಲ್ಲಿ ತಂಗಿದ್ದುದು ಚರಿತ್ರೆಯಲ್ಲಿ ಉಲ್ಲೇಖಾರ್ಹವಾಗಿದೆ.

*ಬೆಂಗಳೂರು* **ಜಿ. ರಾಮಕೃಷ್ಣ**

## ಡಾ॥ ಕೆ. ಎಲ್. ಜಿ. ಒಂದು ನೆನಪು

✉ ಇತ್ತೀಚೆಗೆ ನಿಧನರಾದ ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ ಅವರನ್ನು ಓರ್ವ ಸರಳ, ಸಜ್ಜನ ಕನ್ನಡ ಪ್ರಾಧ್ಯಾಪಕರು ಎಂದು ನೆನಪಿಸಿಕೊಳ್ಳಬಹುದು. ಅವರು ನ್ಯಾಷನಲ್ ಕಾಲೇಜು, ಜಯನಗರ ಶಾಖೆಯಲ್ಲಿ ಕನ್ನಡ ಉಪನ್ಯಾಸಕರಾಗಿ ಸೇರ್ಪಡೆಯಾದ ದಿನಗಳಿಂದಲೂ ನನಗೆ ಪರಿಚಿತರು. ನನ್ನ ಅನೇಕ ಕನ್ನಡ ಬರವಣಿಗೆಗಳ ತಪ್ಪುಗಳನ್ನು ತಿದ್ದಿ ನನಗೆ ನೆರವಾದ ಸಂದರ್ಭಗಳನ್ನು ಸ್ಮರಿಸುತ್ತೇನೆ. 'ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ' ಎಂಬ ಸಂಶೋಧನಾ ಪ್ರಬಂಧಕ್ಕೆ ಪಿಹೆಚ್.ಡಿ. ಪದವಿಯನ್ನು ಪಡೆದ ಅವರು ಅನೇಕ ವೈಚಾರಿಕ, ವಿಮರ್ಶಾತ್ಮಕ ಕೃತಿಗಳನ್ನು ರಚಿಸಿದ್ದಾರೆ.

ಅವರು ತಮ್ಮ 'ಇತಿಹಾಸದ ರಾಜಕೀಯ' ಎಂಬ ಕೃತಿಯಲ್ಲಿ ಆರ್ಯರು ಈ ದೇಶದ ಮೂಲನಿವಾಸಿಗಳು ಮತ್ತು ಅವರ ಸಂಸ್ಕೃತಿ 'ಭಾರತೀಯ ಸಂಸ್ಕೃತಿ' ಎಂಬ ವಾದಕ್ಕೆ ಪುಷ್ಟಿ ಮತ್ತು ಸಮರ್ಥನೆ ನೀಡಲು ದಾಖಲೆಗಳನ್ನು ತಿರುಚಿ, ಸುಳ್ಳು ಸಾಕ್ಷ್ಯಗಳನ್ನು ಸೃಷ್ಟಿಸಿದ ಡಾ॥ ಎನ್. ಎಸ್. ರಾಜಾರಾಂ ಅವರ ಸೈದ್ಧಾಂತಿಕ ಹುನ್ನಾರ ಮತ್ತು ಸಂಚುಗಳನ್ನು ತಮ್ಮ ಸ್ವಂತ ಅಧ್ಯಯನ ಹಾಗೂ ಅನೇಕ ಇತಿಹಾಸಕಾರರ, ಸಂಶೋಧಕರ ಗ್ರಂಥಗಳ ಆಧಾರದ ಮೇಲೆ ಬಯಲಿಗೆಳೆದಿದ್ದಾರೆ. ಬಲಪಂಥೀಯ ಸಂಘಟನೆಗಳ ಪ್ರಮೇಯಗಳನ್ನು, ಸೂತ್ರ ಸಿದ್ಧಾಂತಗಳನ್ನು ಪ್ರಶ್ನಿಸಿದ್ದಾರೆ.

ಶ್ರೀಯುತ ಎಸ್. ಜಿ. ಸರ್ದೇಸಾಯಿ ಅವರ ಭಾರತೀಯ ಇತಿಹಾಸದ ಚಿಂತನೆಗಳನ್ನು ಅವರ ಅನುವಾದ ಕೃತಿ 'ಭಾರತೀಯ ಇತಿಹಾಸದ ವೈಲಕ್ಷಣ್ಯಗಳು' ಎಂಬ ಪುಸ್ತಕದಲ್ಲಿ ಪರಿಚಯಿಸಿದ್ದಾರೆ. ಭಾರತೀಯ ಸಮಾಜದ ವಿಕಾಸದ ಅನೇಕ ಹಂತಗಳನ್ನು ಅವರು ಓದುಗರಿಗೆ ಪರಿಚಯಿಸಿದ್ದಾರೆ. ಅವರ ಮತ್ತೊಂದು ಕೃತಿ 'ಡಾ॥ ಎಸ್. ಎಲ್. ಭೈರಪ್ಪನವರ ಕಾದಂಬರಿಗಳೊಡನೆ ಧರ್ಮ-ಕರ್ಮ-ಜಿಜ್ಞಾಸೆ'ಯಲ್ಲಿ ಡಾ॥ ಭೈರಪ್ಪನವರ ಸಾಮಾಜಿಕ ನಿಲುವುಗಳನ್ನು ಪ್ರಶ್ನಿಸಿದ್ದಾರೆ. ಡಾ॥ ಭೈರಪ್ಪನವರು ಈ ನಾಡಿನ ಜನಪ್ರಿಯ ಕನ್ನಡ ಕಾದಂಬರಿಕಾರ ಎನ್ನುವುದು ಸರ್ವವಿದಿತ. ಆದರೆ ಅವರ ಕಾದಂಬರಿಗಳಲ್ಲಿ 'ಸನಾತನ ಹಿಂದು' ಸಂಪ್ರದಾಯ, ಪರಂಪರೆ ಹುಟ್ಟುಹಾಕಿದ ಆಚರಣೆಗಳು ಮತ್ತು ಮೌಲ್ಯಗಳು ಎಲ್ಲ ಕಾಲಕ್ಕೂ ಶ್ರೇಷ್ಠ ಎಂಬ ಚಿಂತನೆಗಳನ್ನು ಅಳವಡಿಸಿದ್ದಾರೆ. ಅವುಗಳನ್ನು ತೊಡೆದುಹಾಕುವ ಸಾಮಾಜಿಕ ಬದಲಾವಣೆಗಳು ಹಾನಿಕರ ಎಂಬ ಅಭಿಪ್ರಾಯಗಳನ್ನು ಮಂಡಿಸುತ್ತಾರೆ. ಬಹಳ ಸೂಕ್ಷ್ಮವಾಗಿ 'ಸನಾತನ ಹಿಂದು' ಮೌಲ್ಯಗಳತ್ತ ಹರಿವ ಅವರ ಒಲವನ್ನು ವ್ಯಕ್ತಪಡಿಸಿದ್ದಾರೆ. ಡಾ॥ ಕೆ. ಎಲ್. ಜಿ. ಅವರು ಡಾ॥ ಭೈರಪ್ಪನವರ ಪ್ರತಿಗಾಮಿ ಧೋರಣೆಗಳನ್ನು ಮತ್ತು ಸಾಮಾಜಿಕ ಪ್ರಗತಿಯ ಬಗ್ಗೆ ಅವರು ತೋರುವ ಅಸಡ್ಡೆ, ಅನಾದರಗಳನ್ನು ಸುದೀರ್ಘವಾಗಿ ಪ್ರಸ್ತಾಪಿಸಿದ್ದಾರೆ. ಡಾ॥ ಕೆ. ಎಲ್. ಜಿ. ಅವರು ಉತ್ತರ ಭಾರತದ ಹಳ್ಳಿಗಳಲ್ಲಿ ಅಂತರಜಾತೀಯ, ಅಂತರಧರ್ಮೀಯ ವಿವಾಹಗಳನ್ನು ಆಯ್ಕೆ ಮಾಡಿಕೊಂಡ ಯುವಕ, ಯುವತಿಯರ ಮೇಲೆ ಖಾಪ್ ಪಂಚಾಯತಿಗಳು ನಡೆಸಿದ ದೌರ್ಜನ್ಯ, ಹಲ್ಲೆ ಮತ್ತು ಹತ್ಯೆಗಳನ್ನು ತಮ್ಮ ಬರಹಗಳಲ್ಲಿ ತೀವ್ರವಾಗಿ ಖಂಡಿಸಿದ್ದರು.

'ಹೊಸತು' ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯರು, ಸಂವೇದನಾಶೀಲ, ವಿಚಾರವಂತ ಲೇಖಕರೂ ಆಗಿದ್ದ ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯನವರಿಗೆ ನನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

*ಬೆಂಗಳೂರು* **ಶಂಕರನಾರಾಯಣ**

## ರಾಷ್ಟ್ರೀಯತೆ : ಒಂದು ಮರುಚಿಂತನೆಯೊಂದಿಗೆ

✉ ನಾನೊಬ್ಬ ಭಾರತೀಯನು. ಆದ್ದರಿಂದ, ಭಾರತದ ರಾಷ್ಟ್ರಗೀತೆಗೆ ಗೌರವ ಕೊಡಬೇಕೇ? ನಾನೊಬ್ಬ ಪ್ರಾಣಿಪ್ರಿಯನು. ಆದ್ದರಿಂದ ಭಾರತದ ರಾಷ್ಟ್ರ ಪ್ರಾಣಿಗೆ ಗೌರವ ಕೊಡಬೇಕೇ? ಇವೆಲ್ಲವೂ ನನ್ನ ವೈಯಕ್ತಿಕ ತೀರ್ಮಾನಕ್ಕೆ ಬಿಟ್ಟದ್ದು.

ಭಾರತದ ಮಟ್ಟಿಗೆ ರಾಷ್ಟ್ರೀಯತೆಯು ಹಿಂದುಗಳಿಗೆ ಮಾತ್ರವಾಗಿದೆ ಎನ್ನುವುದು ಕೆಲವರ ವಾದ. ರಾಷ್ಟ್ರೀಯತೆಯ ಹೆಸರಿನಲ್ಲಿ ಕ್ರೂರತನವನ್ನು, ಕಗ್ಗೊಲೆಗಳನ್ನು ನಡೆಸುವವರು ಇವರಾಗಿದ್ದಾರೆ. ಇವರೆಡೆಯಲ್ಲಿ ಜೀವಿಸುವ ಅಲ್ಪಸಂಖ್ಯಾತರ ಗತಿ ಏನಾದರೂ ಏನು? ಭಾರತದಲ್ಲಿ ಬೃಹತ್ತಾಗಿ ಚರ್ಚಿಸಲ್ಪಟ್ಟ ವಿಷಯ ಹಿಂದೂ ರಾಷ್ಟ್ರೀಯತೆ.

ಆರ್.ಎಸ್.ಎಸ್.ನೊಂದಿಗೆ ಮೋದಿ ಸರ್ಕಾರ ಕೈ ಜೋಡಿಸುತ್ತಿದೆ. ಹಿಂದೂ ರಾಷ್ಟ್ರೀಯತೆಗೆ ಸಾಥ್ ನೀಡುತ್ತಿದೆ. ಆಧುನಿಕ ಭಾರತದ ತೊಂದರೆಗಳೆಲ್ಲವೂ ಅತಿಯಾದ ರಾಷ್ಟ್ರೀಯತೆಯಿಂದಾಗಿದೆ. ಪರಸ್ಪರ ದೇಶಗಳ ನಡುವೆ ಯುದ್ಧ ನಡೆಯುವುದು ರಾಷ್ಟ್ರೀಯತೆಯ ಭಾವದಿಂದಲೇ ಎನ್ನಬಹುದು.

*ಗುಂಡಿಕೆರೆ, ಕೊಡಗು* **ಮುಜೀಬ್ ರೆಹ್ಮಾನ್**

### ತಿದ್ದುಪಡಿ

ಜೂನ್ ೨೦೧೭ರಲ್ಲಿ ನನ್ನ ಅನುವಾದಿತ ಲೇಖನ 'ಬೌದ್ಧ ಧರ್ಮದ ಪ್ರೇರಣೆ ಮತ್ತು ಆಚಾರ' ಲೇಖನದ ಕೊನೆಯ ಸಾಲಿನಲ್ಲಿ ಒಂದು ತಪ್ಪು ಉಳಿದುಕೊಂಡಿದೆ....

'ಗೃಹಾತ್ಮನು ಪಾಲಿಸಬೇಕಾದ ಪಂಚಶೀಲ...' ಈ ಸಾಲನ್ನು 'ಗೃಹಸ್ಥನು ತ್ಯಜಿಸಬೇಕಾದ ಪಂಚಶೀಲ...' ಎಂದು ಓದಿಕೊಳ್ಳಬೇಕಾಗಿ ವಿನಂತಿ.

ಭಾಷಾಂತರದಲ್ಲಾದ ಈ ತಪ್ಪಿಗೆ ಕ್ಷಮೆ ಇರಲಿ.

**ಚಂದ್ರಕಾಂತ ಪೋಕಳೆ**, ಬೆಳಗಾವಿ

## ಬೌದ್ಧಧರ್ಮದ ಪ್ರೇರಣೆ ಮತ್ತು ಆಚಾರ – ಒಂದು ಪ್ರತಿಕ್ರಿಯೆ

ಪ್ರಸ್ತುತ ಲೇಖನವು ನವಬೌದ್ಧರ ದ್ವಂದ್ವಗಳನ್ನು ಮತ್ತು ತುಮುಲಗಳನ್ನು ಅಭಿವ್ಯಕ್ತಿಸುತ್ತದೆ. ಈ ತುಮುಲಗಳು ಮತ್ತು ದ್ವಂದ್ವಗಳು ಮತಾಂತರಗೊಂಡ ಜನರ ಪ್ರಾರಂಭಿಕ ಸಿಂಡ್ರೋಮ್ ಆಗಿರುತ್ತವೆ. ಅತ್ತ ತಲೆತಲಾಂತರದಿಂದ ರೂಢಿಸಿಕೊಂಡು ಬಂದ ಆಚರಣೆಗಳು, ಶಿಷ್ಟಾಚಾರಗಳು ಮತ್ತು ಸಂಪ್ರದಾಯಗಳು ಮತಾಂತರಿಗಳನ್ನು ಸಂಪೂರ್ಣ ಬಿಟ್ಟುಹೋಗಿರುವುದಿಲ್ಲ. ಇತ್ತ ಹೊಸ ಧರ್ಮದ ಸಾರವನ್ನು ಸಂಪೂರ್ಣ ತಿಳಿದಿರುವುದಿಲ್ಲ. ಆಗ ಈ ದ್ವಂದ್ವಗಳು ಮತ್ತು ಮಾನಸಿಕ ತೊಳಲಾಟಗಳು ತಲೆಯೆತ್ತಿ ಸಮುದಾಯವನ್ನು ಹೈರಾಣಾಗಿಸುತ್ತವೆ. ಆದರೆ ಪರಿವರ್ತನೆಗೆ, ಮತಾಂತರಕ್ಕೆ ಮಾನಸಿಕ ತಯಾರಿಯು ನಿಧಾನವಾಗಿರುತ್ತದೆ. ಮತ್ತೆ ಲೇಖಕರು ಪ್ರಸ್ತಾಪಿಸಿದ ಹಲವು ಪೀಳಿಗೆಗಳಿಂದ ಪಳಗಿದ ಧರ್ಮ ಮಾರ್ತಾಂಡರು ಮತಾಂತರಿಗಳನ್ನು ಇನ್ನಷ್ಟು ಹೈರಾಣು ಮಾಡುತ್ತಿರುತ್ತಾರೆ.

ದಲಿತರಿಗೆ ಹಿಂದುಧರ್ಮದಲ್ಲಿನ ಅಸ್ಪೃಶ್ಯತೆ ಮತ್ತು ಸಾಮಾಜಿಕ ಅಸಮಾನತೆ ಉಸಿರುಗಟ್ಟಿಸುತ್ತಿವೆ. ಅವುಗಳಿಂದ ಪಾರಾಗಲು ಅವರು ದಾರಿ ಹುಡುಕುತ್ತಿರುವಾಗ ಬೌದ್ಧಧರ್ಮ ಒಂದು ಆಶ್ರಯ ತಾಣವಾಗಿ ಕಂಡಿದೆ. ಡಾ॥ ಅಂಬೇಡ್ಕರರಿಗೂ ಹಿಂದುಧರ್ಮದಿಂದ ಬಿಡುಗಡೆ ಬೇಕಿತ್ತು. ಬೌದ್ಧಧರ್ಮದಲ್ಲಿ ವರ್ಣವ್ಯವಸ್ಥೆ ಅಸ್ಪೃಶ್ಯತೆ ಇಲ್ಲದಿರುವುದನ್ನು ಕಂಡುಕೊಂಡರು. ಸಮಾನತೆಯ ಹಸಿವಿಗೆ ಬೌದ್ಧಧರ್ಮ ಒಂದು ಮೃಷ್ಟಾನ್ನವಾಗಿ ಅವರಿಗೆ ಕಂಡಿದೆ. ಹಾಗಾಗಿಯೇ ಅಂಬೇಡ್ಕರರು 'ನಾನು ಹಿಂದು ಆಗಿ ಸಾಯಲಾರೆ' ಎಂದು ಘೋಷಿಸಿದರು. ಬೌದ್ಧಧರ್ಮವು ದಲಿತರಿಗೆ ಸಮಾನತೆಯ ಸಾಮಾಜಿಕ ವ್ಯವಸ್ಥೆಯಾಗಿ ಕಾಣಲು ಕಾರಣ ಬುದ್ಧನ ವರ್ಣವ್ಯವಸ್ಥೆಯ ಬಗೆಗಿನ ತಿರಸ್ಕಾರ. ಅದು ವಿಶೇಷವಾಗಿ ಬ್ರಾಹ್ಮಣ ಶ್ರೇಷ್ಠತೆಯ ನಿರಾಕರಣವೇ ಆಗಿದೆ.

'ಅಸ್ಸಲಾಯನ ಸುತ್ತ'ದಲ್ಲಿ ಬುದ್ಧನು ಬ್ರಾಹ್ಮಣರ ಶ್ರೇಷ್ಠತೆಯನ್ನು ಭಂಗಗೊಳಿಸುತ್ತಾನೆ. ಒಮ್ಮೆ ಬ್ರಾಹ್ಮಣರು ಅಸ್ಸಲಾಯನ ಎಂಬ ಬ್ರಾಹ್ಮಣ ಯುವಕನ ನೇತೃತ್ವದಲ್ಲಿ ಬಂದು ಹೀಗೆ ಹೇಳುತ್ತಾರೆ : "ಭಗವಾನ್, ಬ್ರಾಹ್ಮಣರು ಹೀಗೆ ಹೇಳುತ್ತಾರೆ; ಬ್ರಾಹ್ಮಣರದ್ದೇ ಶ್ರೇಷ್ಠ ಜಾತಿ. ಬೇರೆ ಜಾತಿಗಳು ತುಚ್ಛವಾದುವು. ಬ್ರಾಹ್ಮಣರು ಮಾತ್ರ ಬ್ರಹ್ಮನ ಮುಖದಿಂದ ಜನಿಸಿದವರು."

ಆಗ ಹಲವಾರು ಕಾರಣಗಳನ್ನು ನೀಡಿ ಬ್ರಾಹ್ಮಣರ ವಾದಗಳನ್ನು ಬುದ್ಧ ಭಂಗಗೊಳಿಸುತ್ತಾನೆ. 'ಬ್ರಾಹ್ಮಣರ ಪತ್ನಿಯೂ ಎಲ್ಲರಂತೆಯೇ ಜನ್ಮ ನೀಡುತ್ತಾಳೆ. ಪ್ರತಿಯೊಬ್ಬರೂ ಸ್ನಾನ ಮಾಡಿ ಶುದ್ಧರಾಗುವರು. "ಅಸ್ಸಲಾನ, ಈಗ ಇಬ್ಬರು ಬ್ರಾಹ್ಮಣರಿರುತ್ತಾರೆ. ಒಬ್ಬ ವೇದ ಜ್ಞಾನದಲ್ಲಿ ಪರಿಣತ. ಆದರೆ ದುರಾಚಾರಿ, ದುಶ್ಶೀಲನಾಗಿರುತ್ತಾನೆ ಮತ್ತು ಇನ್ನೊಬ್ಬ ಅವಿದ್ಯಾವಂತ. ಆದರೆ ಚಾರಿತ್ರ್ಯವಂತನಾಗಿರುತ್ತಾನೆ. ಇವರಲ್ಲಿ ಯಾರಿಗೆ ಗೌರವ ಆತಿಥ್ಯ ಸಿಗುತ್ತದೆ ?" ಎಂದು ಕೇಳಿದಾಗ "ಅವಿದ್ಯಾವಂತನಾದರೂ ಶೀಲವಂತನಾದವನಿಗೆ ಗೌರವ ಆತಿಥ್ಯ ಸಿಗುತ್ತದೆ" ಎಂದು ಅಸ್ಸಲಾಯನು ಉತ್ತರಿಸುತ್ತಾನೆ. ಹೀಗೆ ಬೌದ್ಧಧರ್ಮ ಶೀಲಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡುತ್ತದೆ. ಯಜ್ಞ–ಯಾಗಾದಿಗಳಲ್ಲಿ ಪ್ರಾಣಿಬಲಿಗಳನ್ನು ಖಂಡಿಸುತ್ತದೆ. ದೈಹಿಕ ಶುಚಿತ್ವದ ಜೊತೆಗೆ ಮಾನಸಿಕ ಶುಚಿತ್ವಕ್ಕೆ ಬುದ್ಧ ಹೆಚ್ಚು ಬೆಲೆ ಕೊಡುತ್ತಾನೆ.

ಬೌದ್ಧರಲ್ಲಿನ ವರ್ಣವ್ಯವಸ್ಥೆಯ ಖಂಡನೆ ಮತ್ತು ಸಾಮಾಜಿಕ ಸಮಾನತೆಯ ಆಶಯವು ಅಂಬೇಡ್ಕರರನ್ನು ಹೆಚ್ಚಾಗಿ ಆಕರ್ಷಿಸಿದೆ. ಹಾಗಾಗಿ ದಲಿತರಿಗೆ ಬೌದ್ಧರಾಗಿ ಮತಾಂತರಗೊಳ್ಳುವಂತೆ ಕೇಳಿಕೊಂಡರು. ಆದರೆ ಅಂಬೇಡ್ಕರರಷ್ಟು ಅವರ ಅನುಯಾಯಿಗಳು ಬೌದ್ಧಧರ್ಮವನ್ನು ಅಧ್ಯಯನ ಮಾಡಿಲ್ಲವೋ ಅಥವಾ ಅವರಿಗೆ ಆ ಹೊಸಧರ್ಮದ ಬಗ್ಗೆ ಹೆಚ್ಚಿನ ಮಾಹಿತಿ ಮತ್ತು ಮಾನಸಿಕ ತರಬೇತಿ ಕೊಡಲಾಗಿಲ್ಲವೊ ತಿಳಿಯದು. ಹೊಸ ಧರ್ಮವನ್ನು ಅತಿಶೀಘ್ರದಲ್ಲಿ ಒಪ್ಪಲು ಒಂದು ಸಾಂಪ್ರದಾಯಿಕ ಹಿನ್ನೆಲೆಯಿಂದ ಬಂದ ಜಾತಿಗೆ ತುಸು ಕಷ್ಟವೇ. ಬೌದ್ಧಧರ್ಮದ ತತ್ವಗಳನ್ನು ಮತ್ತು ಆಚರಣೆಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಲು ಸ್ವಲ್ಪ ಸಮಯ ಬೇಕು. ಹೇಗೆ ಗೋವಾದಲ್ಲಿ ಪೋರ್ತುಗೀಸರು ಕೊಂಕಣಿ ಬ್ರಾಹ್ಮಣರನ್ನು ಬಲಾತ್ಕಾರವಾಗಿ ಮತಾಂತರ ಗೊಳಿಸಿದಾಗ ಅವರಿಗೂ ಇದೇ ಬಗೆಯ ದ್ವಂದ್ವ ಕಾಡಿತ್ತು. ಆದರೆ ಈಗ ಮತಾಂತರಗೊಂಡ ಕೊಂಕಣಿ ಕ್ರಿಶ್ಚಿಯನ್ನರು ಕ್ರೈಸ್ತ ಮತವನ್ನು ಚಾಚೂ ತಪ್ಪದೆ ಪಾಲಿಸುತ್ತಾರೆ. ಬಹುಶಃ ತತ್ವಗಳಿಗಿಂತ ಆಚರಣೆಗಳ ಅನುಷ್ಠಾನ ಅವರನ್ನು ಹೊಸ ಧರ್ಮಕ್ಕೆ ತಮ್ಮನ್ನು ಒಪ್ಪಿಸಿಕೊಳ್ಳುವಂತೆ ಮಾಡುತ್ತದೆ. ಈ ಮತಾಂತರ ಗೊಂಡವರ ತುಮುಲ ತಾತ್ಕಾಲಿಕವಾದದ್ದು ಎಂಬುದು ನನ್ನ ಅಭಿಪ್ರಾಯ.

ಬೌದ್ಧರು ಶಾಕಾಹಾರಿಗಳಾಗಿರಬೇಕಿಲ್ಲ. ಬುದ್ಧನು ಶಾಕಾಹಾರಿಯಾಗಿರಲಿಲ್ಲ. ಅವನು ತನ್ನ ಅನುಯಾಯಿಗಳಿಗೆ ಶಾಕಾಹಾರಿಗಳಾಗಿ ಎಂದು ಬೋಧಿಸಿಲ್ಲ. ಇವತ್ತಿಗೂ ಕೂಡಾ ಎಷ್ಟೋ ಬೌದ್ಧರು ಶಾಕಾಹಾರಿಗಳಲ್ಲ. ಒಬ್ಬ ಕಟ್ಟುನಿಟ್ಟಾಗಿ ಶಾಕಾಹಾರಿಯಾಗಿದ್ದಾನೆ, ಆದರೆ ಸ್ವಾರ್ಥಿ, ಅಪ್ರಾಮಾಣಿಕ ಮತ್ತು ಸಣ್ಣ ಮನಸ್ಸಿನವನಾಗಿರುತ್ತಾನೆ. ಇನ್ನೊಬ್ಬ ಶಾಕಾಹಾರಿಯಲ್ಲ ಆದರೆ ಇನ್ನೊಬ್ಬರ ಬಗ್ಗೆ ಕಾಳಜಿಯುಳ್ಳವನೂ, ಪ್ರಾಮಾಣಿಕನೂ, ಉದಾರಿಯೂ ಮತ್ತು ಕರುಣೆಯುಳ್ಳವನೂ ಆಗಿರುತ್ತಾನೆ. ಇವರಲ್ಲಿ ಯಾವನು ಹೆಚ್ಚು ಒಳ್ಳೆಯವನು ? ಬುದ್ಧ ಸದಾಚಾರಕ್ಕೆ, ಶೀಲಕ್ಕೆ ಹೆಚ್ಚು ಒತ್ತು ನೀಡಿದ.

ಅಂಬೇಡ್ಕರರು ಬೌದ್ಧಧರ್ಮಕ್ಕೆ ಮತಾಂತರ ಗೊಳಿಸುವಾಗ ೨೨ ಪ್ರತಿಜ್ಞೆಗಳನ್ನು ಮತಾಂತರಗೊಂಡವರಿಂದ ಮಾಡಿಸಬೇಕು ಎನ್ನುತ್ತಾರೆ. ದಲಿತರು ಅಂಬೇಡ್ಕರ್ ಬೌದ್ಧಧರ್ಮವನ್ನು ಓದಬೇಕು, ಅದನ್ನು ಅನುಷ್ಠಾನಕ್ಕೆ ತಂದರೆ ಇಂಥ ದ್ವಂದ್ವ ಮತ್ತು ಮಾನಸಿಕ ತುಮುಲಗಳಿಂದ ಪಾರಾಗಬಹುದು ಎಂದರೆ ತಪ್ಪಾಗಲಾರದಷ್ಟೆ ?

ಕಿನ್ನಿಗೋಳಿ **ಉದಯಕುಮಾರ ಹಬ್ಬು**

## ಬೌದ್ಧ ಧರ್ಮ ಕುರಿತು ತಪ್ಪು ಕಲ್ಪನೆ

ದುರ್ಗಾ ಭಾಗವತ ಅವರ ಲೇಖನ "ಬೌದ್ಧ ಧರ್ಮದ ಪ್ರೇರಣೆ ಮತ್ತು ಆಚಾರ" ಪೂರ್ವಗ್ರಹ ಮತ್ತು ಅಪಕ್ವ ತಿಳಿವಳಿಕೆಯ ಫಲ. ದಲಿತರ ಮತಾಂತರದ ಮೂಲವು ಸಾಮಾಜಿಕ – ಆರ್ಥಿಕ ಅಸಂತೋಷದಲ್ಲಿದೆ ಎಂದು ಹೇಳಿರುವುದು ಭಾಗಶಃ ಸರಿ. ಆದರೆ, ಧಾರ್ಮಿಕ ಭಾವನೆಯಿಂದಲ್ಲ ಎಂದಿರುವುದನ್ನು ಒಪ್ಪಲು ಸಾಧ್ಯವಿಲ್ಲ. ಯಾಕೆಂದರೆ, ದಲಿತರಿಗೆ ಪ್ರಾಕೃತಿಕವಾಗಿ ಲಭ್ಯವಿರುವ ಮೂಲಭೂತ ಅನುಕೂಲಗಳನ್ನು ಪಡೆಯಲು ಅವಕಾಶ ಕೊಡದ ಒಂದು ಜನವರ್ಗದೊಡನೆ ಗುರುತಿಸಿಕೊಳ್ಳುವುದು ಅವಮಾನಕರ ಎಂದು ಬಾಬಾಸಾಹೇಬರು ಭಾವಿಸಿದ್ದರು. ೧೯೩೬ರಲ್ಲಿ ನಡೆದ ಐತಿಹಾಸಿಕ ಮಹಾಡ್ ಕೆರೆಯಲ್ಲಿ ನೀರು ಕುಡಿಯುವ ಮತ್ತು ಕಾಳಾರಾಮ್ ದೇವಸ್ಥಾನ ಪ್ರವೇಶಿಸುವ ಆಂದೋಳನಗಳನ್ನು ಮುನ್ನಡೆಸಿದ ಅವರಿಗೆ ಅಲ್ಲಿ ಕಂಡುಂಡ ಸೋಲು ಮತ್ತು ನೋವು ಧಾರ್ಮಿಕ ಪರಕೀಯತೆಯನ್ನು ಹುಟ್ಟುಹಾಕಿತು. ಇದು ಮಡಿ, ಮೈಲಿಗೆಯ ವಿಚಾರವಲ್ಲದೆ ಬೇರೇನೂ ಅಲ್ಲ. ಅದಕ್ಕೂ ಮುಂಚೆಯೆ ಅವರು ೧೯೩೫ರಲ್ಲಿ ಅಯೋಲದಲ್ಲಿ ನಡೆದ ಸಮ್ಮೇಳನದಲ್ಲಿ "ನಾನು ಹಿಂದೂ ಆಗಿ ಸಾಯಲಾರೆ" ಎಂಬ ಶಪಥವನ್ನು ಮಾಡಿದ್ದರು. ಆದ್ದರಿಂದ ಬಾಬಾಸಾಹೇಬರ ಬೌದ್ಧ ಧರ್ಮ ಸ್ವೀಕಾರವನ್ನು 'ರೋಗ ಒಂದು ಬಗೆ, ಔಷಧ ಮತ್ತೊಂದು ಬಗೆ' ಎಂದು ಟೀಕಿಸಿರುವುದು ಸರಿಯಲ್ಲ. ಇಂದಿಗೂ ದಲಿತರಿಗೆ ದೇವಸ್ಥಾನ ಪ್ರವೇಶ ಸುಲಭವಲ್ಲ ಎಂಬುದನ್ನು ಅವರು ಮನಗಾಣಬೇಕಾಗಿದೆ.

ದುರ್ಗಾ ಅವರು ಹಿಂದೂ ಸಮುದಾಯವು 'ಪರಧರ್ಮ ಸಹಿಷ್ಣುತೆ'ಯ ಏಕೈಕ ಗುಣವನ್ನು ಇಂದಿಗೂ ಉಳಿಸಿಕೊಂಡು ಬಂದಿದೆ ಎಂದು ಹೇಳುತ್ತಾರೆ. ಇದು ತಥಾಕಥಿತ ಹಳಸಲು ವಾದವಾಗಿದೆ. ವಾಸ್ತವವಾಗಿ ಅದಕ್ಕೆ ಇತರ ಶ್ರದ್ಧೆಗಳನ್ನು ಸಹಿಸಿಕೊಳ್ಳದೆ ಅನ್ಯಮಾರ್ಗವೇ ಇಲ್ಲ. ಕಾರಣ, ಹಿಂದೂ ಎನ್ನುವುದು ಏಕತತ್ವ ನಿರೂಪಿತ, ಏಕವ್ಯಕ್ತಿ ಪ್ರಬೋಧಿತ, ಏಕಶಿಲಾರಚನೆಯ ಸುಭದ್ರ, ಸದೃಢ ನಿರ್ಮಿತಿಯಲ್ಲ. ಅದು ಒಂದಕ್ಕೊಂದು ಸಂಬಂಧಪಡದ ಅನೇಕ ನಂಬಿಕೆಗಳ, ವಿಭಿನ್ನ ಹಾಗೂ ಮಿಶ್ರ ಜನಾಂಗೀಯ ಹಿನ್ನೆಲೆಯುಳ್ಳ, ವೈರುಧ್ಯಪೂರ್ಣ ಆಚರಣೆಗಳನ್ನು ಪಾಲಿಸುವ ಅಸಂಖ್ಯಾತ ಸಮುದಾಯಗಳ ಮೊತ್ತ. ಇನ್ನೊಂದರ್ಥದಲ್ಲಿ ಮೇಲುಕೀಳಿನ ಶ್ರೇಣೀಕೃತ ಜಾತಿಗಳ ಸಮೂಹ. ಕೀಳರಿಮೆಯಿಂದ ನರಳುವ ಜಾತಿಗಳು ಅಲ್ಲಿಂದ ಕಳಚಿಕೊಳ್ಳಲು ತವಕಿಸುತ್ತವೆಯೇ ಹೊರತು ಅದನ್ನು ಉಳಿಸಲು ಹೋರಾಡ ಬಯಸುವುದಿಲ್ಲ. ಅದರಿಂದ ಅವರಿಗೆ ಪ್ರಯೋಜನವೂ ಇಲ್ಲ. ಮೇಲರಿಮೆಯನ್ನು ಹುಟ್ಟಾ ಪಡೆಯುವ ಮೇಲಿನ ಮೂರು ವರ್ಣಗಳು ಅಲ್ಪಸಂಖ್ಯಾತರೆ ಆಗಿದ್ದರು. ಆದ್ದರಿಂದ ಅವರು ಅಸಹಾಯಕತೆಯಿಂದ ನೋಡ ಬಲ್ಲವರಾಗಿದ್ದರೇ ಹೊರತು ಹೋರಾಡುವ ಮನೋಭಾವವಿದ್ದವರಲ್ಲ (ಮೊಘಲರು ಮತ್ತು

ಬ್ರಿಟಿಷರ ಕಾಲದಲ್ಲಿ ಮೇಲ್ವರ್ಣದವರು ನಡೆದುಕೊಂಡ ಅಥವಾ ಅವರು ಇವರನ್ನು ಬಳಸಿಕೊಂಡ ರೀತಿಯನ್ನು ಗಮನಿಸಿ). ಇತ್ತೀಚಿನ ವರ್ಷಗಳಲ್ಲಿ ಈ ಮೇಲರಿಮೆ ಪ್ರಬಲ ಶೂದ್ರ ಜಾತಿಗಳಿಗೂ ಇಳಿದುಬಿಟ್ಟಿರುವುದರಿಂದ ಧರ್ಮದ ಹೆಸರಿನಲ್ಲಿ ಸಂಘಟನೆಗಳು ಹುಟ್ಟಿಕೊಂಡಿವೆ ನಿಜ, ಆದರೆ ಸಹಿಷ್ಣುತೆಯನ್ನು ಎಷ್ಟರಮಟ್ಟಿಗೆ ವ್ಯಕ್ತಪಡಿಸುತ್ತಿವೆ ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಆದ್ದರಿಂದ ಹಿಂದೂ ಎನ್ನುವುದು ಅಕಾಡೆಮಿಕ್ ಉದ್ದೇಶಕ್ಕಾಗಿ ಬಳಸಿರಬಹುದಾದ ಪದವೇ ವಿನಾ ಅದಕ್ಕೆ ಒಂದು ಸುಪುಷ್ಟ ಮೂಲನೆಲೆ ಇಲ್ಲ. ಅದು ಉಳಿದಿರುವುದು ಪಟ್ಟಭದ್ರರ ಜಾತಿಪ್ರೀತಿಯಿಂದಲೇ ಹೊರತು ಅದರ ಉದಾತ್ತತೆಯಿಂದಾಗಲೀ, ಒಳಗೊಳ್ಳುವಿಕೆಯಿಂದಾಗಲೀ ಅಲ್ಲ. ಶೋಷಣೆಯ ತಳಭಾಗದಲ್ಲಿರುವವರು ಕಡಿಮೆಯಾದ ಹಾಗೆ ಅದು ಶಿಥಿಲವಾಗುತ್ತಾ ಹೋಗುತ್ತದೆ. ಒಂದು ವೇಳೆ ಅಸ್ಪೃಶ್ಯರೆಲ್ಲರೂ ಮತಾಂತರವಾಗಿಬಿಟ್ಟರೆ ಕೀಳರಿಮೆಯ ಸಂಪೂರ್ಣ ಬಿಸಿ ಕೆಳಜಾತಿ ಶೂದ್ರರಿಗೆ ತಟ್ಟುತ್ತದೆ.

ಇನ್ನು, ದುರ್ಗಾ ಅವರು ಧರ್ಮಚಕ್ರ ಪರಿವರ್ತನೆ 'ಹೊಸ ಪ್ರಮೇಯವನ್ನು ಶೋಧಿಸುವಂತಹದೇನೂ ಆಗಿರಲಿಲ್ಲ' ಎಂದು ಹೇಳುತ್ತಾರೆ. ಅವರ ತಿಳಿವಳಿಕೆಯ ಪ್ರೌಢಿಮೆಯನ್ನು ನಾನು ಪ್ರಶ್ನಿಸಲು ಹೋಗುವುದಿಲ್ಲ. ಬೌದ್ಧ ಧರ್ಮದ ಮೇಲೆ ಇಂತಹ ಆಕ್ರಮಣಗಳು ನಡೆಯುತ್ತಲೇ ಇವೆ ಮತ್ತು ಹಾಗೆಯೆ ಆವಿಯಾಗಿ ಹೋಗಿಬಿಡುತ್ತವೆ. ಇಲ್ಲದಿದ್ದರೆ ಇತ್ತ ದೇವರನ್ನು, ಆತ್ಮವನ್ನೂ ನಿರಾಕರಿಸಿದ ಅತ್ತ ಆಕ್ರಮಣಶೀಲವೂ ಅಲ್ಲದ, ಪ್ರಚಾರಶೀಲವೂ ಅಲ್ಲದ ಬೌದ್ಧವು ಕೇವಲ ತನ್ನ ವಿಶಿಷ್ಟ ತತ್ವಗಳಿಂದಲೇ ಜನರನ್ನು ಆಕರ್ಷಿಸುತ್ತಾ ೨೬೦೦ ವರ್ಷಗಳು ಬದುಕುಳಿಯಲು ಸಾಧ್ಯವಿರುತ್ತಿರಲಿಲ್ಲ. ತನ್ನ ನಂತರ ಹುಟ್ಟಿದ ಸೆಮೆಟಿಕ್ ಧರ್ಮಗಳಿಗಿಂತಲೂ ಹೆಚ್ಚು ವೈಚಾರಿಕ, ವೈಜ್ಞಾನಿಕ ಎಂಬ ಪ್ರಶಂಸೆಗೆ ಒಳಗಾಗುತ್ತಿರಲಿಲ್ಲ. ಇಂದಿಗೂ ಅದು ಜಗತ್ತಿನಲ್ಲಿ ವೇಗವಾಗಿ ಬೆಳೆಯುತ್ತಿರುವ ಧರ್ಮವೆನಿಸಿಕೊಂಡಿದೆ. ಆದರೆ, ಬುದ್ಧನ ಮಾರ್ಗವು ಗೃಹಸ್ಥಾಶ್ರಮ ಸುಧಾರಕರದ್ದಾಗಿರಲಿಲ್ಲ, ಸಂನ್ಯಾಸಿಯದ್ದಾಗಿತ್ತು ಎಂದಿರುವುದು ಅವರ ತಪ್ಪುಕಲ್ಪನೆಯಾಗಿದೆ. ಬುದ್ಧ ಹೇಳಿದ ಆರ್ಯ ಸತ್ಯಗಳು, ದುಃಖದ ನಿರ್ವಚನೆ ಮತ್ತು ಅಷ್ಟಾಂಗ ಮಾರ್ಗಗಳು ಗೃಹಸ್ಥರಿಗಾಗಿಯೆ ಇರುವಂತಹವು. ಪಂಚಶೀಲಗಳು ಸಾಮಾನ್ಯರಿಗಾದರೆ ಶ್ರಮಣರಿಗೆ ಮತ್ತು ಭಿಕ್ಕುಗಳಿಗೆ ಅಷ್ಟಶೀಲ ಮತ್ತು ದಶಶೀಲಗಳು ಪಾಲನೆಗಿವೆ. ಆರ್ಯ ಎಂಬುದು ಸಂಸ್ಕೃತ ಪದ. ಪಾಲಿಯಲ್ಲಿ 'ಅರಿಯ' ಎಂದಿದೆ. ಅದನ್ನು ಜನಾಂಗ ಸೂಚಕವಾಗಿ ಬುದ್ಧ ಬಳಸಿಲ್ಲ. ಸಭ್ಯ, ಸದಾಚಾರ ಎಂಬರ್ಥದಲ್ಲಿ ಅದನ್ನು ಬಳಸಲಾಗಿದೆ.

ಗೌತಮ ಬುದ್ಧನು ಖಂಡಿತವಾಗಿಯೂ ಜಾತಿಪದ್ಧತಿಯ ಮೇಲೆ ಪ್ರಹಾರ ಮಾಡಿದ. ವರ್ಣಭೇದ ಅನೈತಿಕವೆಂದು ಸಾರಿ ಧಿಕ್ಕರಿಸಿದ. ಇದಕ್ಕೆ ಪುರಾವೆಯಾಗಿ ತ್ರಿಪಿಟಕಗಳಲ್ಲಿ ಅನೇಕ ದೃಷ್ಟಾಂತ ಕಥೆಗಳು ಸಿಗುತ್ತವೆ. ನದಿಗಳು ಹರಿದು ಹೇಗೆ ಸಮುದ್ರವನ್ನು ಸೇರುತ್ತವೆಯೋ ಹಾಗೆ ಎಲ್ಲ ಜಾತಿ ಜನಗಳು ಸಂಘವನ್ನು ಸೇರಿದ ಮೇಲೆ ಒಂದೇ ಆಗುತ್ತಾರೆ ಎಂಬುದು ಬುದ್ಧನ ಅಭಿಪ್ರಾಯವಾಗಿತ್ತು. ಕ್ಷೌರಿಕನಾಗಿದ್ದ ಉಪಾಲಿ, ಜಾಡಮಾಲಿಯಾಗಿದ್ದ ಸುನೀತ ಭಿಕ್ಕುಸಂಘದಲ್ಲಿ ಉತ್ತಮ ಸ್ಥಾನವನ್ನು ಪಡೆದಿದ್ದರು.

*ಬೆಂಗಳೂರು* **ಡಾ. ಮೂಡ್ನಾಕೂಡು ಚಿನ್ನಸ್ವಾಮಿ**

---

***(ಈ ತಿಂಗಳು ೭ನೇ ಪುಟದಿಂದ)***

ಮನ್ನಾ ಮಾಡಬೇಕೆಂಬ ಆಗ್ರಹವಿದೆ. ಮುಖ್ಯಮಂತ್ರಿ ಸಿದ್ದರಾಮಯ್ಯ ಮನಸ್ಸು ಮಾಡಬೇಕಷ್ಟೆ.

ಇಷ್ಟೆಲ್ಲ ಹಗರಣ ಪ್ರಾರಂಭವಾದ್ದು ಮಹಾರಾಷ್ಟ್ರ ಹಾಗೂ ಮಧ್ಯಪ್ರದೇಶದ ರೈತರ ಹೋರಾಟದಿಂದಾಗಿ ಎರಡೂ ರಾಜ್ಯಗಳಲ್ಲಿ ಇರುವ ಭಾಜಪ ಸರಕಾರ. ಅದರಲ್ಲೂ ಮಧ್ಯಪ್ರದೇಶದಲ್ಲಿ ರೈತರ ಹೋರಾಟ ಹಿಂಸಾಚಾರಕ್ಕೆ ತಿರುಗಿದ ಮೇಲೆ. ಪೊಲೀಸರು ನಡೆಸಿದ ಗೋಲಿಬಾರಿಗೆ ಐದಾರು ಮಂದಿ ರೈತರು ಮೃತರಾದರು. ಪೊಲೀಸರು ಗುಂಡುಹಾರಿಸಲೇ ಇಲ್ಲ ಎಂದು ಸಚಿವರೊಬ್ಬರು ಹೇಳಿದ್ದು, ಪೊಲೀಸು ಅಧಿಕಾರಿ ಗೋಲೀಬಾರು ನಡೆದದ್ದು, ರೈತರು ಸತ್ತದ್ದೂ ನಿಜ ಎಂದು ಹೇಳಿದ್ದೂ ಈಗ ಹಳೇ ಸಮಾಚಾರ. ಇಂಥ ಪೆದ್ದುತನ, ಗೊಂದಲ ನಮ್ಮ ರಾಜಕೀಯ ಕ್ಷೇತ್ರದಲ್ಲಿ ಹೊಸದೇನಲ್ಲ. ಅಂತೂ ಈ ಎಲ್ಲ ಗೊಂದಲಗಳ ಮಧ್ಯೆ ರೈತರನ್ನು ಕೊಂದುಹಾಕಿದ್ದಕ್ಕೆ ಪ್ರಾಯಶ್ಚಿತ್ತವಾಗಿ ಮುಖ್ಯಮಂತ್ರಿ ಒಂದು ದಿನ ಉಪವಾಸ ಮಾಡಿದ ನಾಟಕವೂ ಮುಗಿಯಿತು. ಆದರೆ ರೈತರ ಸಮಸ್ಯೆ ಮಾತ್ರ ಬಗೆಹರಿಯಲಿಲ್ಲ. ಇಷ್ಟೆಲ್ಲ ಹಗರಣವನ್ನು ತಪ್ಪಿಸಬಹುದಾಗಿತ್ತು. ಆದರೆ ಯಾವತ್ತೂ ಹೋರಾಟದ ಹಾದಿ ತುಳಿಯದೇ ಇದ್ದರೆ ಸರಕಾರಗಳು ಜಪ್ಪಯ್ಯ ಎನ್ನುವುದಿಲ್ಲ ತಾನೆ. ಈ ಅನುಭವ ರೈತರಿಗೆ, ಕಾರ್ಮಿಕರಿಗೆ ಚೆನ್ನಾಗಿ ಅರಿವಾಗಿದೆ ಎಪ್ಪತ್ತು ವರ್ಷಗಳಲ್ಲಿ.

* * *

ಸಿದ್ದರಾಮಯ್ಯ ಸೀಟು ಭದ್ರ, ಸಿಎಂ ಆಗಿ ಐದು ವರ್ಷ ಅಧಿಕಾರ ಮುಗಿಸಿಯೇ ತೀರುತ್ತಾರೆ. ಪರಮೇಶ್ವರ-ಸಿದ್ದು ಜೋಡಿ ಮುಂದಿನ ಚುನಾವಣೆ ರಥ ಎಳೆಯಲಿದ್ದಾರೆ. ರಾಜ್ಯದ ಮುಖ್ಯಮಂತ್ರಿ ಸ್ಥಾನಕ್ಕೆ ಸಾಲುಗಟ್ಟಿ ರಾಜಕೀಯ ಮುಖಂಡರು ನಿಂತಿದ್ದಾರೆ. ಕುಮಾರಸ್ವಾಮಿ ಮನೆ ಮನೆಗೆ ಹೋಗಿ ಕೈಮುಗಿಯುತ್ತಿದ್ದರೆ, ಯಡಿಯೂರಪ್ಪ ದಲಿತರ ಮನೆಗಳಿಗೆ ನುಗ್ಗಿ ಊಟೋಪಚಾರಗಳಲ್ಲಿ ತೊಡಗಿದ್ದಾರೆ. ರಾಯಣ್ಣ ಬ್ರಿಗೇಡ್ ಸ್ಥಾಪಿಸಿ ಶಕ್ತಿ ಪ್ರದರ್ಶಿಸಿದ ಈಶ್ವರಪ್ಪ ಈಗ ಸದ್ದಿಲ್ಲದೆ ಅದಕ್ಕೆ ತರ್ಪಣ ನೀಡಿ ಮುಖ್ಯಮಂತ್ರಿ ಆಗುವ ಕನಸು ಕಾಣುತ್ತಿದ್ದಾರೆ. ಇನ್ನೂ ಕಾಂಗ್ರೆಸ್ಸಿನಲ್ಲಿ ಸಿದ್ದು, ಪರಮೇಶ್ವರ, ಶಿವಕುಮಾರ ಹಾಗೂ ಇತರ ಆಕಾಂಕ್ಷಿಗಳ ಪಟ್ಟಿಯೇ ಇದೆ. ಅಂತೂ ಕರ್ನಾಟಕಕ್ಕೆ ಮುಖ್ಯಮಂತ್ರಿಗಳ ಕೊರತೆ ಇಲ್ಲ, ಬೇರೇ ಏನೇ ಇದ್ದರೂ.

ಮೋದಿ ಮೂರು ವರ್ಷ ಮುಗಿಸಿದ್ದರೆ, ಸಿದ್ದರಾಮಯ್ಯ ನಾಲ್ಕು ವರ್ಷ ಮುಗಿಸಿದ್ದಾರೆ. ಇಬ್ಬರೂ ಕೋಟಿಗಟ್ಟಳೆ ತೆರಿಗೆದಾರರ ಹಣ ಸುರಿದು ಟಿವಿ ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ಪುಟಗಟ್ಟಲೆ ಜಾಹೀರಾತು ನೀಡಿ ಸಾಧನೆಗಳನ್ನು ಕೊಚ್ಚಿಕೊಂಡಿದ್ದಾರೆ. ಭಾಗ್ಯಗಳ ಸರದಾರ ಎಂದು ಸಿದ್ದರಾಮಯ್ಯ ಕರೆಸಿಕೊಂಡಿದ್ದರೆ, ಮೋದಿ ಮಾತಿನ ಮೋಡಿಯಿಂದ ಜನಸಾಮಾನ್ಯರನ್ನೂ ವಂಚಿಸುತ್ತಿದ್ದಾರೆ. ಕರ್ನಾಟಕವನ್ನು ಕಾಂಗ್ರೆಸ್ಸಿನಿಂದ ಮುಕ್ತಗೊಳಿಸಲು ಪಣತೊಟ್ಟಿರುವ ಭಾಜಪ ಅಧ್ಯಕ್ಷ ಚುನಾವಣೆಗಳ ಸಮಯದಲ್ಲಿ ಕರ್ನಾಟಕದಲ್ಲೇ ಮುಕ್ಕಾಮ್ ಹೂಡಲಿದ್ದಾರಂತೆ. ಪರಮೇಶ್ವರ ತೆರವುಗೊಳಿಸಿರುವ ಸ್ಥಾನಕ್ಕೆ ನೇಮಕಾತಿ ಮಾಡಬೇಕಾಗಿರುವ ಮುಖ್ಯಮಂತ್ರಿ ಮತ್ತೊಮ್ಮೆ ಸಂಪುಟ ಪುನಾರಚನೆ ಕ್ರಮ ಪ್ರಾರಂಭಿಸಿದ್ದಾರೆ. ಈಗಾಗಲೇ ಸಚಿವಾಕಾಂಕ್ಷಿಗಳು ಪರದಾಡತೊಡಗಿದ್ದಾರೆ ವಿಧಾನಸೌಧದ ಮೆಟ್ಟಿಲುಗಳ ಮೇಲೆ. ಇನ್ನೆಲ್ಲ ಮುಂಬರುವ ಚುನಾವಣೆಗಳ ಮೇಲೇ ಕಣ್ಣು. ಅದಕ್ಕೇ ಅಂತ ಕಾಣುತ್ತೆ ರಾಜ್ಯದ ಮುಂಗಾರು ಅಧಿವೇಶನದಲ್ಲಿ ಕುರ್ಚಿಗಳೆಲ್ಲ ಖಾಲಿ ಖಾಲಿ.

* * *

ಪಶ್ಚಿಮ ಏಶಿಯ ಯಾವತ್ತೂ ಅಮೆರಿಕದ ಆಡುಂಬೊಲ. ಇಸ್ರೇಲ್ ಮತ್ತು ಸೌದಿ ಅರೇಬಿಯ ಅಮೆರಿಕಕ್ಕೆ ಆಪ್ತ, ಕಿತಾಪತಿ ನಡೆಸಲು ಪ್ರಶಸ್ತವಾದ ದೇಶಗಳು. ಡೊನಾಲ್ಡ್ ಟ್ರಂಪ್ ಅಮೆರಿಕದ ಅಧ್ಯಕ್ಷರಾದ ಮೇಲೆ ಈ ಭೂಭಾಗದ ಎರಡೂ ದೇಶಗಳಿಗೆ ಭೇಟಿ ನೀಡಿದ್ದರು. ಆಗ ಅವರು ಸೌದಿ ಅರೇಬಿಯದಲ್ಲಿ ಸಿಡಿಸಿದ ಕಿಡಿಯೇ ಪುಟ್ಟ ರಾಜ್ಯ ಕಾತಾರ್ ಮೇಲೆ ಬೆಂಕಿ ಸುರಿಸಿ ಬಿಕ್ಕಟ್ಟು ಉಂಟುಮಾಡಿದೆ. ಹೇಳಿ ಕೇಳಿ ಈ ಪುಟ್ಟ ದೇಶ ಕೂಡ ಅಮೆರಿಕಕ್ಕೆ ಅತಿ ದೊಡ್ಡ ವಾಯುನೆಲೆ ಒದಗಿಸಿದೆ. ಹಾಗಿದ್ದರೂ ತೈಲ ಸಂಪದ್ಭರಿತ ಕಾತಾರ್ ಅಮೆರಿಕ, ಸೌದಿ ಅರೇಬಿಯ, ಈಜಿಪ್ಟ್, ಯುಎಇಗಳ ಅವಕೃಪೆಗೆ ಈಡಾಗಿ ದಿಗ್ಬಂಧನಕ್ಕೆ ಗುರಿಯಾಗಿದೆ, ಹೊರಿಸಿರುವ ಆರೋಪ ಭಯೋತ್ಪಾದಕರಿಗೆ ನೆಲೆ ಒದಗಿಸುತ್ತಿದೆ ಈ ದೇಶ ಎನ್ನುವುದು. ಕಾತಾರ್ ಇರಾನಿನೊಂದಿಗೆ ಹೊಂದಿರುವ ಸಖ್ಯ, ಪ್ಯಾಲಸ್ತೀನಿಯನ್ನರ ಹೋರಾಟಕ್ಕೆ ನೀಡುತ್ತಿರುವ ಬೆಂಬಲ ಈ ದೇಶಗಳ ಕಣ್ಣು ಕೆಂಪಗಾಗಿಸಿದೆ. ಕಾತಾರ್‌ಗೆ ಆರ್ಥಿಕ ದಿಗ್ಬಂಧನ ಹೊಸದೇನಲ್ಲ. ೨೦೧೪ರಲ್ಲಿ ಉಗ್ರವಾದಿಗಳಿಗೆ ಅದು ಆರ್ಥಿಕ ಬೆಂಬಲ ನೀಡುತ್ತಿದೆ ಎಂದು ಆಪಾದಿಸಿ ದಿಗ್ಬಂಧನ ಹೇರಲಾಗಿತ್ತು. ೨೭ ಲಕ್ಷ ಜನಸಂಖ್ಯೆಯ ಈ ಪುಟ್ಟ ದೇಶ ಅತ್ಯಂತ ಶ್ರೀಮಂತ ರಾಷ್ಟ್ರ ತೈಲೋತ್ಪಾದನೆಯಿಂದಾಗಿ. ಭಾರತಕ್ಕೆ ಶೇಕಡ ೯೦ಕ್ಕೂ ಹೆಚ್ಚು ಇಂಧನಾನಿಲ ಇಲ್ಲಿಂದ ಸರಬರಾಜಾಗುತ್ತಿದೆ. ಅತಿ ಹೆಚ್ಚು ಮಂದಿ ಭಾರತೀಯರು, ಸುಮಾರು ೬.೫ ಲಕ್ಷಮಂದಿ ಇಲ್ಲಿ ನೆಲೆಸಿದ್ದಾರೆ. ಬಿಕ್ಕಟ್ಟಿನಿಂದಾಗಿ ಭಾರತೀಯರು ಈಗ ಸಂಕಷ್ಟಕ್ಕೆ ಸಿಲುಕಿದ್ದಾರೆ. ಸಮಸ್ಯೆ ಬಗೆಹರಿಸಲು ಕುವೈತ್ ಮುಂದಾಗಿದೆ. ಸದ್ಯಕ್ಕೆ ಬಗೆಹರಿಯುವಂತಿಲ್ಲ.

ಜಗತ್ತಿನಲ್ಲಿ ಸುಮಾರು ೬೨೦೦ ಭಾಷೆಗಳಿವೆಯೆಂದೂ ಆಗಲೇ ೩೦ ಸಾವಿರ ಭಾಷೆಗಳು ನಾಶವಾಗಿವೆಯೆಂದೂ ಅಂದಾಜಿಸಲಾಗಿದೆ. ಕನ್ನಡ ಕೂಡ ಅಳಿವಿನಂಚಿನಲ್ಲಿರುವ ಭಯ ಹುಟ್ಟಿಸುತ್ತಿದೆ. ಕನ್ನಡಿಗರು ಹೀಗೇ ಸೋಮಾರಿತನದಲ್ಲಿದ್ದರೆ ಇನ್ನರ್ಧ ಶತಮಾನದಲ್ಲಿ ಮನೆಯೊಳಗಿನ ಆಡುಭಾಷೆ ಮಟ್ಟಕ್ಕೆ ಕನ್ನಡ ಮುಟ್ಟಿಬಿಡುವ ಸಂಭವವಿದೆ. ಇಂದು ಹಳ್ಳಿಮಕ್ಕಳು ಸಹಾ ಕನ್ನಡ ಶಾಲೆ ಬಿಟ್ಟು ಪೇಟೆ ಇಂಗ್ಲಿಷಿಗೆ ಸರಿದಾಗಿದೆ. ದೇಶದ ಸರ್ವೋಚ್ಚ ನ್ಯಾಯಾಲಯ ಕೂಡ ಮಾತೃಭಾಷೆಯ ಕಲಿಕೆಯನ್ನು ಪೋಷಕರಿಗೆ ಬಿಡಿ ಎಂದು ಹೇಳುತ್ತಿದೆ. ಹೀಗಾದರೆ ಇಂಗ್ಲಿಷ್ ಎಂಬ ದೊಡ್ಡ ಮೀನು ದೇಶೀ ಭಾಷೆಗಳನ್ನೆಲ್ಲಾ ನುಂಗುವುದು ಖಚಿತ.

# ಶಾಸ್ತ್ರೀಯ ಭಾಷೆ ಹಾಗೂ ರಾಜ್ಯ ಭಾಷಾ ಮಾಧ್ಯಮ

**ಶಾ**ಸ್ತ್ರೀಯ ಎನ್ನುವುದೇ ಅಕ್ಷರಸ್ಥರ ಒಳಸುಳಿ ಹೇಳುತ್ತದೆ. ಯಾವುದು ಶಾಸ್ತ್ರೀಯ ಭಾಷೆ ಎನ್ನುವಾಗ ಸಾವಿರ ವರ್ಷ ಹಳತು ಎಂಬ ಸಾಂವಿಧಾನಾತ್ಮಕ ಅಧ್ಯಯನ ಅಳತೆಗೋಲಷ್ಟೆ . ಅದರಂತೆ ಕ್ರಿ. ಶ. ೪೫೦ರ ಹಲ್ಮಿಡಿ ಶಾಸನವು ಮೊದಲ ಕನ್ನಡ ಪಠ್ಯ ಹೇಳುವುದರಿಂದ ಕಾಯಿದೆ ಚೌಕಟ್ಟಿಗೆ ಕನ್ನಡ ಬಂತು. ೨೦೦೮ರಲ್ಲಿ ಕನ್ನಡಕ್ಕೆ ಸ್ಥಾನಮಾನವು ಕಾಯ್ದೆ ಪ್ರಕಾರ ದೊರೆಯಿತು.

ಸುತ್ತಿಗೊಂದು ಭಾಷೆಯಂತೆ ಹಲವು ಕನ್ನಡಗಳಿವೆ. ಭಾಷಾ ವಿಜ್ಞಾನ ಪ್ರಕಾರ ಎಲ್ಲವೂ ಪ್ರಮುಖ. ದೇವನೂರರ ಕನ್ನಡವಿರಬಹುದು, ಉತ್ತರ ಕರ್ನಾಟಕದ ಕನ್ನಡವಿರಬಹುದು, ದಕ್ಷಿಣ ಕರ್ನಾಟಕದ ಕನ್ನಡವಿರಬಹುದು, ಎಲ್ಲಕ್ಕೂ ಶಾಸ್ತ್ರೀಯ ಚೌಕಟ್ಟಿರಬೇಕು ಎಂಬುದೇ ಇಲ್ಲಿ ಮುಖ್ಯ. ಇತ್ತೀಚೆಗೆ ಷ. ಶೆಟ್ಟರ್ ಅವರು ಕನ್ನಡವು ತಮಿಳಿನ ಒಡನಾಟ ಬಿಟ್ಟು ಸಂಸ್ಕೃತದ ತೆಕ್ಕೆಗೆ ಬಿದ್ದ ಕಥನ ಹೇಳುತ್ತಿದ್ದಾರೆ. ಅದು ರಾಮಾಯಣಕ್ಕೆ ಒಲಿದ ರಾವಣನಾಡಿನ ದಕ್ಷಿಣ ಭಾರತದ ಕಥನಕೂಡ ಹೌದು. ಈ ನಡುವೆ ಕವಿ ಹರಿಹರ ಮಾತ್ರ ಅಚ್ಚಗನ್ನಡವನ್ನು ತಮಿಳು ಸಂಪರ್ಕದಲ್ಲಿ ನೆಲೆನಿಲ್ಲಿಸಿ ಕೊಳ್ಳುತ್ತಾನೆ. ವಡ್ಡಾರಾಧನೆ ಮೊದಲ ಕನ್ನಡ ಕಥನ ಗ್ರಂಥ. ಅದು ಪ್ರಾಕೃತ ಭಾಷೆಯ ಸಾರ. ಅದು ಬಿಟ್ಟು ಈ ಕಡೆ ದ್ರಾವಿಡ ಸಂಪರ್ಕ ಬಿಟ್ಟು, ಕನ್ನಡವು ಸಂಸ್ಕೃತ ಸೆರಗು ಹಿಡಿದು ಆಶ್ರಯ ಕೋರಿದ ರೀತಿಗೂ ಇಂದಿನ ಕನ್ನಡವು ಇಂಗ್ಲಿಷಿನ ಸೆರಗು ಹಿಡಿದಿರುವ ರೀತಿಗೂ ಹೋಲಿಕೆಯುಂಟು. 'ಕವಿರಾಜಮಾರ್ಗ' ಮೊದಲ ಕನ್ನಡ 'ಲಕ್ಷಣ' ಗ್ರಂಥ. ಅದು 'ಭಾವಿಸಿದ ಜನಪದ' ಸ್ಥಿತಿಯಲ್ಲಿ ಹಲವು ಕನ್ನಡಂಗಳ ಪರವೇ ಚಲಿಸುತ್ತದೆ. ಮಹಾಕವಿ ಪಂಪ ಮಾತ್ರ ತನ್ನ ಮಹಾಕಾವ್ಯಗಳಲ್ಲಿ 'ದೇಶಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು' ಎಂದು ಶ್ರೀಸಾಮಾನ್ಯರ ಕನ್ನಡವನ್ನು ಮಹಾಕಾವ್ಯದೆತ್ತರಕ್ಕೆ ಏರಿಸಿಬಿಡುತ್ತಾನೆ.

ಜಗತ್ತಿನಲ್ಲಿ ಸುಮಾರು ೬೨೦೦ ಭಾಷೆಗಳಿವೆಯೆಂದೂ ಆಗಲೇ ೩೦ ಸಾವಿರ ಭಾಷೆಗಳು ನಾಶವಾಗಿವೆಯೆಂದೂ ಅಂದಾಜಿಸಲಾಗಿದೆ. ಕನ್ನಡ ಕೂಡ ಅಳಿವಿನಂಚಿನಲ್ಲಿರುವ ಭಯ ಹುಟ್ಟಿಸುತ್ತಿದೆ. ಕನ್ನಡಿಗರು ಹೀಗೇ ಸೋಮಾರಿತನದಲ್ಲಿದ್ದರೆ ಇನ್ನರ್ಧ ಶತಮಾನದಲ್ಲಿ ಮನೆಯೊಳಗಿನ ಆಡುಭಾಷೆ ಮಟ್ಟಕ್ಕೆ ಕನ್ನಡ ಮುಟ್ಟಿಬಿಡುವ ಸಂಭವವಿದೆ. ಇಂದು ಹಳ್ಳಿಮಕ್ಕಳು ಸಹಾ ಕನ್ನಡ ಶಾಲೆ ಬಿಟ್ಟು ಪೇಟೆ ಇಂಗ್ಲಿಷಿಗೆ ಸರಿದಾಗಿದೆ. ದೇಶದ ಸರ್ವೋಚ್ಚ ನ್ಯಾಯಾಲಯ ಕೂಡ ಮಾತೃಭಾಷೆಯ ಕಲಿಕೆಯನ್ನು ಪೋಷಕರಿಗೆ ಬಿಡಿ ಎಂದು ಹೇಳುತ್ತಿದೆ. ಹೀಗಾದರೆ ಇಂಗ್ಲಿಷ್ ಎಂಬ ದೊಡ್ಡ ಮೀನು ದೇಶೀ ಭಾಷೆಗಳನ್ನೆಲ್ಲಾ ನುಂಗುವುದು ಖಚಿತ. ಸಮಾಜವಿಜ್ಞಾನ, ವೈದ್ಯವಿಜ್ಞಾನ, ತಂತ್ರವಿಜ್ಞಾನ ಸಹಿತವಾಗಿ ಕನ್ನಡದಲ್ಲಿ ಭಾಷೆಯನ್ನು ಭದ್ರಪಡಿಸಿ ಕೊಳ್ಳದೆ ಹೋದರೆ ಶೇಕ್ಸ್‌ಪಿಯರನಿಗಿಂತ ಸಾವಿರ ವರ್ಷ ಪ್ರಾಚೀನ ಹಾಗೂ ಹಿರಿದಾದ ಕನ್ನಡವೆಂದು ಹೊಗಳಿಕೊಳ್ಳುವ ಕೀರ್ತಿ ಅಳಿಸಿಹೋಗುತ್ತದೆ. ದೇಶಾದ್ಯಂತ ರಾಜಕೀಯ ಹಾಗೂ ಶಿಕ್ಷಣ ತಜ್ಞರು ಚರ್ಚಿಸಿ ನಾಡಿನಲ್ಲಿರುವ ಹಲವು ಮಾತೃಭಾಷೆ ಸ್ಥಾನವನ್ನು ರಾಜ್ಯಭಾಷಾ ಸ್ಥಾನಕ್ಕೆ ಪಲ್ಲಟಗೊಳಿಸಿಕೊಳ್ಳಬೇಕು. ಈ ರಾಜ್ಯಭಾಷಾ ನೀತಿ ರಾಷ್ಟ್ರಮಟ್ಟದಲ್ಲಿ ಎಲ್ಲ ರಾಜ್ಯ ಭಾಷೆಗಳಿಗೂ ತಕ್ಷಣ ಬೇಕಾಗಿದೆ.

ಶಾಸ್ತ್ರೀಯ ಕನ್ನಡವೆಂದರೆ ಬಹುಸಂಸ್ಕೃತಿಯ ಜಡೆಕೋಲಾಟವಾಗಬೇಕು. ಜನಪದ ಹಾಗೂ ಶಿಷ್ಟವೆಂಬ ಅರಿವು ಅಳಿಸಿ ತಿಳಿವು ಮೂಡಬೇಕು. ಗತವನ್ನು ವರ್ತಮಾನಕ್ಕೆ ತರಬೇಕು. ಅಂದು ಸಂಸ್ಕೃತ ಬಿಟ್ಟು ವಚನಕಾರರು ಸಿಡಿದಂತೆ ವರ್ತಮಾನದಲ್ಲಿ ಇಂಗ್ಲಿಷ್ ಎಂಬ ದಾಸ್ಯ ಕಳಚಬೇಕು. ಅದು ಶಾಸ್ತ್ರೀಯವೆಂದರೆ ನಾಡಿನ ಬಹು ಜನರು ಆಡುವ ಭಾಷೆಯ ಶಾಸ್ತ್ರ ಎಂಬ ಚೌಕಟ್ಟಿನಲ್ಲಿರಬೇಕು. ಆಯ್ತುವಾರ, ಬೇಸ್ತವಾರ ಇವು ಜನಪದರ ಭಾಷೆಯವು. ಕುರುಬ, ಕೊರಚರ ಭಾಷೆ. ಕೂಡ ಸರೀಕರ ಭಾಷೆ. ಇದೆಲ್ಲದರ ಸಾರ ಶಾಸ್ತ್ರೀಯ ಚೌಕಟ್ಟಿನಲ್ಲಿರಬೇಕು. ಇದು ಸಮಕಾಲೀನ ಭಾಷೆಯನ್ನು ಸಜ್ಜುಗೊಳಿಸುವ ಕ್ರಮ. ಪಠ್ಯ ಪವಿತ್ರೀಕರಣದ ಭುಂಜನೆ ಕೂಡ ಶಾಸ್ತ್ರೀಯ ಅಧ್ಯಯನದ ಭಾಗವೇ ಹೌದು. ತತ್ತ್ವಪದ ಬಹು ಪಠ್ಯಗಳು, ಕನ್ನಡದ ಸುಮಾರು ೩೦ ಜನಪದ ಮಹಾಕಾವ್ಯಗಳ ಪಠ್ಯಗಳೆಲ್ಲವೂ ಇದರ ತಳಹದಿಗೆ ಬರುತ್ತವೆ. ಇದಕ್ಕಾಗಿ ಹೊಸ ಪೀಳಿಗೆಯನ್ನು ಸಜ್ಜುಗೊಳಿಸುವುದು ಕೂಡ ಶಾಸ್ತ್ರೀಯ ಅಧ್ಯಯನದಲ್ಲಿರಬೇಕಾಗುತ್ತದೆ. ಆಗ ಮಾತ್ರ ಕನ್ನಡವು ಜ್ಞಾನ ಭಾಷೆಯಾಗುತ್ತದೆ. ಬೌದ್ಧಿಕ ಮತಾಂತರಗಳನ್ನು ದೂರವಿಡುವುದು ಕೂಡ ಇದರ ಅಧ್ಯಯನ ಭಾಗದಲ್ಲೊಂದು. ಜಾತಿಭೇದ–ಲಿಂಗಭೇದ ಚರ್ಚೆಯಿಲ್ಲದಿದ್ದರೆ ಅದು ಶಾಸ್ತ್ರೀಯ ಎಂದು ಅನಿಸಿಕೊಳ್ಳುವುದೇ ಇಲ್ಲ.

ನಾಡಭಾಷೆ ಕನ್ನಡ ಮಾಧ್ಯಮ ಈಗೊಂದು ಬೇಡದ ಕೂಸು. ಪೋಷಕರು–ಸರ್ಕಾರ–ಶಿಕ್ಷಕರು ಇವರೆಲ್ಲರ ವಿಷವರ್ತುಲವಿದೆ. ಇದೆಲ್ಲದರ ಮೇಲೆ ಶಿಕ್ಷಣ ವ್ಯಾಪಾರದ ಮೂಟೆಯ ಭಾರವಿದೆ. ಜಾಗತೀಕರಣವೆಂಬ ಹುಸಿ ಆಧುನಿಕತೆಯಿದೆ. ಇಂಗ್ಲಿಷ್ ಎಂಬ ಯಜಮಾನಿಕೆ ತ್ಯಾಜ್ಯವಾಗದ ಹೊರತು, ಸಾವಯವ ಚಿಂತನೆ ಸಮಾಜದಲ್ಲಿ ಇಳಿಯದ ಹೊರತು ಯಾವ ನ್ಯಾಯಾಲಯಗಳೂ ಸರ್ಕಾರಗಳೂ ಆಶ್ರಯಕ್ಕೆ ಬರುವುದಿಲ್ಲ. ಜನಾಂದೋಲನದ ಮೂಲಕ ಮೊದಲು ಇಂಗ್ಲಿಷ್–ಇಂಗ್ಲಿಷ್‌ನೊಳಗಿನ ತಾಂತ್ರಿಕ ಭಾರದಿಂದ ಮಕ್ಕಳು ಮರಿಗಳನ್ನು ಹಿಡಿದೆತ್ತಿಕೊಳ್ಳಬೇಕು. ಇಡೀ ಜನಪದ ಸಮಾಜ ಹಾಗೂ ಶ್ರೀಸಾಮಾನ್ಯ ಸಮಾಜ ಕೀಳರಿಮೆಯಿಂದ ನರಳುತ್ತಿದೆ. ಮಾನಸಿಕವಾಗಿ ಕುಸಿಯುತ್ತಿದೆ. ಪೋಷಕರು ಈ ಸಾಮಾಜಿಕ ರೋಗದಲ್ಲಿ ಅನಾಥರು. ರಾಜ್ಯಭಾಷೆಯ ಶಿಕ್ಷಣವು ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದಲ್ಲಿ ಕಡ್ಡಾಯ ಶಿಕ್ಷಣವೆಂದು ಸಂವಿಧಾನ ತಿದ್ದುಪಡಿಗೆ ದೇಶಾದ್ಯಂತ ಜನಾಂದೋಲನ ಬೇಕಾಗಿದೆ. ಅದಕ್ಕೆ ಸರಿಯಾದ ರಾಜಕೀಯ ಹೆಜ್ಜೆಗಳಿರಬೇಕಾಗುತ್ತದೆ. 'ಅರಸು ರಾಕ್ಷಸ'ನಾಗಬಾರದು, ಮಕ್ಕಳನ್ನು ಎತ್ತಿ ಆಡಿಸುವ ಹೂ ಮನಸ್ಸು ಸಹಾ ಅವನೊಳಗಿರುತ್ತದೆ. ಅದನ್ನು ಹುಡುಕ ಬೇಕಾಗಿರುವುದೇ ಜನಾಂದೋಲನದ ಕರ್ತವ್ಯ. ಮಾತೃಭಾಷೆಯಲ್ಲಿ ಶಿಕ್ಷಣ ಎನ್ನುವುದಕ್ಕಿಂತ ರಾಜ್ಯಭಾಷೆ ಮಕ್ಕಳ ಕಲಿಕೆಯ ಭಾಷೆಯಾಗಬೇಕು. ಆಗ ಮಾತ್ರ ಭಾಷಾವಾರು ವಿಂಗಡಣೆಯ ಸಂವಿಧಾನ ನಿಯಮಕ್ಕೆ ಮೌಲ್ಯ ಸಿಗುತ್ತದೆ. ಮೊದಲ ಹಂತದಲ್ಲಿ ಐದನೇ ತರಗತಿವರೆಗೆ, ಎರಡನೇ ಹಂತದಲ್ಲಿ ಪ್ರೌಢಶಾಲೆವರೆಗೆ ಮಾನಸಿಕ ಹಾಗೂ ವೈಜ್ಞಾನಿಕ ಮಾದರಿಯಲ್ಲಿ ಪರಂಪರೆಯನ್ನು ಆಧುನಿಕತೆಯನ್ನು ಬೆಸೆಯುತ್ತಾ ಮರುಪಯಣ ಹೊರಟು ದೇಶೀ ಕನ್ನಡಕ್ಕೆ ಜಾಗತೀಕರಣವನ್ನು ಅರಗಿಸಿಕೊಳ್ಳುವ ಶಕ್ತಿ ತುಂಬಬೇಕಾದ್ದು ದೇಶದ ಆಯಾ ನಾಡಿನ ಕರ್ತವ್ಯ. 'ವಿದೇಶಿ ಭಾಷಾ ಮಾಧ್ಯಮ ಬುದ್ಧಿಯನ್ನು ಬಳಲಿಸಿದೆ. ನಮ್ಮ ಮಕ್ಕಳ ನರಗಳ ಮೇಲೆ ಅನುಚಿತ ಒತ್ತಡ ಹೇರಿದೆ' ಎಂಬುದು ಗಾಂಧಿನುಡಿ. ಮಾತೃಭಾಷೆಯಲ್ಲಿ ಕಲಿಯದ ಮಕ್ಕಳು ಯಂತ್ರಕ್ಕೆ ಸಮಾನ ಎಂಬುದು ಮನಃಶಾಸ್ತ್ರದ ತೀರ್ಮಾನ. ಎಲ್ಲ ದಾರ್ಶನಿಕರು ಇದನ್ನೆ ಹೇಳುತ್ತಾರೆ. ಈ ರೀತಿಯ ಸಮಾನ ಶಿಕ್ಷಣವೇ ಸಾಮಾಜಿಕ ಮದ್ದು. ಇದರಲ್ಲಿ ಬಡವ–ಬಲ್ಲಿದ, ಮೇಲು–ಕೀಳು ಎಂಬುದು ಅಳಿಸಿ ಪ್ರಜಾಪ್ರಭುತ್ವ ತತ್ವ ಸಮೀಕರಣಗೊಳ್ಳುತ್ತದೆ.

**ಡಾ|| ರಾಜೇಗೌಡ ಹೊಸಹಳ್ಳಿ,** ನಂ. ೪೧೩, ಟೀಚರ್ಸ್ ಕಾಲನಿ, ನಾಗರಭಾವಿ, ಬೆಂಗಳೂರು – ೫೬೦ ೦೭೨



## ಭಗವದ್ಗೀತೆ : ಒಂದು ಅವಲೋಕನ

# ೧೦. ವೈಚಾರಿಕ ಸಾಹಿತ್ಯದ ಮರುಭೂಮಿ

**ತತ್ತ್ವಶಾಸ್ತ್ರದ ಗೀಳನ್ನು ಪೂರ್ತಿಯಾಗಿ ಕಳೆದುಕೊಂಡು ಗೀತೆಯ ಹಲವು ಅಧ್ಯಾಯಗಳು ಬೋಧಕನಾದ ಶ್ರೀ ಭಗವಾನನ ತಥಾಕಥಿತ ಮಹಿಮೆಯನ್ನು ಸ್ವತಃ ಭಗವಾನನ ಬಾಯಿಂದಲೇ ಹೇಳಿಸುತ್ತವೆ. ತನ್ನನ್ನು ತಾನು ಹಾಗೆ ಅಸೀಮಿತ ಪರಾಶಕ್ತಿಯೆಂದು ಬಣ್ಣಿಸಿಕೊಳ್ಳುತ್ತಾನೆಂದು ಭಕ್ತರು ಶ್ರೀಕೃಷ್ಣನ ಬಗ್ಗೆ ಕೌತುಕ ವ್ಯಕ್ತಪಡಿಸಿಯಾರೇ ವಿನಾ ಶ್ರದ್ಧೆಯನ್ನು ಕಳೆದುಕೊಳ್ಳಲಾರರೆಂದು ತೋರುತ್ತದೆ.**

ಗೀತೆಯ ಕರ್ತೃವು ಅರ್ಜುನನ ಜ್ಞಾನದಾಹವನ್ನು ಅವನ ಪ್ರಶ್ನೆಗಳ ಸುರಿಮಳೆಯ ಮೂಲಕ ವ್ಯಂಜಿಸುತ್ತಾನೆ. ಗ್ರಂಥದ ಅಧ್ಯಯನ ಮಾಡುವ ಓದುಗರು ಅರ್ಜುನನಂತೆ ಸದಾ ಕುತೂಹಲವನ್ನು ಇಮ್ಮಡಿಗೊಳಿಸಿಕೊಂಡು ಒಂದು ವಿಷಯದಿಂದ ಇನ್ನೊಂದರತ್ತ ಜಿಗಿಯುತ್ತಿರಬೇಕು. "ಅಧ್ಯಾತ್ಮ, ಅಧಿಭೂತ ಮತ್ತು ಅಧಿದೈವ ಎಂಬುವು ವ್ಯಕ್ತಿಯಲ್ಲಿ ಹೇಗೆ ಸಮ್ಮಿಳಿತವಾಗಿರುತ್ತವೆ ? ಅಧಿಯಜ್ಞ ಎಂದರೆ ಯಾರು, ಅವನು ಶರೀರದಲ್ಲಿ ಹೇಗೆ ಪ್ರವೇಶಿಸಿದ್ದಾನೆ? ಧ್ಯಾನಸ್ಥರು ಮರಣ ಕಾಲದಲ್ಲಿ ಭಗವಂತನನ್ನು ತಿಳಿಯುವುದಾದರೂ ಹೇಗೆ ?" ಜೊತೆಗೆ, "ಬ್ರಹ್ಮ ಮತ್ತು ಕರ್ಮ ಎಂದರೇನು ?" ಎಂಟನೆಯ ಅಧ್ಯಾಯವು ಆರಂಭವಾಗುವುದು ಈ ಪ್ರಶ್ನೆಗಳಿಂದ.

ಆಂಗ್ಲಭಾಷೆಯಲ್ಲಿ "ಮೆಟಫಿಸಿಕ್ಸ್" ಎಂಬ ಪದವೊಂದಿದೆ. ಅದನ್ನು ಅರ್ಥೈಸಲು ಒಂದು ವಿವರಣೆ ನೀಡಲಾಗಿದೆ. ಅದೊಂದು ರೀತಿಯ ಕಟ್ಟುಕತೆಯೂ ಇರಬಹುದು. ಅರಿಸ್ಟಾಟಲನು ಬರೆದ ಗ್ರಂಥಗಳಲ್ಲಿ ಭೌತಶಾಸ್ತ್ರವೂ ಒಂದು. ಅದರ ಹಸ್ತಪ್ರತಿಯಲ್ಲಿ ಭೌತಿಕ ಪ್ರಪಂಚದ ವ್ಯಾಖ್ಯಾನವು ಮುಗಿದ ಮೇಲೆ ಭೌತಿಕಾತೀತವಾದ ಕೆಲವು ಅಂಶಗಳನ್ನು ಕರ್ತೃವು ಪ್ರತಿಪಾದಿಸಿದ್ದನಂತೆ. ಅದಕ್ಕೆ ಶೀರ್ಷಿಕೆ ನೀಡಲಾಗಿರಲಿಲ್ಲವಾದ್ದರಿಂದ ಅದನ್ನು "ಭೌತದ ಅನಂತರ" (ಮೆಟ ಎಂದರೆ ನಂತರ) ಎಂದು ಕರೆಯಲಾಯಿತಂತೆ. ಓದುಗರನ್ನು ಪ್ರತಿನಿಧಿಸುವ ಅರ್ಜುನ ಆ ಭೌತಾನಂತರದ ಸಂಗತಿಗಳನ್ನು ತಿಳಿಯಬಯಸಿದ್ದಾನೆ. 'ಬ್ರಹ್ಮನ್' ಎಂಬುದು ತಿಳಿಯಬೇಕಾದ ವಸ್ತು (ಜ್ಞೇಯ). ವ್ಯಕ್ತಿಯ ಆಯಾಮದ ಬಗೆಗಿನ ತಿಳಿವಳಿಕೆಯು ಅಧ್ಯಾತ್ಮ. ಭೌತ ಪ್ರಪಂಚದ ಆಯಾಮವನ್ನು ಕುರಿತಾದ ತಿಳಿವು 'ಅಧಿಭೂತ'. ದೈವದ ಆಯಾಮವು 'ಅಧಿದೈವ.' ಭಗವಾನನ ಉತ್ತರ ಸರಳವಾಗಿದೆ : "ಯಾವುದು ಎಂದೂ ನಶಿಸಿಹೋಗದೋ (ಅಕ್ಷರ) ಅದು ಬ್ರಹ್ಮನ್." ಅಂದರೆ ಅದು ನಿತ್ಯ ಅಥವಾ ಶಾಶ್ವತ ಮತ್ತು ಎಲ್ಲದಕ್ಕೂ ಮೂಲಾಧಾರ. ಉಪನಿಷತ್ತುಗಳಲ್ಲಿ ಇದರ ಚರ್ಚೆ ಪುಂಖಾನುಪುಂಖವಾಗಿ ನಡೆದಿದೆ. ತೈತ್ತಿರೀಯದಲ್ಲಿ ಅದನ್ನು ಹೇಳಲಾಗಿರುವ ರೀತಿ ಇದು : "ಯಾವುದರಿಂದ ಈ ಜಗತ್ತೆಲ್ಲಾ ಉಗಮಗೊಂಡಿತೋ, ಯಾವುದರಿಂದ ಜಗತ್ತು ಜೀವಿಸುತ್ತದೋ ಮತ್ತು ಅಂತ್ಯದಲ್ಲಿ ಜಗತ್ತು ಯಾವುದರಲ್ಲಿ ಲೀನವಾಗುತ್ತದೋ ಅದು ಬ್ರಹ್ಮನ್." ಬ್ರಹ್ಮನ್ ಎಂಬುದು ಹೇಗೆ ಉಗಮಗೊಂಡಿತೆಂಬ ಪ್ರಶ್ನೆ ಇಲ್ಲ, ಏಕೆಂದರೆ ಅದು ನಿತ್ಯ; ಅಂದರೆ ಯಾವತ್ತೂ ಇರುವಂಥದೇ. ಭೌತ ಪ್ರಪಂಚಕ್ಕೆ ವಿಕಾಸ ಕ್ರಮವಿದೆ; ಅದರ ಮೂಲ ಮಾತ್ರ ಬ್ರಹ್ಮನ್. ಅದು ಉಪನಿಷತ್ತುಗಳ 'ಬಿಗ್ ಬ್ಯಾಂಗ್' ಇರಬೇಕು ! ಅಮೂರ್ತದಿಂದ ಮೂರ್ತದ ಉದ್ಭವ ಎಂದು ಬೇಕಾದರೆ ತಿಳಿಯಬಹುದು; ಆದರೆ ಅದಕ್ಕೆ ವೈಚಾರಿಕ ತಳಹದಿಯೇನೂ ಇರುವುದಿಲ್ಲ. ಈ ರೀತಿಯ ಉಗಮವೇ ಕರ್ಮ. ಹೀಗೆ ಮುಂದುವರಿದು ಭಗವಾನ್ ನೀಡುವ ಉತ್ತರ : "ಅಂತಿಮವಾಗಿ ನಾನೇ ಸರ್ವಸ್ವ ; ಎಲ್ಲವೂ ನನ್ನಿಂದಲೇ." ವಿಶ್ವ ವಿಕಾಸದ ಬಗೆಗಿನ ತಿಳಿವಿಗೆ ಈ ಉತ್ತರದಿಂದ ಘನವಾದ ಅಂಶವೇನಾದರೂ ದಕ್ಕಿತೇ ಎಂಬುದು ವಿಚಾರಣೀಯ ಎಂದಷ್ಟೇ ಹೇಳಬಹುದು. "ಜಗತ್ತು ಸೃಷ್ಟಿಯಾಗಿದೆ" ಎಂಬ ನೆಲೆಯಿಂದ ಹೊರಟರೆ ಜಗತ್ತಿಗೆ ಸೃಷ್ಟಿಕರ್ತ ಒಬ್ಬನಿದ್ದಾನೆ(ಳೆ) ಎಂದು ತೀರ್ಮಾನಿಸುವುದು ಸುಲಭ ಮತ್ತು ಅನಿವಾರ್ಯ. ಆದರೆ ಮರುಪ್ರಶ್ನೆ ಹಾಕಿದರೆ ಉತ್ತರ ದೊರಕದು, ಆದ್ದರಿಂದ ಅದನ್ನು 'ಗೃಹೀತ' ಎಂದು ಸ್ವೀಕರಿಸಿ ತೆಪ್ಪಗಿರಬೇಕು ಎಂಬುದು ಸಾಂಪ್ರದಾಯಿಕ ಮಾರ್ಗ. ಎಲ್ಲವನ್ನೂ ಸೃಷ್ಟಿಸಿದವನು(ಳು) ಸೃಷ್ಟಿಯಾಗಿದ್ದು ಹೇಗೆ ? ಈ ಪ್ರಶ್ನೆ ನಿರಂತರ. ಅಂತಹ ತರ್ಕದಲ್ಲಿ "ಅನವಸ್ಥಾ ದೋಷವಿದೆ" ಎಂಬುದು ತರ್ಕಶಾಸ್ತ್ರಕ್ಕೆ ಸಮ್ಮತವಿದೆ. ಅದನ್ನು ಲ್ಯಾಟಿನ್‌ನಲ್ಲಿ "ಆರ್ಗ್ಯುಮೆಂಟುಮ್ ಆ್ಯಡ್ ಇನ್‌ಫಿನಿಟುಂ" ಎನ್ನುತ್ತಾರೆ. ಆರ್ಯಭಟನ ವ್ಯಾಖ್ಯಾನಕಾರನಾದ ಎರಡನೆಯ ಭಾಸ್ಕರ ಇದನ್ನು ಗುರುತಿಸಿದ್ದಾನೆ : "ನಮ್ಮ ಪ್ರಪಂಚವು ಆದಿಶೇಷನ ಹೆಡೆಯ ಮೇಲೆ ನಿಂತಿದೆಯೆಂದಾದರೆ ಆದಿಶೇಷ ಎಲ್ಲಿ ನಿಂತಿದ್ದಾನೆ? ಅವನೆಲ್ಲಿ ನಿಂತಿದ್ದಾನೋ ಅದು ಯಾವುದರ ಮೇಲೆ ನಿಂತಿದೆ ?" ಇದೇ ಅನವಸ್ಥಾ ಅಥವಾ ನೈರಂತರ್ಯ ದೋಷ. ಸೃಷ್ಟಿಕರ್ತನ ಕ್ರಿಯೆ ಸೃಷ್ಟಿ ಎಂದು ಹೊರಟರೆ ಇಂತಹದೇ ಗೊಂದಲವು ಅನಿವಾರ್ಯವೆಂದು ಬರ್ನಾರ್ಡ್ ಶಾ ಲೇವಡಿ ಮಾಡುತ್ತಿದ್ದ : "ಎಲ್ಲ, ಅಂದರೆ ಎಲ್ಲವನ್ನೂ, ಪರಮಾತ್ಮ ಸೃಷ್ಟಿಸಿದ್ದಾನಲ್ಲವೆ ? ಹಾಗೆ ಸೃಷ್ಟಿಸುವಾಗ ಅವನೆಲ್ಲಿ ನಿಂತಿದ್ದ (ಅಥವಾ ಇದ್ದ) ? ಅದನ್ನಾರು ಸೃಷ್ಟಿಸಿದ್ದರು ? ಹಾಗಾದರೆ ನಮ್ಮ 'ಸೃಷ್ಟಿಕರ್ತ' ಆದಿ–ಸೃಷ್ಟಿಕರ್ತನಾಗುವುದಿಲ್ಲವಲ್ಲ !" ಇದೇ ಧಾಟಿಯಲ್ಲಿ ಅಲ್ಲದಿದ್ದರೂ ಬೌದ್ಧ ಮತ್ತು ಲೋಕಾಯತ ದರ್ಶನಗಳು ಇಂತಹ ಪ್ರಶ್ನೆಗಳನ್ನು ವ್ಯಾಪಕವಾಗಿ ಎತ್ತಿದ್ದವು. ಗೀತೆಯ ಆವಿರ್ಭಾವಕ್ಕೆ ಆ ಹಿನ್ನೆಲೆ ಇದೆ.

ಗೀತೆಯು ಸೃಷ್ಟಿಯ ಬಗೆಗಿನ ಗೋಜಲಿಗೆ ಸಿಲುಕಿಕೊಳ್ಳದೆ ನಿರ್ದಿಷ್ಟವಾದ ಒಂದು ಉತ್ತರ ನೀಡುತ್ತದೆ ಮತ್ತು ನಾವದಕ್ಕೆ ಶರಣಾಗಬೇಕೆಂದು ಬಯಸುತ್ತದೆ. ಅಂದರೆ, ಪ್ರಶ್ನೆ ಎತ್ತುವವರಿಗೆ "ಸುಮ್ಮನಿರಿ, ನಾವು ಕೊಡುವ ಉತ್ತರ ಸ್ವೀಕರಿಸಿ ಅದರಂತೆ ಮುಂದುವರಿಯಿರಿ" ಎಂದು ಗೀತೆಯು ತಾಕೀತು ಮಾಡುತ್ತದೆ. ಅಂತಿಮವಾಗಿ ಭಗವಾನನೇ ಅಥವಾ ಬೋಧಕ ಶ್ರೀಕೃಷ್ಣನೇ ಸರ್ವಸ್ವ. (ಗೀತೆಯು ವಿಷ್ಣುಪರವಾದ ಗ್ರಂಥವೆಂಬುದನ್ನು ನಾವೀಗಾಗಲೇ ತಿಳಿದಿದ್ದೇವೆ). "ಮರಣ ಕಾಲದಲ್ಲಿ ಭಗವಂತನನ್ನು ತಿಳಿಯುವುದಾದರೂ ಹೇಗೆ ?" (೮.೨ : ಪ್ರಯಾಣ ಕಾಲೇ ಚ ಕಥಂ ಜ್ಞೇಯಃ ಅಸಿ ನಿಯತಾತ್ಮಭಿಃ) ಎಂಬ ಪ್ರಶ್ನೆಗೆ ಸೀದಾ ಉತ್ತರ ಶ್ರೀ ಭಗವಾನ್ ನೀಡಿದ್ದಾನೆ : "ಅಂತ್ಯಕಾಲದಲ್ಲಿ ನನ್ನನ್ನು ಸ್ಮರಿಸುತ್ತಾ ದೇಹತ್ಯಾಗವನ್ನು ಮಾಡುವವರು ನನ್ನ ಭಾವವನ್ನು (ಅಥವಾ ನನ್ನತನವನ್ನು) ಹೊಂದುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ" (೮.೫ : ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ। ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತಿ ಅತ್ರ ಸಂಶಯಃ ॥). ಸುಲಭವಾಗಿ ಮೋಸ ಹೋಗುವವರಿಗೆ ಇದು ಖಾಯಂ ಮುಲಾಮು. ಅಷ್ಟು ಸಾಲದೆಂಬಂತೆ ಭಗವಾನ್ ಮುಂದುವರಿದು ಹೇಳುತ್ತಾನೆ, "ಮರಣ ಕಾಲದಲ್ಲಿ ಯಾರನ್ನು ಸ್ಮರಿಸುತ್ತಾರೋ ಅವರದೇ ಭಾವವನ್ನು ತಾಳುತ್ತಾರೆ; ಆ ಮರಣ ಕಾಲದ ಭಾವವು ಅವರ ಇಡೀ ಜೀವಿತಕಾಲದ ಭಾವವೇ ಆಗಿರುವುದರಿಂದ" (೮.೬ : ಯಂ ಯಂ ಚಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಂ। ತಂ ತಮೇವೇತಿ ಕೌಂತೇಯ ಸದಾ ತದ್ಭಾವಭಾವಿತಃ ॥). ಇದಕ್ಕೆ ಪ್ರಯೋಗರೀತ್ಯಾ ಪುರಾವೆಯನ್ನೊದಗಿಸುವುದು ಅಸಾಧ್ಯ; ಆದ್ದರಿಂದ ಭಗವಾನನ ಘೋಷವನ್ನು ಕೇಳಿ

**ಜಿ. ರಾಮಕೃಷ್ಣ**

ಆನಂದದಿಂದ ತಲೆದೂಗಬೇಕು, ಇಲ್ಲವೇ ಮುಸಿಮುಸಿ ನಗಬೇಕು. ಗೀತೆಯ ಕೇಳುಗನಿಗೆ ಇದಿನ್ನೂ ಪೂರ್ಣವಾಗಿ ಮನವರಿಕೆಯಾಯಿತೋ ಇಲ್ಲವೋ ಎಂಬ ಸಂಶಯ ಗೀತೆಯ ಕರ್ತೃವಿಗಿದೆ ಅಥವಾ ಇದ್ದಂತಿದೆ. ಆದ್ದರಿಂದ ಹೇಳುತ್ತಾನೆ, "ಆದ್ದರಿಂದ ಎಲ್ಲ ಕಾಲದಲ್ಲೂ ನನ್ನನ್ನು ಸ್ಮರಿಸು ಮತ್ತು ಹೋರಾಡು. ನಿನ್ನ ಮನಸ್ಸು ಮತ್ತು ಬುದ್ಧಿ ನನಗೆ ಅರ್ಪಿಸಲ್ಪಟ್ಟಿದ್ದರೆ ನಿಸ್ಸಂಶಯವಾಗಿ ನೀನು ನನ್ನನ್ನು ಕೂಡಿಕೊಳ್ಳುತ್ತೀಯೆ" (೮.೭). ಅಚಲವಾದ ಮನಸ್ಸು , ಭಕ್ತಿ ಮತ್ತು ಯೋಗಬಲ ಇದ್ದರೆ ಹೀಗೆ ಭಗವಂತನನ್ನೈದುವುದು ಅತಿ ಸುಲಭವಂತೆ; ಎರಡು ಹುಬ್ಬುಗಳ ನಡುವೆ (ಅದೂ ಮರಣ ಕಾಲದಲ್ಲಿ) ಪ್ರಾಣವನ್ನು ನಿವೇಶಿಸಿ ಧ್ಯಾನ ಮಾಡಿದರೆ ಪರಮ ಪುರುಷನನ್ನು ಸೇರಿಕೊಳ್ಳುವುದು ಖಂಡಿತ ಎಂಬ ಆಶ್ವಾಸನೆ ನೀಡಲಾಗಿದೆ (೮.೧೦). ಅದಕ್ಕೆಲ್ಲಾ ಓಂ ಎಂಬ ಒಂದಕ್ಷರದ ಬಲವೇ ಸಾಕು (೮.೧೧) ಎಂಬ ಮಾತನ್ನು ಹೇಳಿ ಗೀತೆಯು ಯೋಗಶಾಸ್ತ್ರ ಪ್ರಣೀತವಾದ ಧ್ಯಾನದ ಬಗೆಯನ್ನು ಎರಡೇ ಶ್ಲೋಕಗಳಲ್ಲಿ ಸಂಗ್ರಹವಾಗಿ ವಿವರಿಸುತ್ತದೆ. ವಿವರಿಸುವುದು ಸುಲಭ, ಅದನ್ನು ಆಚರಣೆಗೆ ತರುವುದು ದುಷ್ಕರವೆಂಬುದು ಅನುಭವಿಗಳಿಗೆಲ್ಲಾ ತಿಳಿದಿದೆ. "ಇಂದ್ರಿಯಂಗಳ ಜಯಿಸಿ, ಚಿತ್ತಶುದ್ಧಿಯ ಬಯಸಿ" ಎಂದು ಆರಂಭವಾಗುವ ಒಂದು ಕವನವು ಗಾಂಧೀಜಿಯ ಸಾಧನೆಯನ್ನು ಕೊಂಡಾಡಿದೆ. ಮನಸ್ಸು ಹರಿದಾಡದಂತೆ ನಿರೋಧಿಸು ಎಂಬ ಸೂಚನೆ ಸರಳವಾಗಿದೆ. ಅದೆಷ್ಟು ಕ್ಲಿಷ್ಟವಾದುದೆಂಬ ಅರಿವು ಅಭ್ಯಾಸ ಮಾಡಹೊರಟಾಗ ದೊರೆಯುತ್ತದೆ. ಗೀತೆಯು ಕಠೋಪನಿಷತ್ತನ್ನು ಅನುಸರಿಸಿ ಅಭ್ಯಾಸ ಮಾರ್ಗವನ್ನು ಸೂಚಿಸಿದೆ ಮತ್ತು ಯೋಗಶಾಸ್ತ್ರ ಗ್ರಂಥಗಳು ಅಭ್ಯಾಸಕ್ರಮವನ್ನು ಇನ್ನೂ ವಿಶದವಾಗಿ ನಿರೂಪಿಸಿವೆ. ಗೀತೆಯ ಪ್ರಕಾರ ಯೋಗಮಾರ್ಗವು ಸಹ ಕಟ್ಟಕಡೆಗೆ ಭಗವಾನನಲ್ಲಿ ಲೀನವಾಗುವುದೇ ಆಗಿದೆ. ಅಂತಹ ಹಾದಿ ಯಾವುದು ? "ವಿಷಯಗಳನ್ನು ಅರಸುತ್ತಾ ಸದಾ ಹೊರಗೆ ಹರಿಯಲು ತುದಿಗಾಲ ಮೇಲಿರುವ ಇಂದ್ರಿಯಗಳನ್ನು ನಿಗ್ರಹಿಸು; ಮನಸ್ಸನ್ನು ಏಕಾಗ್ರತೆಯಿಂದ ಹೃದಯದ ಮೇಲೆ ಕೇಂದ್ರೀಕರಿಸು; ಪ್ರಾಣವನ್ನು ಶಿರದಲ್ಲಿ ಸ್ಥಿರೀಕರಿಸು; ಅದೇ ಯೋಗಧಾರಣ. ಓಂ ಎಂಬುದೇ ಬ್ರಹ್ಮನ್, ಅದನ್ನು ಮನಸ್ಸಿನಲ್ಲಿ ಗುನುಗುತ್ತಾ ನನ್ನ, ಅಂದರೆ ಭಗವಂತನ, ಸ್ಮರಣೆ ಮಾಡು. ಹಾಗೆ ಮಾಡುತ್ತಾ ದೇಹತ್ಯಾಗ ಮಾಡುವವರು ಪರಮಪದ ಪ್ರಾಪ್ತಿಗೆ ಅರ್ಹರಾಗುತ್ತಾರೆ" (೮.೧೨-೧೩). "ಒಮ್ಮನಸ್ಸಿನಿಂದ ಸದಾ ಯಾರು ನನ್ನನ್ನು ನೆನೆಯುತ್ತಾರೋ ಅಂಥವರಿಗೆ ನಾನು ಸುಲಭವಾಗಿ ದಕ್ಕುತ್ತೇನೆ. ಅಂಥವರು ನಿರಂತರವಾಗಿ ನನ್ನ ಸ್ಮರಣೆ ಮಾಡುವ ಯೋಗಿಗಳು" (೮.೧೪ : ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ। ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ॥). ಸ್ವಾರಸ್ಯವೇನೆಂದರೆ, ಈ ರೀತಿಯ ಅಭ್ಯಾಸದಲ್ಲಿ ಎಂದೂ ತೊಡಗದಿದ್ದವರು ಸಹ ಗೀತೆಯ ಆಶ್ವಾಸನೆಯನ್ನು ಪುಲಕಿತರಾಗಿ ಸ್ವೀಕರಿಸಿಬಿಡುತ್ತಾರೆ, ತಲೆದೂಗುತ್ತಾರೆ. ಆದ್ದರಿಂದಲೇ ಗೀತೆಯು ಬಹುತೇಕ "ಕೇಳುವ" ಗ್ರಂಥವಾಗಿಹೋಗಿದೆಯೇ ಹೊರತು "ಮಾಡುವ" ಪ್ರೇರಣೆ ನೀಡುವ ಗ್ರಂಥವಾಗಿಲ್ಲ. "ಮಾಡುವುದಾದರೆ ಮಾತ್ರ ನನ್ನನ್ನು ಮುಟ್ಟು , ಇಲ್ಲವಾದರೆ ದೂರ ಸರಿ" ಎಂದೇನಾದರೂ ಗೀತೆಯು ಆಗ್ರಹಿಸಿದ್ದರೆ ಅದೆಷ್ಟು ಆದರಣೀಯ ವಾಗಿರುತ್ತಿತ್ತೋ ತಿಳಿಯದು. ವ್ಯಾವಹಾರಿಕವಾಗಿ ಅದು ಕೇಳಲು ರಮ್ಯ ಮತ್ತು ಮನಸ್ಸನ್ನು ಕಟ್ಟಿಹಾಕಲು ಅದೊಂದು ಪ್ರಬಲ ಅಸ್ತ್ರ . ಕಳೆದ ನೂರು ವರ್ಷಗಳಲ್ಲಿ ನಮ್ಮ ದೇಶದ ಉದ್ಯಮಿಗಳು ಅದೆಷ್ಟು ಲಕ್ಷ ಗೀತೆಯ ಪ್ರತಿಗಳನ್ನು ಅಚ್ಚುಮಾಡಿಸಿ ಪುಕ್ಕಟೆಯಾಗಿ ಹಂಚಿದ್ದಾರೆ ಎಂಬುದನ್ನು ಲೆಕ್ಕಮಾಡಿದರೆ ಇದರ ಮರ್ಮವು ಸ್ಪಷ್ಟವಾಗಿ ತಿಳಿಯುತ್ತದೆ. ಅದು ದಾರ್ಶನಿಕ ಗ್ರಂಥವಾಗಿದ್ದಿದ್ದರೆ ಗೀತೆಯ ವ್ಯಾಪ್ತಿ ಸೀಮಿತವಾಗಿರುತ್ತಿತ್ತು. ಮೂಲತಃ ಅದು ಮತಧಾರ್ಮಿಕ ಆಶಯವನ್ನುಳ್ಳದ್ದು. ಎಂಟನೆಯ ಅಧ್ಯಾಯದ ಇನ್ನುಳಿದ ಭಾಗವು ಇದನ್ನು ಸ್ಪಷ್ಟಪಡಿಸುತ್ತದೆ. ಉದಾಹರಣೆಗೆ, "ನನ್ನ ಬಳಿ ಬಂದರೆ ಮತ್ತೆ ಪುನರ್ಜನ್ಮವಿಲ್ಲ, ದುಃಖಭರಿತವಾದ ಪ್ರಪಂಚದಿಂದ ಮುಕ್ತಿಯು ಖಚಿತ" (೮.೧೫). ಅಂದರೆ, ಅವನ ಬಳಿ ಹೋಗದಿದ್ದವರು ಮತ್ತೆ ಹುಟ್ಟಿಬಂದು ಜೀವನದ ಹೋರಾಟ ಮುಂದುವರಿಸಬೇಕು. ಪುನರ್ಜನ್ಮ ಇದ್ದರೆ ಎಷ್ಟು ಚಂದ ಎನಿಸುವುದಿಲ್ಲವೆ ? ಆದರೆ ಅದಿದೆ ಎಂಬುದಕ್ಕೆ ಪುರಾವೆಯೇನೂ ಇಲ್ಲ. "ಸಂಸಾರಸಾಗರಂ ಘೋರಂ" ಎಂದು ಹೇಳಿಕೊಂಡು ಸುಖವಾಗಿ ಸಂಸಾರವನ್ನು ಸವಿಯುವವರೇ ಹೆಚ್ಚು ಎಂಬುದು ಸಮಾಧಾನದ ಸಂಗತಿ. ಗೀತೆಯು ಐತಿಹ್ಯದ ದೊಡ್ಡ ಪಟ್ಟಿಗಳನ್ನು ನೀಡಿ ತಪ್ತಮನಸ್ಸು ಗಳಿಗೆ ತಂಪನ್ನೆರೆಯುತ್ತದೆಯೋ ಅಥವಾ ಭವಿಷ್ಯದ ಕನಸುಗಳನ್ನು ಆಪ್ತವಾಗಿಸುತ್ತದೋ ಎಂಬುದು ಓದುಗರ ಆಯ್ಕೆಗೆ ಬಿಟ್ಟದ್ದು. ಹೇಳಿದ್ದನ್ನು ತೆಪ್ಪಗೆ ಶ್ರದ್ಧೆಯಿಂದ ಸ್ವೀಕರಿಸು ವವರಿಗೆ ಆಪ್ಯಾಯಮಾನವಾಗಿಯೂ ಇರಲು ಸಾಧ್ಯ. ಶಾಲೀವಾಹನ ಶಕ ಸುಮಾರು ೮೦೦-೯೦೦ರ ಸುಮಾರಿನಲ್ಲಿ (ಅಂದರೆ, ಕ್ರಿ. ಶ. ೮ನೆಯ ಶತಮಾನದಲ್ಲಿ) ರಚನೆಗೊಂಡ ಪುರಾಣಗಳಲ್ಲಿ ವಿಸ್ತಾರವಾಗಿ ದಾಖಲಾಗಿರುವ ಕೆಲವು ಅಂಶಗಳ ಸೂಚನೆಯು ಗೀತೆಯಲ್ಲಾಗಲೆ ಉಪಲಬ್ಧವಿದೆ. ಉದಾಹರಣೆಗೆ, ಭಗವಾನ್ ಹೇಳುತ್ತಾನೆ : "ಬ್ರಹ್ಮನ ಒಂದು ದಿನವು ನಮ್ಮ ಸಾವಿರ ಯುಗಗಳಷ್ಟು; ಅವನ ರಾತ್ರಿಯೂ ಅಷ್ಟೇ ದೀರ್ಘವಾದ್ದು" (೮.೧೭). ನಮ್ಮ ಖಗೋಳಶಾಸ್ತ್ರಜ್ಞರು ನಿಖರವಾಗಿ ಹೇಳುತ್ತಿರುತ್ತಾರಲ್ಲ, "೬೫೦೦೦ ಲೈಟ್ ಇಯರ್ಸ್ ದೂರದಲ್ಲಿದೆ" ಎಂದು, ಹಾಗಿದೆ ಈ ಮಾತು. "ಅವ್ಯಕ್ತವೂ ನಾಶರಹಿತವೂ ಆದ ಪರಮಪದವು ನನ್ನದು; ಅದನ್ನು ತಲುಪಿದವರು ಹಿಂಬರುವುದಿಲ್ಲ" (೮.೨೧). ಅಲ್ಲಿ ಹೋಗಿ ಸೇರಿಕೊಂಡವರು ಯುಗಗಳ ಕಾಲ ಏನು ಮಾಡುತ್ತಿರುತ್ತಾರೋ ಏನೋ ! ರಾಮಾನುಜರ ವಿಶಿಷ್ಟಾದ್ವೈತದ ಪ್ರಕಾರ ಭಗವಂತನ ಸೇವೆ ಮಾಡುತ್ತಿರುತ್ತಾರೆ, ಸಾಮೀಪ್ಯ-ಸಾಯುಜ್ಯ ಅನುಭವಿಸುತ್ತಾ ಉಲ್ಲಾಸದಿಂದಿರುತ್ತಾರೆ. ಇಲ್ಲಿದ್ದಾಗ ಯಾರದೋ ಸೇವೆ ಕೆಲಕಾಲದ ಅವಧಿಗೆ; ಅಲ್ಲಿ ಹೋದಾಗ ನಿರಂತರ ಸೇವೆಯ ಸುಖ. ಯೋಗಿಗೆ ಏನೆಲ್ಲಾ ಲಭ್ಯವೆಂಬುದನ್ನು ಅಧ್ಯಾಯದ ಕೊನೆಯಲ್ಲಿ ಹೇಳಲಾಗಿದೆ. ತತ್ತ್ವಶಾಸ್ತ್ರ ಪ್ರಮೇಯಗಳಾಗಲಿ, ವೈಚಾರಿಕತೆಯ ಸುಳುಹಾಗಲಿ ಇಲ್ಲದ ಗೀತೆಯ ಅಧ್ಯಾಯಗಳಲ್ಲಿ ಎಂಟನೆಯ ಅಧ್ಯಾಯವೂ ಒಂದು.

ಒಂಭತ್ತನೆಯ ಅಧ್ಯಾಯ ಸಹ ಆದೇಶಗಳನ್ನು ನೀಡುವುದರಲ್ಲಿ ಹಿಂದೆ ಬೀಳುವುದಿಲ್ಲ. ಮೊದಲನೆಯ ಶ್ಲೋಕವು ಹೇಳುವಂತೆ ಭಗವಾನನ ಉದ್ದೇಶವು ಅಸೂಯೆ ಇಲ್ಲದವರಿಗೆ ರಹಸ್ಯ ಜ್ಞಾನವೊಂದನ್ನು ಬೋಧಿಸುವುದಾಗಿದೆ. ಅತಿ ಸೂಕ್ಷ್ಮ ಜ್ಞಾನವಾದ್ದರಿಂದ ಅದನ್ನು ರಹಸ್ಯವಾಗಿಡಬೇಕು. ಅದು ಜ್ಞಾನ-ವಿಜ್ಞಾನಗಳು ಏಕತ್ರ ಹೊಂದಿಕೊಂಡಿರುವಂತಹ ಜ್ಞಾನ. ವಿಜ್ಞಾನವನ್ನಿಲ್ಲಿ ಒಂದು ಬೌದ್ಧಿಕ ಶಿಸ್ತು ಎಂಬರ್ಥದಲ್ಲಿ ತೆಗೆದುಕೊಳ್ಳಬಾರದು. ಆದರೂ ಬೆಂಗಳೂರು ವಿಶ್ವವಿದ್ಯಾನಿಲಯವು "ಜ್ಞಾನಂ ವಿಜ್ಞಾನಸಹಿತಂ" (೯.೧) ಎಂಬುದನ್ನು ತನ್ನ ಲಾಂಛನದಲ್ಲಿ ಸೇರಿಸಿ ಕೊಂಡಿದೆ; ಏಕೆಂದರೆ ಅಲ್ಲಿ 'ವಿಜ್ಞಾನ' ಎಂಬ ಪದವಿದೆ. ಇಡೀ ಅಧ್ಯಾಯದ ತಾತ್ಪರ್ಯವು "ನನ್ನಲ್ಲಿ ಶ್ರದ್ಧೆ ಇಡು, ನಾನು ಹೇಳಿದ್ದನ್ನು ಕೇಳು; ಇಲ್ಲವಾದರೆ ನೀನು ನನ್ನಲ್ಲಿಗೆ ಬರಲಾರೆ" ಎಂಬುದಾಗಿದೆ. ಇಲ್ಲಿ ತಾರ್ಕಿಕ ಪ್ರಮೇಯಗಳೇನೂ ಇಲ್ಲ; ಎಲ್ಲಾ ಕೇವಲ ಹೇಳಿಕೆಗಳು. "ಅವನ್ನು ಒಪ್ಪಿಕೊ ಮತ್ತು ಸುಖಿಸು" ಎಂಬುದು ಉಪದೇಶ. ಈ ಗುಹ್ಯಜ್ಞಾನಕ್ಕೆ ಒಗ್ಗೊಡದವರು ಹುಟ್ಟು-ಸಾವು ಎಂಬ ಸಂಸಾರ ಬಂಧನದಿಂದ ಮುಕ್ತರಾಗುವುದಿಲ್ಲ (೯.೩ : ...ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ). ಮುಂದೆ ಒಂದಷ್ಟು ಒಗಟಿನ ರೂಪದ ಮಾತುಗಳಿವೆ. ಬೇಕಾದರೆ ತಲೆದೂಗಬಹುದು, ಇಲ್ಲವಾದರೆ ಉಪೇಕ್ಷಿಸಬಹುದು. ಉದಾಹರಣೆಗೆ, "ಇಡೀ ಜಗತ್ತು ನನ್ನಿಂದ ಆವೃತವಾಗಿದೆ; ಆದರೆ ಅವ್ಯಕ್ತ ರೂಪದಲ್ಲಿ. ಸೃಷ್ಟಿಯಲ್ಲಿರುವ ಎಲ್ಲವೂ ನನ್ನಲ್ಲಿವೆ, ಆದರೆ ನಾನು ಅವುಗಳಲ್ಲಿಲ್ಲ" (೯.೪). ಅಂದರೆ ಬ್ರಹ್ಮನ್ ಎಲ್ಲಕ್ಕೂ ಆಧಾರ ಮತ್ತು ಆಗರ, ಆದರೆ ಅದಕ್ಕೆ ಬೇರೊಂದು ಆಧಾರವೇನೂ ಇಲ್ಲ. "ಆಕಾಶವನ್ನೆಲ್ಲಾ ವ್ಯಾಪಿಸಿರುವ ವಾಯುವಿನಂತೆ ಎಲ್ಲ ಪದಾರ್ಥಗಳೂ ನನ್ನಲ್ಲಿವೆ" (೯.೬). ಮುಂದಿನ ಶ್ಲೋಕದಲ್ಲಿ ಕಲ್ಪಗಳ ಕಲ್ಪನೆಯೂ ಸೇರಿಕೊಳ್ಳುತ್ತದೆ. "ಕಲ್ಪದ ಅಂತ್ಯದಲ್ಲಿ (ಅಂದರೆ, ಪ್ರಳಯ ಕಾಲದಲ್ಲಿ) ಎಲ್ಲವೂ ನನ್ನ ಪ್ರಕೃತಿಯಲ್ಲಿ ಸೇರಿಕೊಳ್ಳುತ್ತವೆ ಮತ್ತು ಮುಂದಿನ ಕಲ್ಪದ ಆರಂಭದಲ್ಲಿ ಅವನ್ನು ನಾನು ಹೊರಹಾಕುತ್ತೇನೆ" (೯.೭). ಸ್ವಲ್ಪ ಲಘುವಾಗಿ ಹೇಳುವುದಾದರೆ ಇಲ್ಲಿಯ ನಿರೂಪಣೆಗಳು ಹರಿಕಥಾ ಪ್ರಸಂಗಗಳಿಗೆ ಹೇಳಿ ಮಾಡಿಸಿದಂತಿವೆ. ಗೀತೆಯ ಜನಪ್ರಿಯತೆ ಮತ್ತು ಜನರ ಅವಿಚಾರಿತ ರಮಣೀಯ, ಎರಡೂ ಜೊತೆಜೊತೆಯಾಗಿ ಸಾಗಿಬಂದಿವೆ. ಮುಂದೆ "ಪ್ರಶ್ನೆ ಮಾಡು" ಎಂದು ಭಗವಾನನು ಶಿಷ್ಯನಿಗೆ ಹೇಳುತ್ತಾನೆ, ಆದರೆ ಎಲ್ಲಿ ಯಾವ ಪ್ರಶ್ನೆಯನ್ನೆತ್ತಬಹುದೋ ಅದನ್ನು ಗೀತೆಯು ಎತ್ತುವುದಿಲ್ಲ; ಬದಲಾಗಿ, "ಶ್ರದ್ಧೆಯಿಂದ ಒಪ್ಪಿಕೊ" ಎಂದುಬಿಡುತ್ತದೆ. ಗೀತೆಯ ಅಸಾಂಗತ್ಯವು ಇಂತಹ ಕಡೆಗಳಲ್ಲಿ ಸ್ವಲ್ಪಮಟ್ಟಿಗೆ ವೇದ್ಯವಾಗಬಲ್ಲದು.

ಅಧ್ಯಾಯದ ೧೧ನೆಯ ಶ್ಲೋಕದಲ್ಲಿ ಭಗವಾನನ ಬೇಸರವು ಅಭಿವ್ಯಕ್ತವಾಗಿದೆ : "ನನ್ನ ನೈಜವಾದ ಸರ್ವಾಂತರ್ಯಾಮಿತ್ವವನ್ನು ತಿಳಿಯಲಾರದ ಮೂಢರು ನನ್ನ ಮಾನವ ದೇಹವನ್ನು ಮಾತ್ರ ಪರಿಗಣಿಸಿ ನನ್ನ ಅಂತಸ್ಸತ್ವವನ್ನು ಕಡೆಗಣಿಸುತ್ತಾರೆ" (೯.೧೧ : ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ । ಪರಂ ಭಾವಂ ಅಜಾನಂತಃ ಮಮ ಭೂತಮಹೇಶ್ವರಂ ॥). ಗೀತೆಯ ಕೃಷ್ಣನು ಅವತಾರಪುರುಷ ನೆಂಬುದನ್ನು ತಿಳಿಯದವರ ಬಗೆಗಿನ ಕನಿಕರ ಇದಾಗಿರಬಹುದು ! ಅವತಾರವೆಂಬ ಪರಿಕಲ್ಪನೆಯು ಗೀತೆಯ ಕೊಡುಗೆ. ಧರ್ಮಕ್ಕೆ ಗ್ಲಾನಿಯುಂಟಾದಾಗೆಲ್ಲಾ ತಾನು




ಅವತರಿಸಿ ಬರುವುದಾಗಿ ಮೊದಲೇ ಭಗವಾನನು ಹೇಳಿದ್ದಾನಲ್ಲವೆ ? ಯಾರನ್ನು ಭಗವಾನನು ಮೂಢರೆಂದು ಇಲ್ಲಿ ಗುರುತಿಸಿದ್ದಾನೋ ಅವರ ಜನ್ಮ ಜಾಲಾಡಲು ಗೀತೆಯ ೧೬ನೆಯ ಅಧ್ಯಾಯವನ್ನು ಮೀಸಲಾಗಿಟ್ಟಿದೆ. ಅಲ್ಲಿ ಅವರನ್ನು ಆಸುರೀ ಪ್ರವೃತ್ತಿಯವರೆಂದು ಜರಿದು ಅವರ ತಥಾಕಥಿತ ಅವಗುಣಗಳನ್ನು ಹೀಯಾಳಿಸಲಾಗಿದೆ. ಅದನ್ನು ಮುಂದೆ ನೋಡೋಣ. ಬೌದ್ಧರು, ಲೋಕಾಯತರು, ಗೀತೆಯ ದೃಷ್ಟಿಯಲ್ಲಿ ಆ ಪ್ರವೃತ್ತಿಯವರಿರಬೇಕು; ಅವರಿಂದಾಗಿಯೇ ಗೀತೆಯು ಅಸ್ತಿತ್ವಕ್ಕೆ ಬಂದಿರುವುದು, ಏಕೆಂದರೆ ಅವರ ಚಿಂತನೆ ಮತ್ತು ಆಚರಣೆಗಳಿಗೆ ಪರ್ಯಾಯವನ್ನು ಕೃಷ್ಣ ಪರಮಾತ್ಮ ಗೀತೆಯ ಉಳಿದ ಅಧ್ಯಾಯಗಳಲ್ಲಿ ಒದಗಿಸಹೊರಟಿದ್ದಾನೆ. ಶ್ರೀ ಭಗವಾನನನ್ನು ಅವನ ಗರಿಷ್ಠ ರೂಪದಲ್ಲಿ ಯಾರು ಗುರುತಿಸಲಾರರೋ, ಅಂದರೆ ಅವನಿಗೆ ಶರಣಾಗಿ ಪೂಜಿಸುವುದಿಲ್ಲವೋ ಮತ್ತು ಅವನ ಸ್ವ–ಧರ್ಮದ ಶ್ರೇಷ್ಠತೆಯನ್ನು ಪ್ರಶ್ನಿಸುತ್ತಾರೋ, ಅವರು ಯಾವುದರಲ್ಲೂ ಯಶಸ್ಸು ಕಾಣಲಾರರು ಎಂದು ೧೨ನೆಯ ಶ್ಲೋಕ ಉಪದೇಶಿಸುತ್ತದೆ. "ಅವರ ಆಸೆ ಅಥವಾ ಆಶಯ, ಅವರ ಕ್ರಿಯೆ, ಅವರ ಜ್ಞಾನ, ಎಲ್ಲವೂ ಲುಪ್ತವಾಗಿ ಹೋಗುತ್ತವೆ. ಅವರು ಬುದ್ಧಿ ಇಲ್ಲದವರು; ರಾಕ್ಷಸೀ ಮತ್ತು ಆಸುರೀ ಪ್ರವೃತ್ತಿಗಳಿಗೆ ಸಿಲುಕಿ ನಾಶವಾಗುತ್ತಾರೆ" (೯.೧೨ : ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ। ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥). ಇಷ್ಟು ದೊಡ್ಡ ಅವತಾರ ಪುರುಷನಿಗೆ ಇಂಥವರನ್ನು ಬದಲಾಯಿಸಲು ಏಕೆ ಸಾಧ್ಯವಾಗಲಿಲ್ಲವೋ ತಿಳಿಯದು. ಅವನು ಕೊಲ್ಲಲು ಬರುತ್ತಾನೋ, ಇಲ್ಲವೇ ತಿಳಿವಳಿಕೆ ನೀಡಿ ಅವರನ್ನು ಬದಲಾವಣೆಗೆ ಪಕ್ವವಾಗಿಸಲು ಬರುತ್ತಾನೋ ? ತಾಮಸಿಕರನ್ನು ಸಾತ್ವಿಕರನ್ನಾಗಿಸಲು ಅವನಿಗೆ ಸಾಧ್ಯವಾಗುವುದಿಲ್ಲವೆ ? ಇಂತಹ ಪ್ರಶ್ನೆಗಳು ಅಪ್ರಸ್ತುತವಲ್ಲ ಮತ್ತು ಲೇವಡಿಯ ಉದ್ದೇಶ ಹೊಂದಿಲ್ಲ.

ಹಾಗಿದ್ದರೆ ಅವನನ್ನು ಓಲೈಸುವುದು ಹೇಗೆ ? ಏಕನಿಷ್ಠೆಯಿಂದ ಅವನನ್ನು ಭಜಿಸುವುದರ ಮುಖಾಂತರ, ಅಷ್ಟೆ (೯.೧೩ : ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ। ಭಜಂತಿ ಅನನ್ಯಮನಸಃ ಜ್ಞಾತ್ವಾ ಭೂತಾದಿಮವ್ಯಯಂ ॥). ಅವರಲ್ಲಿ ದೈವೀ ಸ್ವಭಾವವಿರಬೇಕು, ಅನನ್ಯವಾದ ಮನಸ್ಸಿರಬೇಕು. ಅದೇನೋ ಸರಿ, ಅವಿಲ್ಲದವರಿಗೆ ಅವನ್ನು ಕೊಡಮಾಡುವುದು ಹೇಗೆ ? ಬಹುಶಃ ಯೋಗಮಾರ್ಗದಲ್ಲಿ ಮುನ್ನಡೆಯುವಂತೆ ಮಾಡುವುದಿರಬೇಕು. ಲೋಪಗಳನ್ನು ನಿವಾರಿಸಿ ಋಜುಮಾರ್ಗಕ್ಕೆ ಕೊಂಡೊಯ್ಯುವ ವಿಧಾನವೇನಾದರೂ ಇದ್ದರೆ ಗೀತೆಯು ಅದಕ್ಕೆ ಆದ್ಯತೆ ನೀಡಿಲ್ಲ; ಭಕ್ತಿಯಿಂದ ಭಜಿಸಿ ಪರಮಾತ್ಮನನ್ನು ತಣಿಸುವ ಕ್ರಮ ಅದಕ್ಕೆ ಹೆಚ್ಚು ಆಪ್ತವಾದದ್ದು. "ನನ್ನನ್ನು ಹೊಗಳುತ್ತಾ, ದೃಢವಾದ ನಿಷ್ಠೆಯಿಂದ ಯತ್ನಿಸುತ್ತಾ, ಭಕ್ತಿಯಿಂದ ನನ್ನನ್ನು ನಮಸ್ಕರಿಸುತ್ತಾ ಇರುವಂಥವರು ನನ್ನನ್ನು ಸರಿಯಾದ ರೀತಿಯಲ್ಲಿ ಭಜಿಸುತ್ತಾರೆ" (೯.೧೪ : ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ। ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥). ಜನರನ್ನು ದುಃಖದಿಂದ ಪಾರುಮಾಡುವ ಭಗವಂತನು ಇಷ್ಟೊಂದು ಸ್ವಕೇಂದ್ರಿತ ನಿರೀಕ್ಷೆಯನ್ನು ಇಟ್ಟುಕೊಳ್ಳಬೇಕೇಕೆ ? ಕೊಚ್ಚೆಯಲ್ಲಿ ಬಿದ್ದವರನ್ನು ಯಾವ ನಿರೀಕ್ಷೆಯೂ ಇಲ್ಲದೆ ಮೇಲೆತ್ತುವಂತಹ ಪರಹಿತ ಚಿಂತನೆಯಲ್ಲವೇ ಪರಮಾತ್ಮನಿಗೆ ಶೋಭಿಸುವುದು ? ಸ್ವಾಮಿಯ ಅನುಗ್ರಹಕ್ಕೆ ಪಾತ್ರನಾಗಲು ಭಕ್ತನು ತನ್ನನ್ನು ತಾನು ಪೂರ್ತಿಯಾಗಿ ಅರ್ಪಿಸಿಕೊಂಡರೆ ಸಾಲದೆ ? ಶ್ಲಾಘನೆ, ನಮಸ್ಕಾರ, ಇವೆಲ್ಲಾ ಏಕೆ ಬೇಕು ಎನಿಸುತ್ತದೆ. ವ್ಯಕ್ತಿಯು ಶರಣಾದರೆ ಸಾಲದು, ಬಾಹ್ಯ ರೂಪಗಳಲ್ಲಿ ತಾನು ಶರಣಾಗಿರುವುದನ್ನು ವ್ಯಕ್ತಪಡಿಸಬೇಕು. ನಿಷ್ಠೆಯು ಎಷ್ಟು ಆಳವಾಗಿದೆ ಎಂಬುದರ ಮಾಪನವೋ ಎಂಬಂತಿದೆ ಇದು. ಆದರೆ ಅನ್ಯಮಾರ್ಗಗಳಲ್ಲಿ ಭಗವಂತನನ್ನು ತಣಿಸಬಹುದೆಂಬುದನ್ನು ಗೀತೆಯು ಮಾನ್ಯ ಮಾಡುತ್ತದೆ. ಜ್ಞಾನಯಜ್ಞವು ಅಂತಹುದೊಂದು ಮಾರ್ಗ (೯.೧೫).

ಮುಂದಿನ ಕೆಲವು ಶ್ಲೋಕಗಳಲ್ಲಿ ಭಗವಾನನು ತನ್ನ ಸರ್ವಾಧಿಕ್ಯವನ್ನು ಮತ್ತು ಸರ್ವವ್ಯಾಪಕತೆಯನ್ನು ಸೂಚಿಸಲು ತನ್ನ ಸರ್ವತೋಮುಖ ವ್ಯಾಪ್ತಿಯನ್ನು ಬಣ್ಣಿಸಿಕೊಳ್ಳುತ್ತಾನೆ. ಯಜ್ಞ, ಯಜ್ಞವನ್ನು ಮಾಡುವ ಯಜಮಾನ, ಹವಿಸ್ಸು, ಔಷಧ (ವಿವಿಧ ಸಸ್ಯ ಪ್ರಕಾರಗಳು), ತುಪ್ಪ, ಅಗ್ನಿ, ಎಲ್ಲವೂ ಅವನೇ (೯.೧೬). ಜಗತ್ತಿನ ತಂದೆ, ತಾಯಿ, ಪೋಷಕ, ಅಜ್ಜ, ಓಂಕಾರ, ಋಕ್, ಸಾಮ, ಯಜುಸ್ (ಈ ಮೂರು ವೇದಗಳ ಹೆಸರುಗಳು; ಅಥರ್ವವೇದವು ಇಲ್ಲಿ ಸೇರಿಲ್ಲ), ಎಲ್ಲಾ ಅವನೇ (೯.೧೭). ಶಾಖ ನೀಡುವವನು ಅವನು, ಮಳೆ ಸುರಿಸುವವನು ಅವನು, ಅಮೃತ–ಮೃತ್ಯು–ಸತ್–ಅಸತ್, ಎಲ್ಲವೂ ಅವನೇ (೯.೧೯). "ಎಲ್ಲಾ ನಾನೇ" ಎಂದಷ್ಟೇ ಹೇಳಿದರೆ ಸಾಲದೆ ? ಗೀತೆಯ ಕರ್ತೃವು ಅದನ್ನು ವಿಶದೀಕರಿಸಿ ಓದುಗನ ಮನಸ್ಸನ್ನು ಸೆರೆಹಿಡಿಯಲು ಉತ್ಸುಕನಾಗಿದ್ದಾನೆ. ಓದುಗನು ಭಗವಂತನ ಮಹಾನ್ ವ್ಯಾಪ್ತಿಯನ್ನು, ಜಗತ್ತಿನ ಕರ್ತೃತ್ವವನ್ನು, ಒಪ್ಪಿಬಿಡಬೇಕು ಮತ್ತು ಸ್ತಂಭೀಭೂತನಾಗಬೇಕು. ಆಗ ಅವನು ಗೀತೆಯ ಸಾಮಾಜಿಕ ಆಶಯಕ್ಕೆ ಮಾರುಹೋಗುತ್ತಾನೆ, ಪ್ರಶ್ನಿಸುವುದನ್ನು ನಿಲ್ಲಿಸಿ ಚಾತುರ್ವರ್ಣ್ಯ ಪದ್ಧತಿ, "ಸ್ವ–ಧರ್ಮ" (ಅಂದರೆ ನಿಗದಿತ ವರ್ಣಧರ್ಮ), ಭಗವಂತನ ಅವತಾರ, ಮುಂತಾದುವನ್ನೆಲ್ಲಾ ಸ್ವೀಕರಿಸಲು ಮಾನಸಿಕವಾಗಿ ಸಿದ್ಧನಾಗುತ್ತಾನೆ. "ನಾನು ನಿನ್ನ ಶಿಷ್ಯನಾಗಿ ಬಂದಿದ್ದೇನೆ, ನನ್ನನ್ನು ಕೈಹಿಡಿದು ಮುನ್ನಡೆಸು" ಎಂದು ದೀನನಾಗಿ ಬೇಡಲು ಹಿಂಜರಿಯುವುದಿಲ್ಲ. ಅರ್ಥಾತ್, ಬೌದ್ಧರ ಮತ್ತು ಲೋಕಾಯತರ ಪಂಥಕ್ಕೆ ಮಣಿಯುವುದಿಲ್ಲ ಎಂಬ ಮನಃಸ್ಥಿತಿಗೆ ಬಂದಾನು. ಚಾರಿತ್ರಿಕವಾಗಿ ಗೀತೆಯ ಪಾತ್ರವನ್ನು ಅರ್ಥೈಸಿಕೊಳ್ಳಲು ಆ ಗ್ರಂಥದ ಕರ್ತೃವಿನ ಚಮತ್ಕಾರವನ್ನು ತಿಳಿಯಬೇಕು. ಬೋಧನೆಯು ಅಯಸ್ಕಾಂತವಾಗುವಷ್ಟು ಪ್ರಖರವಾಗುವಂತಹ ರೀತಿಯಲ್ಲಿ ಸಂವಹನ ಮಾಡಲು ಗೀತೆಯ ಕರ್ತೃವು ಸಮರ್ಥನಿದ್ದಾನೆ. ಒಂದೊಂದು ಅಧ್ಯಾಯನವೂ ಅದಕ್ಕೆ ಉದಾಹರಣೆಯಾಗಿದೆ.

ಪ್ರಸ್ತುತ ಅಧ್ಯಾಯದ ಮುಂದಿನ ಎರಡು ಶ್ಲೋಕಗಳಲ್ಲಿ ಪರಮಭಕ್ತಿಯು ಬೇರೆಲ್ಲ ಸಾಧನಗಳಿಗಿಂತಲೂ ಫಲಪ್ರದವಾದ್ದು, ಶ್ರೇಷ್ಠವಾದ್ದು ಎಂದು ದೃಷ್ಟಾಂತ ಸಮೇತ ಪ್ರತಿಪಾದಿಸಲಾಗಿದೆ. ವೇದಗಳನ್ನೋದಿದರೇನು ಫಲ ? ಹೆಚ್ಚೆಂದರೆ ಯಜ್ಞ ಮಾಡಿ ಸ್ವರ್ಗಕ್ಕೆ ಏರಬಹುದು, ನಿಜ; ಅಲ್ಲಿ ಸಕಲೈಶ್ವರ್ಯಗಳನ್ನೂ ಭೋಗಿಸಬಹುದು, ನಿಜ. ಆದರೆ ಎಷ್ಟು ಕಾಲ ಆ ಫಲ ಅವರದಾಗಿರುತ್ತದೆ ? ಅವರು ಗಳಿಸಿದ ಪುಣ್ಯವು ಐಹಿಕ ಸಂಪತ್ತಿನಂತೆಯೇ ಸರಿ; ಖರ್ಚು ಮಾಡುತ್ತಿದ್ದಂತೆ ಕ್ಷೀಣಿಸುತ್ತದೆ. ಸ್ವರ್ಗಕ್ಕೆ ತೆರಳಿದವರ ಪುಣ್ಯಫಲವು ಕರಗಿಹೋಗುವ ಗಂಟು. ಎಲ್ಲಾ ಕರಗಿದ ಮೇಲೆ ಖಾಲಿ ಕೈಯಲ್ಲಿ ಅವರು ಮತ್ತೆ ಇಲ್ಲಿಗೆ ಬಂದು ಬೀಳುತ್ತಾರೆ. (ಯಮನು ಒಡ್ಡುವ ಎಲ್ಲ ಪ್ರಲೋಭನೆಗಳನ್ನೂ ನಿರಾಕರಿಸುತ್ತಾ ನಚಿಕೇತನು ಅವೆಲ್ಲಾ ಎಷ್ಟು ನಿಷ್ಪ್ರಯೋಜಕ ಎಂಬುದನ್ನು ಸುಂದರವಾಗಿ ಚಿತ್ರಿಸಿದ್ದಾನೆ. – ಕಠೋಪನಿಷತ್ ೧.೨೮. ಅದನ್ನಿಲ್ಲಿ ಸ್ಮರಿಸಬಹುದು). ಗೀತೆಯ ಮಾತಿನಲ್ಲಿ ಹೇಳುವುದಾದರೆ "ಆ ವಿಶಾಲ ಸ್ವರ್ಗದಲ್ಲಿ ರಮಿಸಿ, ಪುಣ್ಯವು ಕ್ಷೀಣಿಸಿದಂತೆ ಅವರು ಮತ್ತೆ ಇದೇ ಮರ್ತ್ಯಲೋಕಕ್ಕೆ ಹಿಂದಿರುಗುತ್ತಾರೆ. ಮೂರು ವೇದಗಳು ಹೇಳುವ ವಿಧಿಗಳನ್ನೆಲ್ಲಾ ಆಚರಿಸಿದಾಗ್ಯೂ ಹುಟ್ಟು–ಸಾವಿನ ಜಂಜಾಟದಿಂದ ಪಾರಾಗಲಾರರು" (೯.೨೧ : ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ। ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ। ಏವಂ ಹಿ ತ್ರೈಧರ್ಮ್ಯಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥). ಅದೇಕೋ ಏನೋ ಅನಿರ್ದಿಷ್ಟವಾದ ಶಾಶ್ವತ ಲೋಕವು ನಮ್ಮ ದೇಶದ ಪ್ರಾಚೀನರ ಚಿಂತನೆಯಲ್ಲಿ ಮಹತ್ವದ ಸ್ಥಾನ ಪಡೆದಿದೆ. ಇಲ್ಲಿಯ ಜೀವನವನ್ನು ಹಸನಾಗಿಸುವ ಯೋಚನೆಗಿಂತಲೂ ಎಲ್ಲಾ ಹಸನಾಗಿರುವ ಅದೃಶ್ಯವಾದ ಆ ಶಾಶ್ವತ ಲೋಕಕ್ಕೆ ಜಿಗಿದುಹೋಗುವುದು ಹೇಗೆಂಬ ಯೋಚನೆಯು ಗಾಢವಾಗಿದೆ. ಗೀತೆಯು ಅದಕ್ಕೆ ಪುಷ್ಟಿ ನೀಡುವುದರ ಜೊತೆ ವಿಶ್ವಾಸಾರ್ಹವಾದ ಆಶ್ವಾಸನೆಯನ್ನೂ ಭಗವಾನನಿಂದ ಕೊಡಿಸಿದೆ. "ನನ್ನನ್ನು ಗುರಿಯಾಗಿಸಿ ಚಿಂತಿಸುವವರು, ಬೇರಾವುದರತ್ತಲೂ ಚಿತ್ತ ಹರಿಸದವರು, ಎಲ್ಲೆಲ್ಲೂ ನನ್ನನ್ನು ಕಾಣುವವರು ಯಾರಿದ್ದಾರೋ ಅವರ

ಯೋಗಕ್ಷೇಮವನ್ನು ನಾನು ನಿರ್ವಹಿಸುತ್ತೇನೆ" (೯.೨೨ : ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿ ಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥). ಭಾರತೀಯ ವಿಮಾ ಕಾರ್ಪೊರೇಶನ್ ಸಹ ಈ ಆಶ್ವಾಸನೆಯನ್ನು ತನ್ನ ಘೋಷವಾಕ್ಯವನ್ನಾಗಿ ಇರಿಸಿಕೊಂಡಿದೆ. ಇಹದ ನೀಗಲಾಗದ ಸಂಕಷ್ಟಗಳಿಗೆ ಮದ್ದು, ಅವನ್ನು ನೀಗಿಸಿಕೊಳ್ಳಲು ಅಗತ್ಯವಾದ ಸಾಮೂಹಿಕ ಕ್ರಮಗಳನ್ನು ಕೈಗೊಳ್ಳುವುದಲ್ಲ; ಬದಲಾಗಿ, ಅವುಗಳಿಂದ ಪಾರಾಗಲು ಒಂದು ಕಲ್ಪನಾಲೋಕಕ್ಕೆ ಹೋಗಿ ವಿಹರಿಸುವುದು. ಪ್ರಜ್ಞಾಪೂರ್ವಕ ಮಧ್ಯಪ್ರವೇಶ ಮಾಡಿ ಕ್ರಿಯಾಶೀಲತೆಯಿಂದ ಇಹವನ್ನು ಬದಲಿಸುವ ಸಂಕಲ್ಪವನ್ನು ಗೀತೆಯು ಬೋಧಿಸುವುದಿಲ್ಲ; ಬದಲಾಗಿ ನಮಗೆ ಗೊತ್ತಿಲ್ಲದ ಒಂದು ಶಾಶ್ವತಲೋಕಕ್ಕೆ ಹೋಗಿಬಿಟ್ಟರೆ ಬಂಧನಗಳೆಲ್ಲಾ ಕಳಚಿಬೀಳುತ್ತವೆ ಎಂಬ ರಮ್ಯ ಕಲ್ಪನೆಗೆ ಗೀತೆಯು ಮನಸ್ಸನ್ನು ಪ್ರೇರೇಪಿಸಲು ಸಾಧನವಾಗುತ್ತದೆ.

"ಯಾರನ್ನು ಪೂಜಿಸಿದರೂ ನನ್ನನ್ನು ಪೂಜಿಸಿದಂತೆಯೇ ಸರಿ, ಆದರೆ ಅದು ಸೂಕ್ತ ಮಾರ್ಗವಲ್ಲ", ಎಂದು ಭಗವಾನನು ತನ್ನ ಮಂಡನೆಯನ್ನು ಮುಂದುವರಿಸುತ್ತಾನೆ (೯.೨೩). ದೇವಾದಿದೇವತೆಗಳನ್ನು ಓಲೈಸಿ ಅವರ ಸಾನ್ನಿಧ್ಯ ಪಡೆಯಬಹುದು; ಅಂತೆಯೇ ಪಿತೃಗಳನ್ನು ಪೂಜಿಸಿ ಅವರನ್ನು ಸೇರಿಕೊಳ್ಳಬಹುದು. ಆದರೆ ಪರಮಾತ್ಮ ಶ್ರೀಕೃಷ್ಣನನ್ನು ಹೊಂದಬೇಕಾದರೆ ನೇರವಾಗಿ ಅವನನ್ನೇ ಪೂಜಿಸಬೇಕು (೯.೨೫). ಪೂಜೆಯೆಂದರೆ ಅದು ಸಂಕೀರ್ಣವಾಗಿ ಒಂದು ಮಹಾಯಜ್ಞದಂತಿರಬೇಕೆಂದು ಭಾವಿಸಿಕೊಳ್ಳಬೇಕಾಗಿಲ್ಲ. ಭಕ್ತಿಯೊಂದಿದ್ದರೆ ಸಾಕು, ಅರ್ಪಿಸುವುದೇನು ಎಂಬುದು ಗೌಣ. ಒಂದು ಎಲೆ, ಒಂದು ಹೂವು, ಒಂದು ಹನಿ ನೀರು, ಒಂದು ಹಣ್ಣು, ಯಾವುದಾದರೂ ಸರಿ; ಅಷ್ಟೇ ಸಾಕು. ಆತ್ಮಶುದ್ಧಿಯಿಂದ ಕಿಂಚಿತ್ತಾಗಿ ಏನನ್ನು ಅರ್ಪಿಸಿದರೂ ಭಗವಂತನು ಸುಪ್ರೀತನಾಗುತ್ತಾನೆ. ಇದು ಗೀತೆಯ ಮಾತು (೯.೨೬ : ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ । ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥). ಈ ಶ್ಲೋಕವನ್ನು ಆರ್ದ್ರತೆಯಿಂದ ಉಚ್ಚರಿಸಿ ಅದರ ತಾತ್ಪರ್ಯವನ್ನು ಬಹಳ ತತ್ಪರರಾಗಿ ವಿವರಿಸುವುದನ್ನು ನಾವೆಲ್ಲಾ ನೋಡಿದ್ದೇವೆ. ಹಾಗೆ ಹೇಳಿದ ಮುಂದಿನ ಕ್ಷಣದಲ್ಲಿ ಮಹಾಯಜ್ಞಕ್ಕೆ ಸಿದ್ಧತೆಯನ್ನೂ ನಡೆಸುತ್ತಾರೆ. ಅದೇ ದೊಡ್ಡ ವಿಪರ್ಯಾಸ. ಎಷ್ಟೋ ಗೀತಾ ಜ್ಞಾನ ಯಜ್ಞಗಳು ಅದ್ದೂರಿಯಾಗಿ ಯಾಂತ್ರಿಕ ಯಜ್ಞಗಳೊಡನೆ ಮುಕ್ತಾಯವಾಗುವುದು ನಮ್ಮಲ್ಲಿ ಅಪರೂಪವಲ್ಲ. "ಎಲ್ಲವನ್ನೂ ನನಗೇ ಅರ್ಪಿಸು" (೯.೨೭) ಎಂಬ ಗೀತಾವಾಕ್ಯವನ್ನು ಭಗವಾನನಿಗಲ್ಲದೆ ಬೇರಾರಿಗೋ ಅರ್ಪಿಸುವಾಗಲೂ ಉಚ್ಚರಿಸುವುದುಂಟು. ಇದು ವೈರುಧ್ಯದಿಂದ ಕೂಡಿಲ್ಲವೇ ಎಂಬ ಶಂಕೆಯೂ ಕೆಲವರಿಗೆ ಬರುವುದಿಲ್ಲ, ಏಕೆಂದರೆ ಅವರಿಗೆ ಸಮಾಧಾನ ನೀಡುವ ವಿವರಣೆಗಳಿವೆ. ಉದಾಹರಣೆಗೆ, "ನೀನು ಏನನ್ನು ಯಾರಿಗೆ ಅರ್ಪಿಸಿದರೂ ಅದು ಆ ಭಗವಾನನಿಗೆ ಅರ್ಪಿಸಿದಂತೆಯೇ ಸರಿ."

ಗೀತೆಯ ಈ ೯ನೆಯ ಅಧ್ಯಾಯದಲ್ಲಿ ಶ್ರೀಭಗವಾನನ ಹೇಳಿಕೆಗಳು ಪುಷ್ಕಲವಾಗಿ ತುಂಬಿವೆಯಾದರೂ ತರ್ಕ ಮತ್ತು ತತ್ವಚಿಂತನೆಗೆ ವಿಶೇಷ ಸಾಮಗ್ರಿಯನ್ನೇನೂ ಕಾಣಲಾರೆವು. ಹೇಳಿಕೆಗಳನ್ನು ಪ್ರಶ್ನಿಸುವವರಿಗೆ ಪರಿಹಾರ ರೂಪದ ಪ್ರತಿಪಾದನೆಗಳೂ ಇಲ್ಲ. ಇದು ಮತಧರ್ಮ ಗ್ರಂಥಗಳ ಲಕ್ಷಣ. ಹೆಚ್ಚು ಕಡಿಮೆ ಇಂಥವೇ ಮಾತುಗಳನ್ನು ಬೇರೆ ಮತಗಳ ಗ್ರಂಥಗಳೂ ಹೇಳಿವೆ. ಅವನ್ನಿಲ್ಲಿ ಉದ್ಧರಿಸುವ ಪ್ರಮೇಯವಿಲ್ಲ. ಒಂದು ಪುಟ್ಟ ಸಮಾಧಾನದ ಮಾತನ್ನು ಗೀತೆಯು ಸೇರಿಸಿದೆ. ಅದೊಂದು ವಿಶೇಷ. ದುರಾಚಾರಿಯು ಭಗವಾನನನ್ನು ಭಜಿಸಿದರೆ ಅವನೂ ಒಳ್ಳೆಯವನೇ ಆಗುತ್ತಾನಂತೆ; ಸರಿದಾರಿಗೆ ಬಂದಿರುವುದರಿಂದ (೯.೩೦ : ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ । ಸಾಧುರೇವ ಸ ಮಂತವ್ಯಃ ಸಮ್ಯಕ್ ವ್ಯವಸಿತೋ ಹಿ ಸಃ ॥). ಬೇರೇನೇ ದುಷ್ಟತನವನ್ನು ಮೆರೆಯಲಿ, ಭಗವಂತನನ್ನು ಭಜಿಸಿದರೆ ವ್ಯಕ್ತಿಯು ಆದರಣೀಯನೆಂಬ ಈ ಸೂತ್ರವು ಸಮಕಾಲೀನ ಸಂದರ್ಭದಲ್ಲಿ ಬಹಳ ಅರ್ಥವತ್ತಾದ್ದು; ಏಕೆಂದರೆ ವ್ಯವಹಾರದಲ್ಲಿ ಅನೇಕ ವಂಚಕರಾಗಿರುವವರು ಮರ್ಯಾದಸ್ಥರಂತೆ ತೋರಿಬರುತ್ತಾರೆ. ಭಗವಾನನ ಭಕ್ತನಿಗೊಂದು ರಕ್ಷಣೆ ಉಂಟು (೯.೩೧ : ...ನ ಮೇ ಭಕ್ತಃ ಪ್ರಣಶ್ಯತಿ). ಹೆಚ್ಚು ವಂಚನೆ ಮಾಡಿದವರು ಹೆಚ್ಚು ಗೀತಾ ಜ್ಞಾನಯಜ್ಞಗಳನ್ನು ಆಯೋಜಿಸಿದರೆ ಮುಗಿಯಿತು ! ಕಡೆಗೆ ಭಗವಾನನು ಒಂದು ಬಾಂಬು ಹಾಕಿಬಿಡುತ್ತಾನೆ.

### ಕಾರಣ ?

ಗಿಡ, ಮರಗಳ ಮಾರಣ
ಮಳೆ ಇಲ್ಲ, ಬದುಕು ದಾರುಣ !
ಪ್ರಕೃತಿ ಮುನಿಸಿಗೆ ಮನುಜಾ
ಅಲ್ಲವೇ ನೀನೇ ಕಾರಣ ?

**ಲಾಲಸಾಬ ಎಚ್. ನದಾಫ**
ನವನಗರ, ಬಾಗಲಕೋಟ – ೫೮೭ ೧೦೩

ಪಾಪ, ನಮ್ರ ವಿದ್ಯಾರ್ಥಿಯಾದ ಅರ್ಜುನ ಏನೊಂದು ತಕರಾರನ್ನೂ ಎತ್ತುವುದಿಲ್ಲ. ಏನದು ಬಾಂಬು ? "ಅಯ್ಯಾ ಪಾರ್ಥ, ಇದನ್ನು ತಿಳಿ : ಪಾಪದಲ್ಲಿ ಹುಟ್ಟಿದವರು, ಮಹಿಳೆಯರು, ವೈಶ್ಯರು ಮತ್ತು ಶೂದ್ರರು ಸಹ (ನನ್ನನ್ನು ಭಜಿಸಿದರೆ) ಪರಮಗತಿಯನ್ನು ಹೊಂದುವುದರಲ್ಲಿ ಅನುಮಾನವಿಲ್ಲ" (೯.೩೨ : ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ । ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿ ಯಾಂತಿ ಪರಾಂ ಗತಿಂ ॥). ಗೀತಾ ಜ್ಞಾನಯಜ್ಞಗಳಲ್ಲಿ ಇದರ ವ್ಯಾಖ್ಯಾನ ಕೇಳಿದ ಮಹಿಳೆಯರು, ವೈಶ್ಯರು ಮತ್ತು ಶೂದ್ರರು ಯಾವುದೇ ಪ್ರತಿಭಟನೆ ಸಲ್ಲಿಸಿದ ವರದಿಗಳಿಲ್ಲ. ಗೀತೆಯ ಪ್ರಭಾವವು ಅವರನ್ನು ಶಾಂತಚಿತ್ತರನ್ನಾಗಿಸಿದೆ, ಸಹನಾಶೀಲರನ್ನಾಗಿಸಿದೆ ಏನ್ನೋಣವೆ ? ಅಥವಾ ಹೇಗೂ ಇರಲಿ, ನಮಗೂ ಪರಮಗತಿಯನ್ನು ಭಗವಾನನು ಕರುಣಿಸಿದ್ದಾನಲ್ಲ ಎಂದು ತೃಪ್ತಿ ಹೊಂದಿದ್ದಾರೆಂದು ಭಾವಿಸೋಣವೆ ? ಗೀತೆಯಲ್ಲಿ ಈ ರೀತಿಯ ಹೇಳಿಕೆ ಬಂದಿರುವುದನ್ನು ನೋಡಿಯೂ ಅದರ ಚಾರಿತ್ರಿಕ ಘಟ್ಟ, ಅಂದಿನ ಸಾಮಾಜಿಕ ಏರುಪೇರುಗಳು, ಮಹಿಳೆಯರು ಶೂದ್ರರೊಡನೆ ಸಮೀಕರಿಸಲ್ಪಟ್ಟಿರುವುದರ ಅರ್ಥ, ಇವುಗಳನ್ನು ವಿದ್ವಾಂಸರು ಗಂಭೀರವಾಗಿ ಚರ್ಚಿಸುವುದು ಅಪರೂಪ. "ಪಾಪಯೋನಯಃ" ಎಂದರೆ ಪಾಪದಲ್ಲಿ ಹುಟ್ಟಿರುವವರು ಎಂದರ್ಥ. ಅಂದರೆ, ಅನೈತಿಕ ಲೈಂಗಿಕ ಸಂಬಂಧಗಳಿಂದ ಜನಿಸಿದವರು. ಅವರು ಹೇಗೇ ಜನಿಸಿರಲಿ, ಅವರದೇನಾದರೂ ತಪ್ಪಿದೆಯೆ ? ತಪ್ಪೆಸಗಿದವರು ಲೈಂಗಿಕ ಸುಖ ಅನುಭವಿಸಿ ಎಲ್ಲೋ ಮರೆಯಾದರು; ಜನಿಸಿದ ಮಗು "ಪಾಪಯೋನಿಯದು" ಎಂಬ ಹಣೆಪಟ್ಟಿ ಪಡೆಯಿತು. ಹಾಗೆ ಜನಿಸಿಲ್ಲದವರು ಪುಣ್ಯಯೋನಿಯವರಾದದ್ದು ಹೇಗೆ ? ಮಹಿಳೆಯರನ್ನೆಲ್ಲಾ ಸಾರಾಸಗಟಾಗಿ ಸಮಾಜದಲ್ಲಿ ತೃತೀಯ ಮತ್ತು ಚತುರ್ಥ ಸ್ಥಾನಕ್ಕೆ ತಳ್ಳಿದ್ದು ಎಂತಹ ವೈಭವಯುತ ಸಂಸ್ಕೃತಿ ? ಮಧುಸೂದನ ಸರಸ್ವತಿ ಎಂಬ ಭಾಷ್ಯಕಾರನು ಸ್ತ್ರೀಯರಿಗೆ ವೇದಾಧ್ಯಯನದ ಹಕ್ಕಿಲ್ಲದಿರುವುದರಿಂದ ಅವರು ಕೆಳಜಾತಿಯವರ ಗುಂಪಿಗೆ ಸೇರಿಸಲ್ಪಟ್ಟಿದ್ದಾರೆಂಬ ವಿವರಣೆ ನೀಡಿದ್ದಾನೆ. ಗೀತೆಯನ್ನು ಚಾರಿತ್ರಿಕ ಮತ್ತು ಸಾಮಾಜಿಕ ದೃಷ್ಟಿಯಿಂದ ನೋಡದಿದ್ದರೆ ಸಮಂಜಸ ಉತ್ತರ ದೊರಕದು. ಗೀತೆಯ ಕರ್ತೃವನ್ನು ನಿಂದಿಸುವುದರಲ್ಲಿ ಅರ್ಥವಿಲ್ಲ; ಏಕೆಂದರೆ, ತನ್ನ ಸಮಕಾಲೀನ ಸಮಾಜದ ವಾಸ್ತವ ನಡತೆಯನ್ನು ದಾಖಲಿಸುವುದಷ್ಟೇ ಅವನು ಮಾಡಿರುವ ಕೆಲಸ. ಅಂದಿನ ಸಾಮಾಜಿಕ ಬಂಧನಗಳಿಗೆ ಮತ್ತು ಪೂರ್ವಗ್ರಹಗಳಿಗೆ ಅವನು ಕಾರಣನಲ್ಲ; ಬದಲಾಗಿ, ಸಮಾಜದ ವಿಕಾಸದ ಹಾದಿಯಲ್ಲಿ ಅಂತಹ ನಿಕೃಷ್ಟ ಸ್ಥಾನಮಾನಗಳನ್ನು ಕೆಲವಿಭಾಗಗಳಿಗೆ ದೊರೆತಿದ್ದುದನ್ನು ಅವನು ಪ್ರಾಮಾಣಿಕವಾಗಿ ದಾಖಲಿಸಿದ್ದಾನೆ. ಪ್ರಗಲ್ಭ ಜ್ಞಾನದ ಖನಿಯೆಂದು ಹೇಳಲಾಗುವ ಕರ್ತೃವು ಶ್ರೇಣೀಕರಣವನ್ನು ತತ್ವಶಃ ಖಂಡಿಸಬೇಕಾಗಿತ್ತು. ಹಾಗೆ ಮಾಡಿದ್ದರೆ ಅವನು ಯಥಾಸ್ಥಿತಿವಾದಕ್ಕೆ ವಿರುದ್ಧ ದಿಕ್ಕಿನಲ್ಲಿ ಹೋಗಿರುತ್ತಿದ್ದ. ಆದರೆ ಅವನ ಮೂಲೋದ್ದೇಶವು ಯಥಾಸ್ಥಿತಿಯನ್ನು ಕಾಪಾಡುವುದು, ವರ್ಣಸಂಕರವನ್ನು ಆಗಗೊಡದಿರುವುದು, ಸ್ವ-ಧರ್ಮ ಅಥವಾ ವರ್ಣಧರ್ಮವನ್ನು ಉಲ್ಲಂಘಿಸದಂತೆ ನೋಡಿಕೊಳ್ಳುವುದು. ಬ್ರಾಹ್ಮಣರು ಮತ್ತು ರಾಜರ್ಷಿಗಳು ಹುಟ್ಟಿನಿಂದಲೇ ಶ್ರೇಷ್ಠರು, ಅವರು ಪುಣ್ಯಯೋನಿಗಳಲ್ಲಿ ಜನಿಸಿದವರು ! (೯.೩೩ : ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ). ಹೀಗೆ ಅರ್ಥರಹಿತ ಸಾಮಾಜಿಕ ಶ್ರೇಣೀಕರಣಕ್ಕೆ ಮುಕ್ತವಾಗಿ ಬೆಂಬಲ ಘೋಷಿಸಿರುವ ಗೀತೆಯ ಕರ್ತೃವು ಇನ್ನೆಂತಹ ಪ್ರಕಾಂಡ ತತ್ತ್ವಶಾಸ್ತ್ರಜ್ಞನಾದಾನು ! ಧೈರ್ಯವಾಗಿ ತಾನು ಪಾಷಂಡಿಯಾಗಲು ಅವನ ಬೌದ್ಧಿಕ-ಸಾಂಸ್ಕೃತಿಕ ಹಿನ್ನೆಲೆಯು ಅವನಿಗೆ ಅವಕಾಶ ನೀಡಿರಲಿಲ್ಲ ಮತ್ತು ಸ್ವಯಂ ಆ ಹಿನ್ನೆಲೆಯನ್ನು ಮೀರಿ ಸಮಾಜಮುಖಿಯಾಗಿ ನಿಲ್ಲಲು ಅವನ ಯಥಾಸ್ಥಿತಿವಾದವು ಅವನಿಗೆ ತಡೆಯನ್ನೊಡ್ಡಿತ್ತು.

ಗೀತಾ ಜ್ಞಾನಯಜ್ಞಗಳಲ್ಲಿ ಗೀತೆಯ ಈ ಭಾಗಕ್ಕೆ ಎಂತೆಂತಹ ಅಮೋಘ ವ್ಯಾಖ್ಯಾನಗಳನ್ನು ನೀಡಲಾಗುತ್ತಿದೆ ಎಂಬುದನ್ನು ತಿಳಿಯಲು ಕುತೂಹಲ ಉಳ್ಳವರು ಯಜ್ಞಸ್ಥಳಗಳತ್ತ ಪಾದ ಬೆಳೆಸಬಹುದು. ನಿರಾಶರಾಗದೆ ಹಿಂದಿರುಗಿದರೆ ಅವರ ಪುಣ್ಯ !!

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಬೆಂಗಳೂರು-೮೫

# ಸರಕು ಮತ್ತು ಸೇವಾ ತೆರಿಗೆ

## – ಒಂದು ಕಿರು ಪರಿಚಯ



ಜಿಎಸ್‌ಟಿ ಅನುಷ್ಠಾನದೊಂದಿಗೆ ಆಗಬಹುದಾದ ಲಾಭ ನಷ್ಟಗಳ ಬಗ್ಗೆ ಈಗಾಗಲೇ ಹಲವಾರು ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ಮತ್ತು ಸಾರ್ವಜನಿಕ ವೇದಿಕೆಗಳಲ್ಲಿ ಚರ್ಚೆ ನಡೆಯುತ್ತಲೇ ಇದೆ. ಹಣದುಬ್ಬರ, ಆರ್ಥಿಕ ಪ್ರಗತಿ, ಸರಕು ಮತ್ತು ಸೇವೆಗಳ ಬೆಲೆ ಹೆಚ್ಚಳ ಮತ್ತು ರಾಜ್ಯಗಳಿಗೆ ಆಗಬಹುದಾದ ಅನಾನುಕೂಲಗಳ ಬಗ್ಗೆ ಈಗಾಗಲೇ ಸ್ಪಷ್ಟೀಕರಣಗಳನ್ನು ಕೊಡುತ್ತಲೇ ಇದ್ದಾರೆ. ವಾಸ್ತವಾಂಶ ಏನೆಂದರೆ ಈ ಕಾನೂನು ಸರಿಯಾದ ಕ್ರಮದಲ್ಲಿ ರಾಜ್ಯ ಮತ್ತು ಕೇಂದ್ರ ಸರಕಾರಗಳ ಸಮನ್ವಯ-ಸೌಹಾರ್ದತೆ, ಕರದಾತರಲ್ಲಿ ಕಾನೂನು ಪರಿಪಾಲಿಸಬೇಕಾದ ಶಿಸ್ತು ಮತ್ತು ಅದನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ತೆರಿಗೆ ಆಡಳಿತದಲ್ಲಿ ಪಾರದರ್ಶಕತೆ ಮತ್ತು ತೆರಿಗೆದಾತರಿಗೆ ಸೂಕ್ತ ಮಾರ್ಗದರ್ಶನಗಳಿದ್ದಲ್ಲಿ ಜಿಎಸ್‌ಟಿ ಕಾಯಿದೆ ಒಕ್ಕೂಟ ವ್ಯವಸ್ಥೆಯಲ್ಲಿ ಒಂದು ನೂತನ ಫಲಪ್ರದ ಪ್ರಯೋಗ ಎನ್ನಿಸಿ ಕೊಳ್ಳುವುದರಲ್ಲಿ ಯಾವುದೇ ಅನುಮಾನಕ್ಕೆ ಎಡೆ ಬೇಡ.

**ವಿನಾಯಕ ಎಲ್. ಕುಲಕರ್ಣಿ**




ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪರೋಕ್ಷ ತೆರಿಗೆಗಳಲ್ಲಿ ಪ್ರಮುಖ ಬದಲಾವಣೆಯನ್ನು ಗುರಿಯನ್ನಾಗಿಸಿ ಸರಕು ಮತ್ತು ಸೇವಾ ತೆರಿಗೆಯನ್ನು ಜುಲೈ ಒಂದರಿಂದ ಅನುಷ್ಠಾನಕ್ಕೆ ತರಲು ಸಿದ್ಧತೆ ನಡೆದಿದೆ. ಆ ಬಗ್ಗೆ ಇಡೀ ದೇಶದಲ್ಲಿ ಸಾಕಷ್ಟು ಕುತೂಹಲ, ನಿರೀಕ್ಷೆಗಳನ್ನು ಇತ್ತೀಚಿನ ಸಾಮಾಜಿಕ ಮಾಧ್ಯಮ, ಮುದ್ರಣ ಮತ್ತು ವಿದ್ಯುನ್ಮಾನಗಳಲ್ಲಿ ಕಾಣಬಹುದು. ಒಂದು ರಾಷ್ಟ್ರ, ಒಂದು ತೆರಿಗೆ, ಒಂದು ಮಾರುಕಟ್ಟೆ ಎಂಬ ಘೋಷಣೆಗಳ ಮೂಲಕ ಸರಕು ಮತ್ತು ಸೇವಾ ತೆರಿಗೆ (ಜಿಎಸ್‌ಟಿ) ಪರೋಕ್ಷ ತೆರಿಗೆ ಸಂಗ್ರಹದಲ್ಲಿ ಸಾಕಷ್ಟು ಮಾರ್ಪಾಡುಗಳೊಂದಿಗೆ ಕಾನೂನು ಮತ್ತು ವಿಧಿ ವಿಧಾನಗಳ ಮೂಲಕ ಜಾರಿಗೊಳ್ಳುವ ಸಂದರ್ಭದಲ್ಲಿ ಈ ರೀತಿಯ ಕಾನೂನಿನ ಅವಶ್ಯಕತೆ, ಸಾಧಕ-ಬಾಧಕಗಳನ್ನು ಕುರಿತಾಗಿ ಇದು ಒಂದು ಸಣ್ಣ ಪ್ರಯತ್ನ.

ಪ್ರಸ್ತುತ ಜಾರಿಯಲ್ಲಿರುವ ಸರಕುಗಳ ಉತ್ಪಾದನೆ ಮತ್ತು ಮಾರಾಟ ಅಥವಾ ಸೇವೆ ಪೂರೈಕೆ ಮೇಲೆ ವಿಧಿಸುವ ತೆರಿಗೆ ಪದ್ಧತಿ ಬದಲಾಗಿ ಕೇಂದ್ರ ಮತ್ತು ರಾಜ್ಯಗಳೆರಡೂ ಏಕಕಾಲದಲ್ಲಿ ಒಂದೇ ತೆರಿಗೆ ನೆಲೆಗಟ್ಟಿನ ಮೇಲೆ ವಿಧಿಸುವ ದ್ವಿಮುಖ ತೆರಿಗೆ ಜಿಎಸ್‌ಟಿ. ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿರುವ ವಿವಿಧ ಬಗೆಯ ತೆರಿಗೆಗಳನ್ನು ವಿಲೀನಗೊಳಿಸಿ ಏಕರೂಪ ತೆರಿಗೆ ಪದ್ಧತಿ ಜಾರಿಗೆ ತರುವುದರಿಂದ ಮತ್ತು ಈ ಪದ್ಧತಿಯಲ್ಲಿ ಪ್ರತಿಯೊಂದು ಹಂತದ ಪೂರೈಕೆಗೆ ಪಾವತಿಸಿದ ತೆರಿಗೆಯನ್ನು ಕಡಿತ ಮಾಡುವುದರಿಂದ 'ತೆರಿಗೆಯ ಮೇಲೆ' ತೆರಿಗೆಯ ದುಷ್ಪರಿಣಾಮಗಳನ್ನು ನಿವಾರಿಸಿ, ರಾಷ್ಟ್ರಾದ್ಯಂತ ಒಂದೇ ಬಗೆಯ ಮಾರುಕಟ್ಟೆಗೆ ದಾರಿ ಮಾಡಿಕೊಡುತ್ತದೆ. ಇದರಿಂದ ಬಳಕೆದಾರರಿಗೆ ಗುಣಮಟ್ಟದ ಸರಕು/ ಸೇವೆಗಳು ಸ್ಪರ್ಧಾತ್ಮಕ ಬೆಲೆಗಳಿಗೆ ದೊರೆಯುವಂತಾಗುತ್ತದೆ. ಹಲವು ಅಧ್ಯಯನಗಳ ಪ್ರಕಾರ ಇದರಿಂದಾಗಿ ದೇಶದ ಆರ್ಥಿಕ ಚಟುವಟಿಕೆಗಳಿಗೆ ಉತ್ತೇಜನ ದೊರಕುವುದಲ್ಲದೆ, ತೆರಿಗೆ ವ್ಯಾಪ್ತಿ ಅಥವಾ ನೆಲೆಗಟ್ಟು ವಿಸ್ತಾರಗೊಂಡು, ತೆರಿಗೆ ಅನುಪಾಲನೆಯಲ್ಲಿ ಸಾಕಷ್ಟು ಸುಧಾರಣೆಗಳೊಂದಿಗೆ, ಕೇಂದ್ರ ಮತ್ತು ರಾಜ್ಯಗಳ ತೆರಿಗೆ ಸಂಗ್ರಹ ಗಣನೀಯ ಪ್ರಮಾಣದಲ್ಲಿ ಹೆಚ್ಚಲು ಅವಕಾಶ ವಾಗಬಹುದು ಮತ್ತು ಜಿಎಸ್‌ಟಿ ಕಾನೂನಿನಲ್ಲಿ ಸಾಕಷ್ಟು ಪಾರದರ್ಶಕತೆ ಇರುವುದರಿಂದ ತೆರಿಗೆ ಆಡಳಿತ ಸರಳ ಮತ್ತು ಸುಲಭವಾಗಬಹುದು.

ಸರಕು ಮತ್ತು ಸೇವಾ ತೆರಿಗೆಯ ಪ್ರಸ್ತಾಪವನ್ನು ಆಗಿನ ಕೇಂದ್ರ ಸರಕಾರದ ವಿತ್ತ ಮಂತ್ರಿಗಳು ೨೦೦೬-೦೭ರ ಮುಂಗಡ ಪತ್ರದಲ್ಲಿ ಮೊಟ್ಟ ಮೊದಲು ಮಾಡಿದ್ದರು. ಅದಾದ ನಂತರ ಕೇಂದ್ರ ಮತ್ತು ರಾಜ್ಯಗಳ ನಡುವೆ ಸಾಕಷ್ಟು ಚರ್ಚೆ, ವಿಷಯ ವಿನಿಮಯಗಳ ಮೂಲಕ ೧.೪.೨೦೧೦ರಲ್ಲಿ ಜಾರಿಗೆ ತರಲು ಉದ್ದೇಶಿಸಲಾಗಿತ್ತು. ಭಾರತವು ಒಂದು ಒಕ್ಕೂಟ ವ್ಯವಸ್ಥೆಯಾದುದರಿಂದ ಕೇಂದ್ರ ಮತ್ತು ರಾಜ್ಯಗಳಲ್ಲಿ ವಿವಿಧ ರಾಜಕೀಯ ಪಕ್ಷಗಳು ಅಧಿಕಾರದಲ್ಲಿದ್ದುದರಿಂದ ಹಾಗೂ ಪರೋಕ್ಷ ತೆರಿಗೆಗಳನ್ನು ರಾಜ್ಯ ಮತ್ತು ಕೇಂದ್ರಗಳು ಏಕಕಾಲದಲ್ಲಿ ವಿಧಿಸುತ್ತಿದ್ದುದರಿಂದ, ಸರಕು ಮತ್ತು ಸೇವಾ ತೆರಿಗೆಗಳ ರೂಪರೇಷೆಗಳ ಬಗ್ಗೆ ಸಾಕಷ್ಟು ಸುದೀರ್ಘ ಸಮಾ ಲೋಚನೆಗಳ ನಂತರ ಕೇಂದ್ರ ಸರಕಾರದಿಂದ ನಿಯುಕ್ತಿಗೊಂಡ ಅಧಿಕಾರಯುಕ್ತ ಸಮಿತಿಯು ತನ್ನ ಮೊದಲ ಚರ್ಚಾಪತ್ರವನ್ನು ೨೦೦೯ರಲ್ಲಿ ಬಿಡುಗಡೆಗೊಳಿಸಿತು. ಇದನ್ನೇ ಆಧಾರವಾಗಿಸಿಕೊಂಡು ಸಾಕಷ್ಟು ಪರಿಷ್ಕೃತಗೊಂಡ ಕರಡು ಪ್ರತಿಯನ್ನು ಕಾರ್ಯರೂಪದಲ್ಲಿ ತರಲು ಕಾನೂನಿನ ಪ್ರಕ್ರಿಯೆ ಪ್ರಾರಂಭವಾಯಿತು.

ಜಿಎಸ್‌ಟಿಯನ್ನು ಕೇಂದ್ರ ಮತ್ತು ರಾಜ್ಯಗಳು ಏಕಕಾಲದಲ್ಲಿ ವಿಧಿಸಿ ವಸೂಲಿ ಮಾಡುವ ಅಧಿಕಾರವನ್ನು ನೀಡುವಂತೆ ಸಂವಿಧಾನಕ್ಕೆ ಸೂಕ್ತವಾದ ತಿದ್ದುಪಡಿ ಮಾಡಲಾಗಿದೆ. ೧೦೧ನೇ ಸಂವಿಧಾನ ತಿದ್ದುಪಡಿ ಕಾಯಿದೆ–೨೦೧೬ರ ಪ್ರಮುಖ ಅಂಶಗಳು ಕೆಳಕಂಡಂತಿವೆ.

(೧) ಮದ್ಯಪಾನೀಯಗಳನ್ನು ಹೊರತುಪಡಿಸಿದಂತೆ ಜಿಎಸ್‌ಟಿಯನ್ನು ಎಲ್ಲಾ ಸರಕು ಮತ್ತು ಸೇವೆಗಳ ಮೇಲೆ ವಿಧಿಸತಕ್ಕದ್ದು.

(೨) ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೆರಡೂ ಪ್ರತ್ಯೇಕ ವಾಗಿ ಉಭಯ ಜಿಎಸ್‌ಟಿಯನ್ನು ವಿಧಿಸತಕ್ಕದ್ದು.

(೩) ಕೇಂದ್ರ ಸರಕಾರ ಸಿಜಿಎಸ್‌ಟಿ ವಿಧಿಸಲು ಅಗತ್ಯವಾದ ಕಾನೂನನ್ನು ರೂಪಿಸುವ ಅಧಿಕಾರ ಸಂಸತ್ತಿಗಿದ್ದರೆ, ರಾಜ್ಯಗಳು ವಿಧಿಸುವ ಎಸ್‌ಜಿಎಸ್‌ಟಿ ಕಾನೂನನ್ನು ರೂಪಿಸುವ ಅಧಿಕಾರ ಆಯಾ ರಾಜ್ಯದ ಶಾಸನ ಸಭೆಗಳಿಗಿರುತ್ತದೆ.

(೪) ಅಂತರರಾಜ್ಯ ಸರಕು ಮತ್ತು ಸೇವೆಗಳ ಪೂರೈಕೆಗೆ ಜಿಎಸ್‌ಟಿ (ಐಜಿಎಸ್‌ಟಿ) ವಿಧಿಸುವಂಥ ಕಾನೂನನ್ನು ರೂಪಿಸುವ ಅಧಿಕಾರ ಸಂಸತ್ತಿಗೆ ಮಾತ್ರ ಇರುತ್ತದೆ. ಈ ತೆರಿಗೆಯನ್ನು ಜಿಎಸ್‌ಟಿ ಪರಿಷತ್ ಶಿಫಾರಸ್ಸಿನಂತೆ ಕೇಂದ್ರ ಹಾಗೂ ರಾಜ್ಯಗಳಿಗೆ ಹಂಚಿಕೆ ಮಾಡಲಾಗುತ್ತದೆ.

(೫) ಜಿಎಸ್‌ಟಿ ಜಾರಿಯಿಂದಾಗಿ ರಾಜ್ಯಗಳಿಗೆ ಉಂಟಾಗ ಬಹುದಾದ ಆದಾಯ ಇಲ್ಲವೇ ನಷ್ಟವನ್ನು ಸಂಸತ್ತು ಕಾನೂನಿನ ಮೂಲಕ ಜಿಎಸ್‌ಟಿ ಪರಿಷತ್ ಶಿಫಾರಸ್ಸಿನ ಅನ್ವಯ ಪರಿಹಾರವನ್ನು ನೀಡಬಹುದು. ಈ ರೀತಿ ನಷ್ಟ ಪರಿಹಾರವನ್ನು ೫ ವರ್ಷಗಳ ಕಾಲ ನೀಡಬಹುದಾಗಿದೆ.

**ಸರಕು ಮತ್ತು ಸೇವಾ ತೆರಿಗೆಯ ಪ್ರಮುಖ ಅಂಶಗಳು**

(೧) ಜಿಎಸ್‌ಟಿಯು ಸರಕು ಮತ್ತು ಸೇವೆಗಳ ಪೂರೈಕೆಯ ಮೇಲೆ ವಿಧಿಸಲ್ಪಡುತ್ತದೆ. ಇದು ಪೂರೈಸಲಾದ ಸರಕು ಮತ್ತು ಸೇವೆಗಳ ಬಳಕೆಯ ಸ್ಥಳ ಆಧಾರಿತ ತೆರಿಗೆ.

(೨) ಜಿಎಸ್‌ಟಿ ಕೇಂದ್ರ ಮತ್ತು ರಾಜ್ಯಗಳು ಏಕಕಾಲಕ್ಕೆ ಒಂದೇ ತೆರಿಗೆ ನೆಲೆಗಟ್ಟಿನ ಮೇಲೆ ವಿಧಿಸುವ ದ್ವಿಮುಖ ತೆರಿಗೆ. ರಾಜ್ಯದೊಳಗೆ ಪೂರೈಕೆಯಾಗುವ ಸರಕು ಮತ್ತು ಸೇವೆಗಳಿಗೆ ಕೇಂದ್ರ ಸರಕಾರ ವಿಧಿಸುವ ತೆರಿಗೆಯನ್ನು ಸೆಂಟ್ರಲ್ ಜಿಎಸ್‌ಟಿ ಎಂದೂ, ರಾಜ್ಯಗಳು ವಿಧಿಸುವ ತೆರಿಗೆಯನ್ನು ಸ್ಟೇಟ್ ಜಿಎಸ್‌ಟಿ ಎಂದೂ ಕರೆಯಲಾಗುತ್ತದೆ.

(೩) ಈ ತೆರಿಗೆಯು ಮಾನವ ಬಳಕೆಯ ಮಾದಕ ಪಾನೀಯಗಳು, ಪೆಟ್ರೋಲಿಯಂ ಉತ್ಪನ್ನಗಳನ್ನು ಹೊರತುಪಡಿಸಿದಂತೆ ಉಳಿದೆಲ್ಲಾ ಸರಕುಗಳಿಗೆ ಮತ್ತು ಕೆಲವೊಂದು ಹೆಸರಿಸಲಾದ ನಿರ್ದಿಷ್ಟ ಸೇವೆಗಳನ್ನು ಹೊರತುಪಡಿಸಿ ಉಳಿದ ಎಲ್ಲ ಸೇವೆಗಳಿಗೆ ಅನ್ವಯವಾಗುತ್ತವೆ.

(೪) ತಂಬಾಕು ಮತ್ತು ತಂಬಾಕು ಉತ್ಪನ್ನಗಳಿಗೆ ಜಿಎಸ್‌ಟಿ ವಿಧಿಸಲಾಗುತ್ತದೆ.

(೫) ಜಿಎಸ್‌ಟಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಸರಕು ಮತ್ತು ಸೇವೆಗಳ ಮೇಲೆ ವಿಧಿಸ ಬಹುದಾದ ೧೭ ಬಗೆಯ ವಿವಿಧ ತೆರಿಗೆಗಳನ್ನು ವಿಲೀನಗೊಳಿಸಲಾದ ತೆರಿಗೆ.

**ರಾಜ್ಯ ಮತ್ತು ಕೇಂದ್ರ ಸರಕಾರಗಳು ಸರಕು ಮತ್ತು ಸೇವಾ ತೆರಿಗೆಯನ್ನು ವಿಧಿಸುವ ಪ್ರಕ್ರಿಯೆಯಲ್ಲಿ ಪ್ರಸ್ತುತ ವಿಧಿಸುತ್ತಿರುವ ಕೆಳಕಂಡ ತೆರಿಗೆಗಳು ಸರಕು ಮತ್ತು ಸೇವಾ ತೆರಿಗೆಯಲ್ಲಿ ವಿಲೀನಗೊಳ್ಳಲಿವೆ.**

| ಕೇಂದ್ರ ಸರಕಾರದ ತೆರಿಗೆಗಳು | ರಾಜ್ಯ ಸರಕಾರದ ತೆರಿಗೆಗಳು |
|---|---|
| ೧. ಕೇಂದ್ರ ಅಬಕಾರಿ ಸುಂಕ | ೧. ರಾಜ್ಯಗಳ ಮೌಲ್ಯವರ್ಧಿತ ತೆರಿಗೆ |
| ೨. ಅಬಕಾರಿ ಸುಂಕಗಳು (ಔಷಧಿ ಮತ್ತು ಪ್ರಸಾದನ ತಯಾರಿಕೆಗಳು) | ೨. ಕೇಂದ್ರ ಮಾರಾಟ ತೆರಿಗೆ |
| ೩. ಹೆಚ್ಚುವರಿ ಅಬಕಾರಿ ಸುಂಕಗಳು (ವಿಶೇಷ ಪ್ರಾಮುಖ್ಯತೆಯ ಸರಕುಗಳು) | ೩. ಐಷಾರಾಮಿ ತೆರಿಗೆ |
| ೪. ಹೆಚ್ಚುವರಿ ಅಬಕಾರಿ ಸುಂಕಗಳು (ಜವಳಿ ಮತ್ತು ಜವಳಿ ಉತ್ಪನ್ನಗಳು) | ೪. ಪ್ರವೇಶ ತೆರಿಗೆ (ಎಲ್ಲಾ ವಿಧದ) |
| ೫. ಹೆಚ್ಚುವರಿ ಸೀಮಾ ಸುಂಕ (ಸಿವಿಜಿ) | ೫. ಮನರಂಜನಾ ತೆರಿಗೆ (ಸ್ಥಳೀಯ ಸಂಸ್ಥೆಗಳು ವಿಧಿಸುವುದನ್ನು ಹೊರತುಪಡಿಸಿ) |
| ೬. ವಿಶೇಷ ಹೆಚ್ಚುವರಿ ಸೀಮಾಸುಂಕ | ೬. ಜಾಹೀರಾತುಗಳ ಮೇಲಿನ ತೆರಿಗೆ |
| ೭. ಸೇವಾ ತೆರಿಗೆ | ೭. ಖರೀದಿ ತೆರಿಗೆ |
| ೮. ಸರಕು ಮತ್ತು ಸೇವಾ ತೆರಿಗೆಗಳ ಮೇಲೆ ಕೇಂದ್ರ ವಿಧಿಸುವ ಸೆಸ್ ಮತ್ತು ಸರ್ಚಾರ್ಜುಗಳು | ೮. ಲಾಟರಿ, ಪಣ ಮತ್ತು ಜೂಜುಗಳ ಮೇಲಿನ ತೆರಿಗೆಗಳು<br>೯. ಸರಕು ಮತ್ತು ಸೇವೆಗೆ ಸಂಬಂಧಿಸಿದಂತೆ ರಾಜ್ಯಗಳು ವಿಧಿಸುತ್ತಿರುವ ಸೆಸ್ ಮತ್ತು ಸರ್ಚಾರ್ಜುಗಳು |

(೬) ಸಿಜಿಎಸ್‌ಟಿ ಮತ್ತು ಎಸ್‌ಜಿಎಸ್‌ಟಿ ದರಗಳನ್ನು ಜಿಎಸ್‌ಟಿ ಪರಿಷತ್ತಿನ ಶಿಫಾರಸ್ಸಿನ ಮೇರೆಗೆ ವಿಧಿಸಲಾಗುತ್ತದೆ.

(೭) ಜಿಎಸ್‌ಟಿ ಪರಿಷತ್ ತೀರ್ಮಾನಿಸುವಂತೆ ವಿನಾಯಿತಿಗೊಳಪಡುವ ಸರಕು ಮತ್ತು ಸೇವೆಗಳ ಪಟ್ಟಿ ಕೇಂದ್ರ ಮತ್ತು ರಾಜ್ಯಗಳಿಗೆ ಒಂದೇ ಆಗಿರುತ್ತದೆ.

(೮) ಸರಕು ಮತ್ತು ಸೇವೆಗಳ ಅಂತರರಾಜ್ಯ ಪೂರೈಕೆಯ ಮೇಲೆ ಕೇಂದ್ರ ಸರಕಾರವು ಸಂಯುಕ್ತ ಜಿಎಸ್‌ಟಿ ವಿಧಿಸಿ ವಸೂಲು ಮಾಡುತ್ತದೆ. ಐಜಿಎಸ್‌ಟಿಯಲ್ಲಿನ ಎಸ್‌ಜಿಎಸ್‌ಟಿ ಭಾಗವನ್ನು ಸರಕು ಮತ್ತು ಸೇವೆಗಳು ಯಾವ ರಾಜ್ಯದಲ್ಲಿ ಅಂತಿಮವಾಗಿ ಬಳಸಲ್ಪಡುತ್ತವೆಯೋ ಆ ರಾಜ್ಯಕ್ಕೆ ವರ್ಗಾಯಿಸುವ ಕಾರ್ಯವನ್ನು ಕೇಂದ್ರವು ಮಾಡಬೇಕಾಗುತ್ತದೆ.

(೯) ರಫ್ತುಗಳನ್ನು ಶೂನ್ಯ ಪೂರೈಕೆಗಳೆಂದು ಪರಿಗಣಿಸಲಾಗುತ್ತದೆ. ಅಂದರೆ ರಫ್ತು ಪೂರೈಕೆಗಳ ಮೇಲೆ ಯಾವುದೇ ಬಗೆಯ ತೆರಿಗೆ ಬಾಧ್ಯತೆ ಇರುವುದಿಲ್ಲ. ಆದರೆ ರಫ್ತಿಗೆ ಸಂಬಂಧಪಟ್ಟ ಹೂಡುವಳಿ ಪೂರೈಕೆಗಳ ಮೇಲೆ ಪಾವತಿಸಿದ ತೆರಿಗೆಯ ಜಮೆ ಪಡೆದುಕೊಳ್ಳಬಹುದು ಅಥವಾ ಅದರ ಮರುಪಾವತಿ ಪಡೆಯಬಹುದು.

(೧೦) ಸರಕು ಮತ್ತು ಸೇವೆಗಳ ಆಮದುಗಳ ಮೇಲೆ ನಿಗದಿತ ಸೀಮಾ ಸುಂಕದ ಜೊತೆಗೆ ಅವುಗಳನ್ನು ಅಂತರರಾಜ್ಯ ಪೂರೈಕೆಗಳೆಂದು ಪರಿಗಣಿಸಿ ಐಜಿಎಸ್‌ಟಿ ವಿಧಿಸಲಾಗುತ್ತದೆ. ಹೀಗೆ ಪಾವತಿಸಿದ ತೆರಿಗೆಯನ್ನು ಮುಂದಿನ ಪೂರೈಕೆಗಳಿಗೆ ಹೂಡುವಳಿ ತೆರಿಗೆಯೆಂದು ಜಮೆ ಪಡೆಯಬಹುದು.

(೧೧) ಸಿಜಿಎಸ್‌ಟಿ ಮತ್ತು ಎಸ್‌ಜಿಎಸ್‌ಟಿ ತೆರಿಗೆಗಳನ್ನು ವಿಧಿಸಿ ಸಂಗ್ರಹಿಸುವ ಕಾಯಿದೆ ಮತ್ತು ನಿಯಮಗಳನ್ನು ಸಾಧ್ಯವಾದಷ್ಟು ಏಕರೂಪವಾಗಿರುವಂತೆ ರೂಪಿಸಲಾಗುವುದು.

(೧೨) ವ್ಯಾಪಾರದ ಕ್ರಮದಲ್ಲಿ ಅಥವಾ ಮುಂದುವರಿಕೆಗೆ ಬಳಸಲಾದ ಅಥವಾ ಬಳಸಲು ಉದ್ದೇಶಿಸಿದ ಸರಕು ಮತ್ತು ಸೇವೆಗಳ ಪೂರೈಕೆಯ ಮೇಲೆ ಪಾವತಿಸಿದ ಜಮೆ ನೀಡುವ ಮೂಲಕ, ಹೂಡುವಳಿ ತೆರಿಗೆ ಜಮೆ (ಐಟಿಸಿ) ಪರಿಧಿಯನ್ನು ವಿಶಾಲಗೊಳಿಸುವ ಮೂಲಕ, ತೆರಿಗೆ ಮೇಲೆ ತೆರಿಗೆ ಪಾವತಿಸುವುದನ್ನು ತಪ್ಪಿಸುವ ಮೂಲಕ, ಉತ್ಪಾದನೆ / ಸೇವಾ ಪೂರೈಕೆಗಳು ಅಂತಿಮ ಬಳಕೆಯ ವರೆಗೆ ಮುಂದುವರಿಯುವಂತೆ ಅದಕ್ಕೆ ಸಂಬಂಧಿಸಿದ ಎಲ್ಲಾ ನಿಯಮಗಳನ್ನು ರೂಪಿಸಲಾಗಿದೆ.

(೧೩) ವಿವಿಧ ನಿಗದಿತ ದಿನಾಂಕದೊಳಗೆ ವಿವಿಧ ವರ್ಗದ ವ್ಯಕ್ತಿಗಳಿಂದ ಆನ್‌ಲೈನ್ ರಿಟರ್ನ್ಸ್ ಸಲ್ಲಿಸಬೇಕಾದ ಅವಶ್ಯಕತೆ ಇರುತ್ತದೆ. ಇದು ನಿಗದಿತ ಅವಧಿಯಲ್ಲಿ ಒಳಪೂರೈಕೆ/ಹೂಡುವಳಿಗಳ ವಿವರ, ಹೊರಪೂರೈಕೆ (ಹೊರವಳಿ)ಗಳ ವಿವರ ಮತ್ತು ಪಾವತಿಸಬೇಕಾದ ತೆರಿಗೆ ನಿರ್ಧಾರಗಳನ್ನು ಒಳಗೊಂಡಿದೆ.

(೧೪) ತೆರಿಗೆ ಪಾವತಿಸಲು ಇಂಟರ್‌ನೆಟ್ ಬ್ಯಾಂಕಿಂಗ್/ಕ್ರೆಡಿಟ್ ಕಾರ್ಡ್/ನೆಫ್ಟ್ /ಆರ್‌ಟಿಜಿಎಸ್ ಸೇರಿದಂತೆ ತೆರಿಗೆದಾರನಿಗೆ ವಿವಿಧ ಸವಲತ್ತುಗಳ ಲಭ್ಯತೆ ಇವೆ.

(೧೫) ಸರಕಾರಿ ಇಲಾಖೆಗಳು, ಸ್ಥಳೀಯ ಸಂಸ್ಥೆಗಳು ಮತ್ತು ಸರಕಾರಿ ಏಜೆನ್ಸಿಗಳು ಸೇರಿದಂತೆ ಪೂರೈಕೆಗಳ ಕೆಲವು ಸ್ವೀಕೃತದಾರರ ಮೇಲೆ ಒಪ್ಪಂದ ಒಂದರ ಅಡಿ ಪೂರೈಕೆಯ ಮೌಲ್ಯವು ರೂ. ೨.೫ ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ಪೂರೈಕೆದಾರನಿಗೆ ಪಾವತಿಸಿದ ಮೊತ್ತದ ಮೇಲೆ ಶೇ. ೧ರಷ್ಟು ತೆರಿಗೆ ಕಡಿತಗೊಳಿಸುವ ಬಾಧ್ಯತೆ ಇರುತ್ತದೆ.

(೧೬) ಇ-ಕಾಮರ್ಸ್ ನಿರ್ವಾಹಕರ ಮೇಲೆ ತಮ್ಮ ಪೋರ್ಟಲ್‌ಗಳ ಮೂಲಕ ಸರಕು ಅಥವಾ ಸೇವೆಗಳನ್ನು ಪೂರೈಸುವ ಪೂರೈಕೆದಾರರಿಂದ ತೆರಿಗೆ ಗೊಳಪಡುವ ಪೂರೈಕೆಗಳ ನಿವ್ವಳ ಮೌಲ್ಯದ ಮೇಲೆ ಶೇ. ೨ರಷ್ಟು ಹೆಚ್ಚಿಲ್ಲದ ದರದಲ್ಲಿ ಅವರಿಗೆ ಪಾವತಿಸಬೇಕಾದ ಮೊತ್ತದಿಂದ ಮೂಲದಲ್ಲೇ ತೆರಿಗೆ ಸಂಗ್ರಹಿಸುವ ಬಾಧ್ಯತೆ ಉಂಟು.

(೧೭) ನೋಂದಾಯಿತ ವ್ಯಕ್ತಿಯಿಂದ ಪಾವತಿಸಲ್ಪಡಬೇಕಾದ ತೆರಿಗೆಗಳ ಸ್ವ-ಆಕಲನ ವ್ಯವಸ್ಥೆ ಇರುತ್ತದೆ.

(೧೮) ವಾರ್ಷಿಕ ರಿಟರ್ನ್ಸ್ ಸಲ್ಲಿಕೆಯ ದಿನದಿಂದ ಅಥವಾ ಮರುಪಾವತಿ ನೀಡಿದ ದಿನದಿಂದ ಮೂರು ವರ್ಷಗಳ ಕಾಲಮಿತಿ ಅವಧಿಯೊಳಗೆ ಪಾವತಿಸದ ಅಥವಾ ಕಡಿಮೆ ಪಾವತಿಸಿರುವ ಅಥವಾ ತಪ್ಪಾಗಿ ಮರುಪಾವತಿ ನೀಡಲಾದ ಸಾಮಾನ್ಯ ಪ್ರಕರಣಗಳಲ್ಲಿ ವಸೂಲಿ ಬೇಡಿಕೆಯಿಟ್ಟ ಪ್ರಕರಣ ನಿರ್ಧರಿಸಬೇಕು.

(೧೯) ವಾರ್ಷಿಕ ರಿಟರ್ನ್ಸ್ ಸಲ್ಲಿಕೆಯ ದಿನದಿಂದ ಅಥವಾ ಮರು ಪಾವತಿ ನೀಡಿದ ದಿನದಿಂದ ಐದು ವರ್ಷಗಳ ಕಾಲಮಿತಿ ಅವಧಿಯೊಳಗೆ ಪಾವತಿಸುವ ಅಥವಾ ಕಡಿಮೆ ಪಾವತಿಸಿರುವ ಅಥವಾ ತಪ್ಪಾಗಿ ಮರುಪಾವತಿ ನೀಡಲಾದ ವಂಚನೆ, ವಿವರಗಳ ಮುಚ್ಚಿಡುವಿಕೆ ಮತ್ತು ಬೇಕೆಂದೇ ತಪ್ಪು ಮಾಡಿರುವ ಪ್ರಕರಣಗಳಲ್ಲಿ ವಸೂಲಿ ಬೇಡಿಕೆಯಿಟ್ಟು ಪ್ರಕರಣ ನಿರ್ಧರಿಸಬೇಕು.

(೨೦) ಸ್ಥಿರ ಹಾಗೂ ಚರ ಆಸ್ತಿ ಅಥವಾ ಸರಕುಗಳನ್ನು ಮುಟ್ಟುಗೋಲು ಹಾಕಿಕೊಂಡು, ಮಾರಾಟ ಮಾಡುವುದನ್ನು ಒಳಗೊಂಡಂತೆ ಇನ್ನಿತರ ವಿಧಗಳಲ್ಲಿ ತೆರಿಗೆ ಬಾಕಿ ಮೊತ್ತ ವಸೂಲಾತಿ ಮಾಡಬಹುದು.

(೨೧) ತನಿಖೆ, ಶೋಧ, ವಶ ಮತ್ತು ಬಂಧನದ ವಿಚಾರದಲ್ಲಿ ಅಧಿಕಾರಿಗಳಿಗೆ ನಿರ್ಬಂಧಿತ ಅಧಿಕಾರ ಇರುತ್ತದೆ.

(೨೨) ಮೇಲ್ಮನವಿ ಪ್ರಾಧಿಕಾರ ಅಥವಾ ಪರಿಷ್ಕರಣ ಅಧಿಕಾರಿಯ ವಿರುದ್ಧ ಮೇಲ್ಮನವಿ ಸಲ್ಲಿಸಲು ಸರಕು ಮತ್ತು ಸೇವಾ ತೆರಿಗೆ ನ್ಯಾಯಾಧಿಕರಣವನ್ನು ಕೇಂದ್ರ ಸರಕಾರವು ಸಂಘಟಿಸುತ್ತದೆ. ರಾಜ್ಯ ಸರಕಾರಗಳು ತಂತಮ್ಮ ಎಸ್‌ಜಿಎಸ್‌ಟಿ ಕಾಯ್ದೆಯಲ್ಲಿ ನ್ಯಾಯಾಧಿಕರಣಗಳ ಕುರಿತು ಪ್ರಾವಧಾನಗಳನ್ನು ಅಳವಡಿಸಿಕೊಳ್ಳುತ್ತವೆ.

(೨೩) ಕಾಯಿದೆಯ ಪ್ರಾವಧಾನಗಳ ಉಲ್ಲಂಘನೆಗೆ ಸೂಕ್ತ ದಂಡದ ವ್ಯವಸ್ಥೆಯನ್ನು ಮಾಡಲಾಗಿದೆ.

(೨೪) ಇಲಾಖೆಯಿಂದ ತೆರಿಗೆಗೆ ಸಂಬಂಧಿಸಿದ ವಿಚಾರಗಳ ಬಗ್ಗೆ ತೆರಿಗೆದಾರ ಬದ್ಧಸ್ಪಷ್ಟತೆ ಪಡೆಯಲು ಮುಂಗಡ ಆದೇಶ ಪ್ರಾಧಿಕಾರವನ್ನು ರಾಜ್ಯಗಳು ಸಂಘಟಿಸಬೇಕು. ಕೇಂದ್ರವು ಸಿಜಿಎಸ್‌ಟಿ ಕಾಯಿದೆಯಡಿ ಈ ಬಗೆಯ ಪ್ರಾಧಿಕಾರ ಅಳವಡಿಸಿಕೊಳ್ಳುತ್ತದೆ.

(೨೫) ಸರಕು ಅಥವಾ ಸೇವೆಗಳ ಮೇಲೆ ವಿಧಿತವಾಗುವ ತೆರಿಗೆಯಲ್ಲಿನ ಕಡಿತದ ಲಾಭವನ್ನು ವ್ಯಾಪಾರವು ಗ್ರಾಹಕನಿಗೆ ವರ್ಗಾಯಿಸುವುದನ್ನು ಪರಿಶೀಲಿಸಲು ಲಾಭಕೋರ್ಳೆ ವಿರೋಧಿ ನೀತಿಯನ್ನು ನೀಡಲಾಗಿದೆ.

(೨೬) ಜಿಎಸ್‌ಟಿ ವ್ಯವಸ್ಥೆಗೆ ಪ್ರಸ್ತುತ ತೆರಿಗೆದಾರ ನಿರಾಯಾಸ ವರ್ಗಾವಣೆಗೆ ವಿಸ್ತೃತ ತಾತ್ಕಾಲಿಕ ನಿಬಂಧನೆಗಳನ್ನು ನೀಡಲಾಗಿದೆ.

(೨೭) ಜಿಎಸ್‌ಟಿ ಕಾಯಿದೆಯಡಿ ಅನುಮೋದನೆಗೊಂಡಿರುವ ಸಂಯೋಜನೆ, ಮೌಲ್ಯಮಾಪನ, ಸ್ಥಿತ್ಯಂತರ, ಐಟಿಸಿ, ಇನ್ವಾಯ್ಸ್, ಪಾವತಿ, ಮರುಪಾವತಿ, ನೋಂದಣಿ, ರಿಟರ್ನ್ಸ್ ಲೆಕ್ಕ ಹಾಗೂ ದಾಖಲಾತಿ, ಮುಂಗಡ ಆದೇಶ, ಮೇಲ್ಮನವಿ ಮತ್ತು ಪರಿಷ್ಕರಣೆ, ಆಕಲನ ಮತ್ತು ಲೆಕ್ಕ ತಪಾಸಣೆಗೆ ಸಂಬಂಧಿಸಿದ ನಿಯಮಗಳನ್ನು ಈಗಾಗಲೇ ಜಾಲತಾಣದಲ್ಲಿ ಬಿಡುಗಡೆ ಮಾಡಲಾಗಿದ್ದು ಸಾರ್ವಜನಿಕರ ಸಲಹೆ ಸೂಚನೆಗಳಿಗಾಗಿ ಅವು ಲಭ್ಯ. ಈಗಾಗಲೇ ನೋಂದಣಿ, ಪಾವತಿ, ರಿಟರ್ನ್ಸ್, ವಿದ್ಯುನ್ಮಾನ ತೆರಿಗೆ ಸಂದಾಯಕ್ಕೆ ಸಂಬಂಧಪಟ್ಟ ನಿಯಮಗಳನ್ನು, ಅನುಸರಿಸಬೇಕಾದ ವಿಧಾನಗಳ ನಮೂನೆಗಳನ್ನು, ನಿಗದಿಪಡಿಸಲಾಗಿದೆ.

**ಮಾಹಿತಿ ತಂತ್ರಜ್ಞಾನದ ಸಿದ್ಧತೆಗಳು**

ಜಿಎಸ್‌ಟಿಯನ್ನು ಕಾರ್ಯಗತಗೊಳಿಸುವಲ್ಲಿ ಅತಿ ಹೆಚ್ಚು ಸಾಮರ್ಥ್ಯವುಳ್ಳ ತಂತ್ರಜ್ಞಾನ ಜಾಲವೊಂದು ಅತಿ ಅವಶ್ಯಕ, ಇದಕ್ಕೆ ಜಿಎಸ್‌ಟಿಎನ್ ಎಂಬ ವಿಶೇಷ ಕಂಪನಿಯನ್ನು ಹುಟ್ಟುಹಾಕಲಾಗಿದೆ. ಹೀಗೆ ನಿರ್ಮಿಸಿದ ಜಿಎಸ್‌ಟಿಎನ್ ಕೇಂದ್ರ ಸರಕಾರ, ರಾಜ್ಯ ಸರಕಾರ, ವ್ಯಾಪಾರಸ್ಥರಿಗೆ ಮತ್ತು ಇತರ ಭಾಗಿದಾರರಿಗೆ ಸಾಮಾನ್ಯ ವೇದಿಕೆಯನ್ನು ಒದಗಿಸುವ ಜವಾಬ್ದಾರಿಯನ್ನು ಹೊಂದಿದೆ. ಜಿಎಸ್‌ಟಿಎನ್ ಈ ಕೆಳಗಿನ ಕಾರ್ಯಗಳನ್ನು ಕೈಗೊಳ್ಳಬೇಕಾಗಿದೆ.

* ನೋಂದಣಿ ಪ್ರಕ್ರಿಯೆ.
* ತೆರಿಗೆ ವರದಿಗಳನ್ನು ಸಲ್ಲಿಸಲು ಕೆಲಸವನ್ನು ಸುಲಭಗೊಳಿಸುವುದು ಮತ್ತು ಕೇಂದ್ರ ಮತ್ತು ರಾಜ್ಯ ಸರಕಾರಗಳಿಗೆ ತೆರಿಗೆ ವರದಿಗಳನ್ನು ರವಾನಿಸುವುದು.
* ಐಜಿಎಸ್‌ಟಿ ಲೆಕ್ಕವನ್ನು ಚುಕ್ತಾ ಮಾಡುವುದು.
* ಬ್ಯಾಂಕ್‌ಗಳ ಅಂತರಜಾಲಗಳೊಂದಿಗೆ ತೆರಿಗೆ ಪಾವತಿಗಳ ಲೆಕ್ಕ ಹೊಂದಾಣಿಕೆ ಮಾಡುವುದು.
* ಕರದಾತರು ಸಲ್ಲಿಸಿದ ತೆರಿಗೆ ವರದಿಗಳಲ್ಲಿನ ಮಾಹಿತಿಯನ್ನು ಆಧರಿಸಿ ಕೇಂದ್ರ ಹಾಗೂ ರಾಜ್ಯ ಸರಕಾರಗಳಿಗೆ ಬೇಕಾದ ವರದಿಗಳ ತಯಾರಿಕೆ.
* ತೆರಿಗೆದಾರರಿಂದ ದಾಖಲಿಸಲ್ಪಟ್ಟ ಮಾಹಿತಿಯನ್ನು ವಿಶ್ಲೇಷಿಸುವುದು.
* ಹೂಡುವಳಿ ತೆರಿಗೆ ಜಮೆಯ ಹೊಂದಾಣಿಕೆ ಮಾಡುವುದು, ಹೂಡುವಳಿ ತೆರಿಗೆ ಜಮೆಯನ್ನು ಹಿಂಪಡೆಯುವುದು ಮತ್ತು ಹೂಡುವಳಿ ಜಮೆಯನ್ನು ಮರಳಿ ಪಡೆಯುವುದು.

ಸರಕು ಮತ್ತು ಸೇವಾ ತೆರಿಗೆ ಪರಿಷತ್ತು (ಜಿಎಸ್‌ಟಿಸಿ) ಸಂವಿಧಾನದ ಆರ್ಟಿಕಲ್ ೨೭೯ಎ ಪ್ರಕಾರ ಭಾರತದ ರಾಷ್ಟ್ರಪತಿಗಳು ೧೨.೮.೨೦೧೬ರಂದು ಕೇಂದ್ರ ಸರಕಾರದ ಹಣಕಾಸು ಸಚಿವರು (ಪರಿಷತ್ ಅಧ್ಯಕ್ಷ), ರಾಜ್ಯ ಸಚಿವರು (ರಾಜಸ್ವ) ಮತ್ತು ರಾಜ್ಯಗಳ ಹಣಕಾಸು ಸಚಿವರನ್ನೊಳಗೊಂಡ ಜಿಎಸ್‌ಟಿ ಪರಿಷತ್ತನ್ನು ರಚಿಸುವಂತೆ ಆಜ್ಞೆ ಹೊರಡಿಸಿದ್ದಾರೆ. ಹೀಗೆ ರಚನೆ ಆದ ಪರಿಷತ್ತು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸುತ್ತದೆ.

(೧) ಜಿಎಸ್‌ಟಿಯಲ್ಲಿ ವಿಲೀನ ಮಾಡಬಹುದಾದ ತೆರಿಗೆಗಳು, ಸೆಸ್ಸುಗಳು ಮತ್ತು ಸರ್ಚಾರ್ಜುಗಳು (ವಿಲೀನಗೊಳ್ಳುವ ರಾಜ್ಯ ಮತ್ತು ಕೇಂದ್ರ ಸರಕಾರದ ತೆರಿಗೆಗಳು) ಈ ಕೆಳಗಿನಂತಿವೆ.

(೨) ಜಿಎಸ್‌ಟಿ ತೆರಿಗೆಗೆ ಒಳಪಡಬಹುದಾದ ಮತ್ತು ವಿನಾಯಿತಿ ನೀಡಬಹುದಾದ ಸರಕು ಮತ್ತು ಸೇವೆಗಳು.

(೩) ಜಿಎಸ್‌ಟಿ ಮಾದರಿ ಕಾಯಿದೆಗಳು, ತೆರಿಗೆ ವಿಧಿಸುವ ಸೂತ್ರಗಳು, ಐಜಿಎಸ್‌ಟಿ ಹಂಚಿಕೆ, ಪೂರೈಕೆ ಸ್ಥಳವನ್ನು ನಿರ್ಧರಿಸುವ ತತ್ವಗಳು.

(೪) ಜಿಎಸ್‌ಟಿ ತೆರಿಗೆಯಿಂದ ವಿನಾಯಿತಿ ನೀಡಬಹುದಾದ ವಹಿವಾಟಿನ ಆರಂಭಿಕ ಮಿತಿಯನ್ನು ನಿಗದಿಪಡಿಸುವುದು.

(೫) ಕಾಯಿದೆಯಲ್ಲಿ ನಿಗದಿಪಡಿಸಬಹುದಾದ ಕನಿಷ್ಠ ತೆರಿಗೆ ದರಗಳು ಮತ್ತು ವಿವಿಧ ಹಂತದ ತೆರಿಗೆ ದರಗಳು.

(೬) ಕೆಲವು ರಾಜ್ಯಗಳಿಗೆ ಅನ್ವಯಿಸುವಂತೆ ವಿಶೇಷ ಉಪಬಂಧಗಳು.

ಇಲ್ಲಿಯವರೆಗೆ ಜಿಎಸ್‌ಟಿ ಪರಿಷತ್ತು ೧೫ ಬಾರಿ ಸಭೆ ಸೇರಿ ಕೆಳಕಂಡ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಂಡಿದೆ.

(೧) ಅನುಶಾಶಿಸಿದ ವಿನಾಯಿತಿ ಮಿತಿ ೨೦ ಲಕ್ಷ ರೂ.ಗಳಾಗಿರುತ್ತದೆ. ಸಂವಿಧಾನದ ವಿಧಿ ೨೭೯(ಎ)ರಲ್ಲಿ ಸೂಚಿಸಲಾಗಿರುವ ವಿಶೇಷ ವರ್ಗದ ರಾಜ್ಯಗಳಲ್ಲಿ ಅನುಶಾಶಿಸಿದ ವಿನಾಯಿತಿ ಮಿತಿ ೧೦ ಲಕ್ಷ ರೂ.ಗಳಾಗಿರುತ್ತದೆ.

(೨) ಸಂಯೋಜಿತ ಯೋಜನೆ ಮಿತಿ ರೂ. ೫೦ ಲಕ್ಷಗಳಾಗಿರುತ್ತದೆ.

(೩) ಪ್ರಸ್ತುತ ಲಭ್ಯವಿರುವ ವಿನಾಯ್ತಿ ಯೋಜನೆಗಳನ್ನು ಕೇಂದ್ರ ಅಥವಾ ರಾಜ್ಯ ಸರಕಾರಗಳು ತಮ್ಮ ಬಜೆಟ್ ಮೂಲಕ ಮರುಪಾವತಿ ಮಾರ್ಗದಲ್ಲಿ ನೀಡಿ ಮುಂದುವರಿಸಬಹುದು. ಈಗಿರುವ ರೂಪದಲ್ಲಿ ಈ ಯೋಜನೆಗಳು ಜಿಎಸ್‌ಟಿಯಲ್ಲಿ ಮುಂದುವರಿಯುವುದಿಲ್ಲ.

(೪) ಸರಕು ಮತ್ತು ಸೇವೆಗಳಿಗೆ ನಾಲ್ಕು ತೆರಿಗೆಗಳಿವೆ : ೫%, ೧೨%, ೧೮% ಮತ್ತು ೨೮%. ಕೆಲವು ಸರಕುಗಳು ಮತ್ತು ಸೇವೆಗಳು ವಿನಾಯಿತಿ ಪಟ್ಟಿಯ ಅಡಿಯಲ್ಲಿವೆ. ಜಿಎಸ್‌ಟಿ ಅನುಷ್ಠಾನದಿಂದಾಗಿ ರಾಜ್ಯಗಳಿಗೆ ಆದಾಯ ನಷ್ಟವಾದಲ್ಲಿ, ಅದನ್ನು ಸರಿದೂಗಿಸಲು ನಿರ್ದಿಷ್ಟಪಡಿಸಿದ ಐಷಾರಾಮಿ ಮತ್ತು ಡಿಮೆರಿಟ್ ಸರಕುಗಳ ಮೇಲೆ ೨೮% ಗರಿಷ್ಠ ದರದ ಮೇಲೆ ಐದು ವರ್ಷಗಳ ಅವಧಿವರೆಗೆ ಸೆಸ್ ವಿಧಿಸಲಾಗುವುದು.



(೫) ಐದು ಅಧಿನಿಯಮಗಳನ್ನು ಶಿಫಾರಸ್ಸು ಮಾಡಿದೆ : ಸಿಜಿಎಸ್‌ಟಿ ಅಧಿನಿಯಮ, ಐಜಿಎಸ್‌ಟಿ ಅಧಿನಿಯಮ, ಎಸ್‌ಜಿಎಸ್‌ಟಿ ಅಧಿನಿಯಮ, ಯುಟಿಎಸ್‌ಟಿ ಅಧಿನಿಯಮ ಮತ್ತು ಜಿಎಸ್‌ಟಿ ಪರಿಹಾರ ಅಧಿನಿಯಮ.

(೬) ಒಂದೇ ಸಂಪರ್ಕ ಸೇತುವೆ ಖಾತ್ರಿಪಡಿಸಲು ವಹಿವಾಟು ಆಧಾರದ ಮೇಲೆ ತೆರಿಗೆದಾರರ ಮೇಲೆ ಆಡಳಿತಾತ್ಮಕ ಹತೋಟಿಗಾಗಿ ಕೇಂದ್ರ ಮತ್ತು ರಾಜ್ಯಗಳ ನಡುವೆ ಹಂಚಿಕೆ ನಡೆಯುತ್ತದೆ.

(೭) ಐಜಿಎಸ್‌ಟಿ ನಿಯಮದಡಿಯ ಅಧಿಕಾರಗಳನ್ನು ಕೂಡ ಸಿಜಿಎಸ್‌ಟಿ – ಎಸ್‌ಜಿಎಸ್‌ಟಿ ಅಧಿನಿಯಮಗಳಂತೆಯೇ, ಕೆಲವು ಅಪವಾದಗಳನ್ನು ಒಳಗೊಂಡು ಕೇಂದ್ರ ಹಾಗೂ ರಾಜ್ಯಗಳ ನಡುವೆ ಹಂಚಲಾಗುವುದು.

(೮) ಸೀಮೆಯ ಜಲಪ್ರದೇಶದಲ್ಲಿ ಜಿಎಸ್‌ಟಿ ಸಂಗ್ರಹಿಸುವ ಅಧಿಕಾರವನ್ನು ಕೇಂದ್ರ ಸರಕಾರವು ರಾಜ್ಯಗಳಿಗೆ ನಿಯೋಜಿಸುವುದು.

(೯) ಜಿಎಸ್‌ಟಿ ಪರಿಹಾರ, ಸೆಸ್ ಕುರಿತಾದ ಸೂತ್ರ ಮತ್ತು ವ್ಯವಸ್ಥೆಯನ್ನು ತೀರ್ಮಾನಿಸಲಾಗಿದೆ.

(೧೦) ಮೌಲ್ಯಮಾಪನ, ಸ್ಥಿತ್ಯಂತರ, ಐಟಿಸಿ (ಹೂಡುವಳಿ ಜಮೆ), ಇನ್ವಾಯ್ಸ್, ತೆರಿಗೆ ಪಾವತಿ, ಮರುಪಾವತಿ, ನೋಂದಣಿ ಮತ್ತು ಸಲ್ಲಿಸಬಹುದಾದ ರಿಟರ್ನ್ಸ್ ಕುರಿತಾದ ನಿಯಮಗಳನ್ನು ಅನುಮೋದಿಸಲಾಗಿದೆ.

**ಜಿಎಸ್‌ಟಿಯ ಅನುಕೂಲಗಳು**

(೧) ಏಕರೂಪ ತೆರಿಗೆಯಿಂದ ದೇಶಾದ್ಯಂತ ಏಕೀಕೃತ ಸಾಮಾನ್ಯ ಮಾರುಕಟ್ಟೆಯ ನಿರ್ಮಾಣ. ಇದರಿಂದ ವಿದೇಶಿ ಬಂಡವಾಳ ಹೂಡಿಕೆ ಸುಗಮ.

(೨) ಹೂಡುವಳಿ ತೆರಿಗೆ ಜಮೆಯಿಂದ ತೆರಿಗೆ ಮೇಲೆ ತೆರಿಗೆ ವಿಧಿತವಾಗುವ ಸಂದರ್ಭಗಳನ್ನು ತಡೆಯುತ್ತದೆ.

(೩) ಸರಳೀಕೃತ ಕಾಯ್ದೆ, ಕಾರ್ಯವಿಧಾನ ಮತ್ತು ತೆರಿಗೆ ದರಗಳು.

(೪) ತೆರಿಗೆ ವಂಚನೆ ಸಂದರ್ಭಗಳು ಕಡಿಮೆಯಾಗುವ ಸಾಧ್ಯತೆ.

(೫) ಸೇವಾ ಮತ್ತು ಸರಕುಗಳ ಬೆಲೆ ಕಡಿಮೆಯಾಗುವುದರಿಂದ ಉಪಭೋಗ ಹೆಚ್ಚಾಗುವಿಕೆ ಮತ್ತು ಉತ್ಪಾದನಾ ವೃದ್ಧಿ ಇದರಿಂದ ಕೈಗಾರಿಕೆ ಬೆಳವಣಿಗೆಗೆ ಸಾಧ್ಯ.

(೬) ಕಡಿಮೆ ವಿನಾಯ್ತಿಗಳ ಸರಳ ತೆರಿಗೆ ವ್ಯವಸ್ಥೆ.

(೭) ತೆರಿಗೆ ಪಾವತಿಸುವ/ಮರುಪಾವತಿಯಾಗುವ ಸಂದರ್ಭದಲ್ಲಿ ಸರಳ ಮತ್ತು ಸ್ವಯಂಚಾಲಿತ ವ್ಯವಸ್ಥೆ.

(೮) ತೆರಿಗೆದಾರ ಮತ್ತು ತೆರಿಗೆ ಆಡಳಿತದ ನಡುವೆ ಹಸ್ತಕ್ಷೇಪ ಕಡಿತ, ಎಲ್ಲ ಕಾರ್ಯಗಳು ಸಾಮಾನ್ಯ ಜಿಎಸ್‌ಟಿ ಪೋರ್ಟಲ್ (ಜಿಎಸ್‌ಟಿಎನ್) ಮುಖಾಂತರವೇ ನಡೆಯಬೇಕು.

ಜುಲೈ ೧ರಂದು ಜಿಎಸ್‌ಟಿ ಕಾಯಿದೆಯನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನದಲ್ಲಿ ಜಿಎಸ್‌ಟಿ ಪರಿಷತ್ತು ದಿನಾಂಕ ೧೧–೬–೨೦೧೭ರಂದು ನಡೆದ ೧೬ನೇ ಸಭೆಯಲ್ಲಿ ಇಲ್ಲಿಯವರೆಗೆ ತೀರ್ಮಾನವಾದ ೬೬ ಸರಕುಗಳ ಜಿಎಸ್‌ಟಿ ದರವನ್ನು ಉದ್ದಿಮೆ ಮತ್ತು ವ್ಯಾಪಾರಸ್ಥರ ಬೇಡಿಕೆ ಆಧರಿಸಿ ಪರಿಷ್ಕರಿಸಲಾಗಿದೆ. ಇದುವರೆಗೆ ಜಿಎಸ್‌ಟಿ ಪರಿಷತ್ತು ಸೇವಾ ಮತ್ತು ಸರಕುಗಳ ವರ್ಗೀಕರಣ, ಮೌಲ್ಯಮಾಪನ ಮತ್ತು ದರಗಳನ್ನು ಮತ್ತು ಅವಕ್ಕೆ ಸಂಬಂಧಿಸಿದ ನಿಯಮಗಳನ್ನು ರೂಪಿಸಲಾಗಿದೆ. ಸಲ್ಲಿಸಬೇಕಾದ ರಿಟರ್ನ್ಸ್ ಮತ್ತು ಫಾರಂಗಳ ನಮೂನೆಗಳನ್ನು ನಿರ್ಧರಿಸಲಾಗಿದೆ. ಬಹುತೇಕ ಸರಕು ಮತ್ತು ಸೇವೆಯ ದರಗಳನ್ನು (೧೨೦೦ ಸರಕುಗಳು ಮತ್ತು ೫೦೦ ಸೇವೆಗಳಿಗೆ ದರಗಳನ್ನು), ಈಗಾಗಲೇ ನಿಗದಿಪಡಿಸಲಾಗಿದೆ. ಉದಾಹರಣೆ : ಕಂಪ್ಯೂಟರ್ ಪ್ರಿಂಟರ್ ಮೇಲೆ ಶೇ. ೨೮ರಿಂದ ಶೇ. ೧೮ಕ್ಕೆ ಇಳಿಸಲಾಗಿದೆ. ಸಂಯೋಜಿತ ವಿನಾಯಿತಿ ಮಿತಿಯನ್ನು ರೂ. ೫೦ ಲಕ್ಷದಿಂದ ರೂ. ೭೫ ಲಕ್ಷದವರೆಗೆ ಏರಿಸಲಾಗಿದೆ. ಕರದಾತರು ಜಿಎಸ್‌ಟಿ ಸೇವೆ ಪಾವತಿಸುವ ನಿಟ್ಟಿನಲ್ಲಿ ಲೆಕ್ಕಪತ್ರ ಮತ್ತು ದಾಖಲಾತಿ ಪತ್ರ (ರೆಕಾರ್ಡ್ಸ್)ಗಳಿಗೆ ಸಂಬಂಧಿಸಿದ ನಿಯಮಗಳನ್ನು ಅಂತಿಮಗೊಳಿಸಿದೆ. ಮುಂದಿನ ಸಭೆ ಜೂನ್ ೧೮ರಂದು ನಡೆಯಲಿದ್ದು ಬಾಕಿ ಎಲ್ಲ ವಿಷಯಗಳ ಮೇಲೆ ಅಂತಿಮ ನಿರ್ಧಾರ ತೆಗೆದುಕೊಳ್ಳಲಿದ್ದು ೧–೭–೨೦೧೭ರಂದು ಇಡೀ ದೇಶಾದ್ಯಂತ ಜಿಎಸ್‌ಟಿ, ಏಕರೂಪ ತೆರಿಗೆ ಕಾನೂನು ಅನುಷ್ಠಾನಕ್ಕೆ ಬರುವ ಸಾಧ್ಯತೆ ಇದೆ. ಈ ನಿಟ್ಟಿನಲ್ಲಿ ಇನ್ನೂ ಆರು ರಾಜ್ಯಗಳು ಎಸ್‌ಜಿಎಸ್‌ಟಿ ಕಾಯಿದೆಯನ್ನು ಅಂಗೀಕರಿಸಬೇಕಿವೆ. ಭವಿಷ್ಯದ ಜಿಎಸ್‌ಟಿ ತೆರಿಗೆದಾರರು ಎದುರಿಸಬೇಕಾದ ತಾಂತ್ರಿಕ ಸಮಸ್ಯೆಗಳು, ಜಿಎಸ್‌ಟಿ ನೆಟ್‌ವರ್ಕ್‌ನೊಂದಿಗೆ ಏರ್ಪಡಿಸಬಹುದಾದ ಹೊಂದಾಣಿಕೆ ಮತ್ತು ಸ್ಥಿತ್ಯಂತರ ಸಮಸ್ಯೆಗಳನ್ನು ಗಮನದಲ್ಲಿರಿಸಿ ಎಲ್ಲದಕ್ಕೂ ಸೂಕ್ತ ಪರಿಹಾರ ದೊರಕಿಸುವ ಬಗ್ಗೆ ಮೇಲಿಂದ ಮೇಲೆ ಕೇಂದ್ರ ಸರಕಾರದ ವಿತ್ತ ಮಂತ್ರಿ, ಕಂದಾಯ ಕಾರ್ಯದರ್ಶಿಗಳು ಕೇಂದ್ರ ಪರೋಕ್ಷ ತೆರಿಗೆ ಮಂಡಳಿ ಮತ್ತು ರಾಜ್ಯ ಸರಕಾರದ ವಾಣಿಜ್ಯ ತೆರಿಗೆ ಅಧಿಕಾರಿಗಳು ಸಾರ್ವಜನಿಕರಿಗೆ ವಿಶೇಷವಾಗಿ ವ್ಯಾಪಾರಸ್ಥರಿಗೆ, ಉದ್ದಿಮೆದಾರರಿಗೆ, ಸರಕು ಉತ್ಪಾದಕರು ಸೇವೆ ಪೂರೈಕೆ ಮಾಡುವವರೊಂದಿಗೆ ಸದಾ ಸಂಪರ್ಕದಲ್ಲಿದ್ದು ಸಾಕಷ್ಟು ತಿಳುವಳಿಕೆ ಕೊಡುವ ನಿಟ್ಟಿನಲ್ಲಿ ಸಿದ್ಧತೆಗಳೊಂದಿಗೆ ತಯಾರಾಗಿದ್ದಾರೆ. ಸಾಕಷ್ಟು ಪ್ರಾತ್ಯಕ್ಷಿಕೆ, ಕಾರ್ಯಾಗಾರಗಳ ಮೂಲಕ ಜಿಎಸ್‌ಟಿ ಕಾನೂನಿನ ಪರಿಚಯವನ್ನು ಮಾಡಿಕೊಡಲಾಗುತ್ತಿದೆ.

ಜಿಎಸ್‌ಟಿ ಅನುಷ್ಠಾನದೊಂದಿಗೆ ಆಗಬಹುದಾದ ಲಾಭ ನಷ್ಟಗಳ ಬಗ್ಗೆ ಈಗಾಗಲೇ ಹಲವಾರು ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ಮತ್ತು ಸಾರ್ವಜನಿಕ ವೇದಿಕೆಗಳಲ್ಲಿ ಚರ್ಚೆ ನಡೆಯುತ್ತಲೇ ಇದೆ. ಹಣದುಬ್ಬರ, ಆರ್ಥಿಕ ಪ್ರಗತಿ, ಸರಕು ಮತ್ತು ಸೇವೆಗಳ ಬೆಲೆ ಹೆಚ್ಚಳ ಮತ್ತು ರಾಜ್ಯಗಳಿಗೆ ಆಗಬಹುದಾದ ಅನಾನುಕೂಲಗಳ ಬಗ್ಗೆ ಈಗಾಗಲೇ ಸ್ಪಷ್ಟೀಕರಣಗಳನ್ನು ಕೊಡುತ್ತಲೇ ಇದ್ದಾರೆ. ವಾಸ್ತವಾಂಶ ಏನೆಂದರೆ ಈ ಕಾನೂನು ಸರಿಯಾದ ಕ್ರಮದಲ್ಲಿ ರಾಜ್ಯ ಮತ್ತು ಕೇಂದ್ರ ಸರಕಾರಗಳ ಸಮನ್ವಯ–ಸೌಹಾರ್ದತೆ, ಕರದಾತರಲ್ಲಿ ಕಾನೂನು ಪರಿಪಾಲಿಸಬೇಕಾದ ಶಿಸ್ತು ಮತ್ತು ಅದನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ತೆರಿಗೆ ಆಡಳಿತದಲ್ಲಿ ಪಾರದರ್ಶಕತೆ ಮತ್ತು ತೆರಿಗೆದಾತರಿಗೆ ಸೂಕ್ತ ಮಾರ್ಗದರ್ಶನಗಳಿದ್ದಲ್ಲಿ ಜಿಎಸ್‌ಟಿ ಕಾಯಿದೆ ಒಕ್ಕೂಟ ವ್ಯವಸ್ಥೆಯಲ್ಲಿ ಒಂದು ನೂತನ ಫಲಪ್ರದ ಪ್ರಯೋಗ ಎನ್ನಿಸಿಕೊಳ್ಳುವುದರಲ್ಲಿ ಯಾವುದೇ ಅನುಮಾನಕ್ಕೆ ಎಡೆ ಬೇಡ.

ಜಿಎಸ್‌ಟಿ ಕಾಯಿದೆಯು ಅನುಷ್ಠಾನಗೊಳ್ಳುವ ಪ್ರಕ್ರಿಯೆಯಲ್ಲಿ ಪರೋಕ್ಷ ತೆರಿಗೆ ಸಂಗ್ರಹದಲ್ಲಿ ಇಡೀ ದೇಶದಲ್ಲೆಲ್ಲಾ ಸಂಚಲನ ಮೂಡಿಸಿರುವ ಸಂದರ್ಭದಲ್ಲಿ, ಈ ತೆರಿಗೆ ಸುಧಾರಣೆಗಳ ಪರಿಣಾಮ ಗಣನೀಯವಾದುದು, ಏಕೆಂದರೆ ಪರೋಕ್ಷ ತೆರಿಗೆಯ ಭಾರವನ್ನು ಹೊರುವುದು ಅಂತಿಮವಾಗಿ ಶ್ರೀಸಾಮಾನ್ಯನೇ. ಈ ಕಾನೂನಿನ ಆಮೂಲಾಗ್ರ ಪರಿಚಯ ಮಾಡುವ ನಿಟ್ಟಿನಲ್ಲಿ ಈ ಲೇಖನ ಒಂದು ಸಣ್ಣ ಪ್ರಯತ್ನ. ಆಸಕ್ತರು ಹೆಚ್ಚಿನ ಮಾಹಿತಿಗಾಗಿ ಇಂಟರ್‌ನೆಟ್‌ನಲ್ಲಿ ಸಾಕಷ್ಟು ಪಡೆಯಬಹುದು. cbec.gov.in ಜಾಲತಾಣದಲ್ಲಿ ಈ ಕಾಯಿದೆಗೆ ಸಂಬಂಧಪಟ್ಟಂತೆ ಎಲ್ಲ ಮಾಹಿತಿ ದೊರೆಯಲಿದೆ. ಕೆಲವು ಸಂಸ್ಥೆಗಳು, ಪ್ರಕಾಶಕರು ವಿಶೇಷ ಪ್ರಕಟಣೆಗಳೊಂದಿಗೆ ಸಾರ್ವಜನಿಕರಲ್ಲಿ ತಿಳುವಳಿಕೆ ನೀಡುವ ನಿಟ್ಟಿನಲ್ಲಿ ತೊಡಗಿಸಿಕೊಂಡಿವೆ. caclubindia, Tax India online.com. Taxguru. gstindia.com. etc., ಜಿಎಸ್‌ಟಿಗೆ ಸಂಬಂಧಿಸಿದ ಅಧಿನಿಯಮ, ನಿಯಮಾವಳಿ, ವಿಧಿ ವಿಧಾನಗಳು ಮತ್ತು ಅಧಿಸೂಚನೆಗಳಿಗಾಗಿ ಅಧಿಕೃತವಾಗಿ ಪ್ರಕಟಿಸಿದ ಜಾಲತಾಣಗಳಲ್ಲಿ ವೀಕ್ಷಿಸಬಹುದು.

**ವಿನಾಯಕ ಎಲ್. ಕುಲಕರ್ಣಿ**
ಸಹಾಯಕ ಆಯುಕ್ತ, ಕೇಂದ್ರೀಯ ಅಬಕಾರಿ ಮತ್ತು ಸೇವಾ ತೆರಿಗೆ (ನಿವೃತ್ತ)
ನಂ. ೫೬, 'ಅಮೃತವರ್ಷಿಣಿ', ೭ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ
ಬಿಕಾಸಿಪುರ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

**ಡಾ॥ ಎಚ್. ಎಸ್. ಅನುಪಮಾ**

# ಗ್ವಾನೊ ಕಥನ

ಸದಾ ಒದ್ದೆಯಾಗಿ ಮಂಜು ಮುಸುಕಿದ ಪೆಸಿಫಿಕ್ ಸಮುದ್ರ ದಂಡೆ, ಭೂಮಿ ಮೇಲಿನ ಅತಿ ಒಣಹವೆಯ ಪ್ರದೇಶವಾದ ಅಟಕಾಮಾ ಮರುಭೂಮಿ– ಇವೆರಡರ ನಡುವೆ ಹರಡಿಕೊಂಡಿರುವ ಪುರಾತನ ನಾಗರಿಕತೆಯ ತೊಟ್ಟಿಲು ಪೆರು. ಎರಡು ಸಮಾನಾಂತರ ಪರ್ವತ ಶ್ರೇಣಿಗಳಿರುವ, ೨೦–೩೦ ನದಿಗಳು ಹರಿವ ದೇಶ ಅದು. ಅತಿ ತೇವಾಂಶ–ಅತಿ ಒಣಹವೆ, ಅತಿ ನೀರು–ಮಳೆಯೇ ಬೀಳದ ಮರುಭೂಮಿ, ಕಡಿದಾದ ಇಳಿಜಾರು–ನೀರು ನಿಂತುಬಿಡುವ ಬಯಲು – ಹೀಗೆ ಸಂಪೂರ್ಣ ವಿಭಿನ್ನ ನೆಲ ಲಕ್ಷಣಗಳನ್ನು ಹೊಂದಿರುವ ದೇಶ ಪೆರು. ಹವಾಮಾನಕ್ಕೆ ತಕ್ಕಂತೆ ವೈವಿಧ್ಯಮಯ ಬೆಳೆ ಬೆಳೆದಿರುವ ಯಶಸ್ವಿ ಕೃಷಿಕರು ಅವರು.

ಪೆರುವಿನ ಪವಿತ್ರ ಕಣಿವೆಯಲ್ಲಿ ಪಯಣಿಸುವಾಗ ಎಲ್ಲೆಲ್ಲೂ ಬೆಳೆದುನಿಂತ ಹಸಿರು ಕಣ್ತುಂಬುವಂತಿತ್ತು. ಗುಡ್ಡದ ಇಳಿಜಾರುಗಳಲ್ಲಿ, ಕಡಿದಾದ ಪರ್ವತಗಳ ಪಾರ್ಶ್ವದಲ್ಲಿ ಕಡೆದ ಮೆಟ್ಟಿಲುಗಳಲ್ಲಿ, ಬಯಲುಗಳಲ್ಲಿ ಎಲ್ಲೆಲ್ಲೂ ಸಮೃದ್ಧ ಮತ್ತು ವೈವಿಧ್ಯಮಯ ಬೆಳೆ. ಅದನ್ನು ನೋಡುವಾಗ, ನಮ್ಮ ಕೃಷಿಯೂ, ರೈತರ ಆತ್ಮಹತ್ಯೆಗಳೂ ನೆನಪಿಗೆ ಬಂದವು. ನಮ್ಮ ರೈತರು ರಸಗೊಬ್ಬರ–ಬೀಜ ಸಾಲದ ಸುಳಿಯಲ್ಲಿ ಸಿಲುಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವಾಗ, ನಮಗಿಂತ ಮೊದಲೇ ಜಾಗತೀಕರಣಗೊಂಡ ಪೆರುವಿನ ರೈತರು ಗೊಬ್ಬರ, ಬೀಜಕ್ಕಾಗಿ ಸಾಲ ಮಾಡುವರೇ ? ಆತ್ಮಹತ್ಯೆಗೆಳಸುವರೇ ? ಎಂಬ ಪ್ರಶ್ನೆ ಸುಳಿಯಿತು.

ಏನು ಗೊಬ್ಬರ ಹಾಕಿ ಬೆಳೆ ಬೆಳೆಯುತ್ತಾರೋ? ಅಲ್ಪಾಕ, ಲಾಮಗಳ ಹಿಕ್ಕೆಯೋ ಅಥವಾ ರಸಗೊಬ್ಬರವೋ? ನಮ್ಮ ಚರ್ಚೆಯ ಮಾತು ಅರ್ಥ ಮಾಡಿಕೊಂಡನೋ ಎನ್ನುವಂತೆ ಗೈಡ್ ಉತ್ತರಿಸಿದ :

'ಗ್ವಾನೊ ವಾನೊ.'

'ಗ್ವಾನೊ ?'

'ಹೌದು, ಅದು ಗೊಬ್ಬರ. ನಮ್ಮ ಆ್ಯಂಡಿಯನ್ ಭಾಷೆಯಲ್ಲಿ ಗ್ವಾನೊ ಎನ್ನುತ್ತೇವೆ. ಕೇಳಿಲ್ಲವೇನು ?'

'ಇಲ್ಲ. ಏನು ಗ್ವಾನೊ ಎಂದರೆ ?'

'ನೈಟ್ರೇಟ್ ಯುದ್ಧ ಎಂದು ಓದಿಲ್ಲವೆ ? ವಾರ್ ಆಫ್ ಪೆಸಿಫಿಕ್ ಗ್ವಾನೋಗಾಗಿಯೇ ನಡೆದದ್ದು. ನೈಟ್ರೇಟ್ ಎಂದರೆ ಗ್ವಾನೋ. ರೈತರ ಕೈ ಹಿಡಿದಿದ್ದು ಅದೇ.'

ರೈತರು ಆತ್ಮಹತ್ಯೆಗೆಳಸದಂತೆ ತಡೆದ ಗ್ವಾನೊ ! ಅದಕ್ಕಾಗಿ ಯುದ್ಧ !!

**ಏನಿದು ಗ್ವಾನೊ ?**

ಗ್ವಾನೊ ಮೂಲ ಕೆದಕಿ ಹೊರಟಾಗ ಆಸಕ್ತಿದಾಯಕ ನೈಟ್ರೇಟ್ ಕಥನ ಎದುರಾಯಿತು.

ನೈಟ್ರೇಟ್ ಆಧುನಿಕ ಮನುಷ್ಯನಿಗೆ ಅತ್ಯವಶ್ಯ ರಾಸಾಯನಿಕ. ಅದಕ್ಕೆ ಹಲವು ಉಪಯೋಗಗಳು. ಗೊಬ್ಬರ ತಯಾರಿ, ಸ್ಫೋಟಕ, ಹೊಗೆ ಬಾಂಬು, ರಾಕೆಟ್ ಪ್ರೊಪೆಲೆಂಟ್, ಗ್ಲಾಸ್ ಎನಾಮೆಲ್, ಆಹಾರ ಸಂರಕ್ಷಣೆ ಎಲ್ಲದರಲ್ಲೂ ಅದು ಉಪಯೋಗಿಸಲ್ಪಡುತ್ತಿದೆ. ಅಟಕಾಮಾ ಮರುಭೂಮಿಯಲ್ಲಿ ಸಾಲ್ಟ್ ಪೀಟರ್ ಶೋಧಿಸಲ್ಪಟ್ಟು, ೨೦ನೇ ಶತಮಾನದಲ್ಲಿ ಕೃತಕ ತಯಾರಿಕಾ ವಿಧಾನಗಳ ಅಭಿವೃದ್ಧಿಪಡಿಸುವವರೆಗೂ ನೈಟ್ರೇಟ್‌ನ ಮೂಲ ಆಕರವಾಗಿ ಜಗತ್ತು ಗ್ವಾನೊವನ್ನೇ ನೆಚ್ಚಿಕೊಂಡಿತ್ತು.

ಗ್ವಾನೊ ಎಂದರೆ ಹಕ್ಕಿ ಉದುರಿಸಿದ ಪಿಷ್ಟೆ. ಗುಹೆಗಳ ಹಕ್ಕಿ, ಬಾವಲಿ ಮತ್ತು ಕಡಲ ಹಕ್ಕಿಗಳ ಹಿಕ್ಕೆ ಅತ್ಯಂತ ನೈಟ್ರೋಜನ್‌ಯುಕ್ತ. ಅದರಲ್ಲೂ ಕ್ರಿಮಿಕೀಟ ತಿನ್ನುವ ನೆಲದ ಹಕ್ಕಿಗಳ ಪಿಷ್ಟೆಗಿಂತ ಗುಹೆಯ ತಂಪಲ್ಲಿ ವಾಸಿಸುವ ಬಾವಲಿಗಳ ಪಿಷ್ಟೆಗಿಂತ ಕಡಲ ಹಕ್ಕಿಗಳ ಪಿಷ್ಟೆ ಹೆಚ್ಚು ಸಾರಜನಕ, ಪೊಟ್ಯಾಷಿಯಂ ಹಾಗೂ ರಂಜಕಯುಕ್ತ ಎಂದೇ ಕಡಲ ಹಕ್ಕಿಪಿಷ್ಟೆ ಸಮೃದ್ಧ ಬೆಳೆಗೆ ಸಹಾಯಕ.

ಸಾವಿರಾರು ವರ್ಷಗಳಿಂದ ಆ್ಯಂಡಿಯನ್ ಜನರು ಗ್ವಾನೊ ಬಳಸಿ, ಮಣ್ಣಿನ ಫಲವತ್ತತೆ ಮತ್ತು ಇಳುವರಿ ಹೆಚ್ಚಿಸಬಹುದೆಂದು ತಿಳಿದಿದ್ದರು. ಇಂಕಾ ರಾಜರು ಗ್ವಾನೊ ಬಳಕೆಯ ಮೇಲೆ ನಿರ್ಬಂಧ ಹೇರಿದ್ದಲ್ಲದೆ ಕಡಲ ಹಕ್ಕಿಗಳ ಕೊಂದವರಿಗೆ, ಅವುಗಳ ಸಂತಾನೋತ್ಪತ್ತಿಗೆ ತೊಂದರೆ ಕೊಟ್ಟವರಿಗೆ ಮರಣದಂಡನೆ ವಿಧಿಸುತ್ತಿದ್ದರು.

ಕಡಲ ಹಕ್ಕಿಗಳು ಈ ಪರಿ ಸಂಖ್ಯೆಯಲ್ಲಿ ಇಲ್ಲಿಗೇ ಏಕೆ ಬಂದವು ?

ದಕ್ಷಿಣ ಅಮೆರಿಕದ ಪಶ್ಚಿಮ ತೀರದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹರಿಯುವ ಶೀತನೀರಿನ ಪ್ರವಾಹ 'ಹಂಬೋಲ್ಟ್ ಕರೆಂಟ್'. ಅದರ ಉತ್ತರ ತುದಿ ಪೆರು. ಅದು ಎಲ್ಲ ಸಮೃದ್ಧ ಪೋಷಕಾಂಶಗಳು ಪೆರುವಿನ

ಕಡಲಾಳಕ್ಕೆ ಬಂದು ಬೀಳುವಂತೆ ಮಾಡುತ್ತದೆ. ಅದಕ್ಕೇ ಅಲ್ಲಿ ಹೆಚ್ಚು ಆಲ್ಗೆ, ಶಿಲೀಂಧ್ರಗಳು ಬೆಳೆಯುತ್ತವೆ. ಅದನ್ನು ತಿಂದು ಮೀನು ಬೆಳೆಯುವುದರಿಂದ ಪ್ರಪಂಚದ ಎಲ್ಲ ಕಡೆಗಿಂತ ಹೆಚ್ಚು ಮೀನು ಪೆರುವಿನ ಕಡಲಲ್ಲಿ ದೊರೆಯುತ್ತದೆ.

ಮೀನು ಹೆಚ್ಚಿರುವುದರಿಂದ ವಲಸೆ ಬರುವ ಕಡಲ ಹಕ್ಕಿಗಳ ಸಂಖ್ಯೆಯೂ ಹೆಚ್ಚು. ಸಮುದ್ರದ ನಡುವಿರುವ ಸಣ್ಣಪುಟ್ಟ ದ್ವೀಪಗಳಿಗೆ ಪೆಂಗ್ವಿನ್, ಪೆಲಿಕನ್ ಸೇರಿದಂತೆ ಲಕ್ಷಾಂತರ ಹಕ್ಕಿಗಳು ಪ್ರತಿವರ್ಷ ವಲಸೆ ಬರುತ್ತವೆ. ಒಣಗುಡ್ಡೆಗಳಂತಹ ಆ ದ್ವೀಪಗಳಲ್ಲಿ ಗಿಡಮರಗಳಿಲ್ಲ, ಗರಿಕೆ ಬೆಳೆಯುವುದಿಲ್ಲ, ಎಲೆ, ಕಡ್ಡಿಗಳೂ ಸಿಗುವುದಿಲ್ಲ. ಹಕ್ಕಿಗಳು ತಮ್ಮ ತುಪ್ಪಳ ಮತ್ತು ಪಿಷ್ಟೆಯಲ್ಲೇ ಮೆತ್ತನೆ ಗೂಡು ಕಟ್ಟುತ್ತವೆ. ಮರಿಗಳ ಹಾರಿಸಿಕೊಂಡು ಹೋಗುವವರೆಗೆ ಕೆಲ ತಿಂಗಳು ಅಲ್ಲೆ ತಂಗುತ್ತವೆ.

ಹೀಗೆ ಸಾವಿರಾರು ವರ್ಷಗಳಿಂದ ವರ್ಷವರ್ಷವೂ ಪದರು ಪದರುಗಳಲ್ಲಿ ಮಿಲಿಯಗಟ್ಟಲೆ ಹಕ್ಕಿಗಳ ಪಿಷ್ಟೆ, ಪುಚ್ಚ ಬಿದ್ದುಬಿದ್ದು ಆ ಪುಟ್ಟ ದ್ವೀಪಗಳು ಗೊಬ್ಬರದ ಗುಡ್ಡಗಳಾಗಿ ಪರಿವರ್ತನೆಗೊಂಡಿವೆ. ಪೆರುವಿನ ಬಳಿ ಕೆಲವು ದ್ವೀಪಗಳಂತೂ ೧೦೦–೧೫೦ ಅಡಿ ಆಳದವರೆಗೆ ಹಕ್ಕಿಯ ಹಿಕ್ಕೆ ಇರುವ ಅತ್ಯಂತ ಫಲವತ್ತಾದ ಗೊಬ್ಬರದ ಗುಡ್ಡಗಳಾಗಿ ರೂಪುಗೊಂಡಿವೆ. ಮಳೆಯೇ ಬರದ ಒಣ ಹವಾಮಾನವಾದ್ದರಿಂದ ಸಹಸ್ರಾರು ವರ್ಷಗಳಿಂದ ಸಂಗ್ರಹವಾದ ಗ್ವಾನೊದಲ್ಲಿ ೮–೧೬% ನೈಟ್ರೇಟ್ ಅಂಶ ಹಾಗೇ ಉಳಿದುಬಂದಿದೆ. ಅಷ್ಟೇ ಅಲ್ಲ, ಅದು 'ವಾಸನೆ'ಯನ್ನೂ ಕಳೆದುಕೊಂಡ ಗೊಬ್ಬರವಾಗಿದೆ.




**'ಅತ್ಯಧಿಕ ಇಳುವರಿ ಬೇಕೆ ? ಗ್ವಾನೊ ಬಳಸಿ...'**

ಕಡಲ ಹಕ್ಕಿಗಳ ಹಿಕ್ಕೆ ಗೊಬ್ಬರ ಕುರಿತು ಸ್ಪಾನಿಶ್ ಆಕ್ರಮಣಕಾರರು ಪೆರುವಿಯನ್ನರಿಂದ ತಿಳಿದುಕೊಂಡರು. ಆ್ಯಲೆಗ್ಸಾಂಡರ್ ಹಂಬೋಲ್ಟ್ ಎಂಬ ಯೂರೋಪಿಯನ್ ಭೂಗೋಳಶಾಸ್ತ್ರಜ್ಞ ಗ್ವಾನೊ ಬಳಕೆ ಬಗೆಗೆ ವಿಸ್ತೃತವಾಗಿ ಅಧ್ಯಯನ ನಡೆಸಿ ಬರೆದರು. ೧೮೦೨ರ ಬಳಿಕ ಗ್ವಾನೊ ವ್ಯಾಪಾರದ ಭರಾಟೆ ಶುರುವಾಯಿತು. ಸ್ಪೇನಿನಿಂದ ಸ್ವತಂತ್ರವಾದ ಮೇಲೆ ಪೆರು ೧೮೨೦–೨೫ರ ನಡುವೆ ತನ್ನ ಮೊದಲ ಹಡಗು ತುಂಬ ಗ್ವಾನೊ ಸರಕನ್ನು ಬ್ರಿಟನಿಗೆ ರಫ್ತು ಮಾಡಿತು. ಬ್ರಿಟನ್ನಿನ ಕಂಪನಿಯೊಂದು ದಲ್ಲಾಳಿಯಾದ ಮೇಲೆ ಗ್ವಾನೊ ಅದೃಷ್ಟ ಖುಲಾಯಿಸಿತು.

ಹತ್ತಿ, ಮೆಕ್ಕೆಜೋಳ ಬೆಳೆಗೆ ಗ್ವಾನೊ ಅತ್ಯುತ್ತಮ ಎಂಬ ಜಾಹೀರಾತು ಎಲ್ಲೆಲ್ಲೂ ಕಂಡುಬಂತು. ಗ್ವಾನೊ ಹಕ್ಕಿಗಳ ಹಿಕ್ಕೆಯಲ್ಲಿ ಎಷ್ಟು ನೈಟ್ರೊಜನ್ ಇದೆಯೆಂದರೆ ಸ್ಫೋಟಕಗಳನ್ನು ತಯಾರಿಸಬಹುದು ಎಂಬ ಜನಪ್ರಿಯ ನಂಬಿಕೆ ಚಾಲ್ತಿಗೆ ಬಂತು. ೧೮೪೦ರಿಂದ ೧೮೮೦ರ ನಡುವೆ ೪೦ ವರ್ಷಗಳಲ್ಲಿ ೨೦ ಮಿಲಿಯನ್ ಟನ್ ಗ್ವಾನೊ ಮಾರಾಟವಾಯಿತು. ಹೆಚ್ಚಿನದು ಬ್ರಿಟನ್ನಿಗೇ ಹೋಯಿತು. ೧೮೫೮ನೇ ಇಸವಿ ಒಂದರಲ್ಲೇ ಬ್ರಿಟನ್ ೩ ಲಕ್ಷ ಟನ್ ಗ್ವಾನೊ ಖರೀದಿಸಿತು. ಬೇಡಿಕೆ ಹೆಚ್ಚುತ್ತ ಹೋದಂತೆ ಚಿಂಚಾ ಮತ್ತಿತರ ದ್ವೀಪಗಳಿಂದ ಹಕ್ಕಿಹಿಕ್ಕೆಭರಿತ ಮಣ್ಣು, ಗೊಬ್ಬರದ ರಫ್ತು ವಹಿವಾಟು ಹಿಂದೆಂದೂ ಇಲ್ಲದ ವೇಗದಲ್ಲಿ ನಡೆಯಿತು. ೧೮೪೯ರಲ್ಲಿ ೭೯ ಜನ ಮೊದಲ ಚೀನೀ ಕೆಲಸಗಾರರು ಗೊಬ್ಬರ ಗಣಿಗಾರಿಕೆಗೆಂದೇ ಪೆರುವಿಗೆ ವಲಸೆ ಬಂದರು. ಮುಂದಿನ ಕಾಲು ಶತಮಾನದಲ್ಲಿ ಒಂದು ಲಕ್ಷ ಚೀನೀ ಕೆಲಸಗಾರರು ಗ್ವಾನೊ ತೆಗೆಯುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಪೆರುವಿನ ಕಾಡುಗಳಲ್ಲಿ, ಪರ್ವತ–ಗಣಿಗಳಲ್ಲಿ ಸಾವಿರಾರು ಮೈಲು ರೈಲು ಮಾರ್ಗ ಹಾಕಲಾಯಿತು. ಆ ರೈಲು ಮಾರ್ಗಗಳು ಚಿನ್ನ, ಬೆಳ್ಳಿ, ತವರ, ರಬ್ಬರ್ ಹಾಗೂ ಗ್ವಾನೊಗಳನ್ನು ಸಾಗಿಸುವ ಉದ್ದೇಶದಿಂದ ರೂಪುಗೊಂಡವು.

ಪೆರು ತನ್ನ ಭಾರೀ ಅಂತರರಾಷ್ಟ್ರೀಯ ಸಾಲ ತೀರಿಸಿಕೊಂಡಿತು. ಆರ್ಥಿಕತೆ ಉಚ್ಛ್ರಾಯ ಸ್ಥಿತಿ ಮುಟ್ಟಿತು. ಗೊಬ್ಬರದಿಂದ ಗಳಿಸಿದ ಲಾಭ ಎರಡು ಬಿಲಿಯನ್ ಡಾಲರ್ ದಾಟಿತು !

ಲಾಭದ ಆಸೆಗೆ ಬಿದ್ದು ೧೮೫೬ರಲ್ಲಿ ಅಮೆರಿಕ (ಯುಎಸ್ಎ) ಗ್ವಾನೊ ಕಾಯ್ದೆ ಜಾರಿಗೆ ತಂದಿತು. ಅದರ ಪ್ರಕಾರ ಪೆಸಿಫಿಕ್ ಮಹಾಸಾಗರದಲ್ಲಿ ಮಾನವ ವಸತಿಯಿಲ್ಲದ ಯಾವುದೇ ನಿರ್ಜನ ದ್ವೀಪದಲ್ಲಿ ಅಮೆರಿಕದ ಪ್ರಜೆ ಗ್ವಾನೊ ಸಂಗ್ರಹವನ್ನು ಕಂಡುಹಿಡಿದರೆ ಅವರಿಗೆ ಆ ಗ್ವಾನೊ ಮೇಲೆ ಸಂಪೂರ್ಣ ಸ್ವಾಮ್ಯವಿರುತ್ತದೆ ಹಾಗೂ ಆ ದ್ವೀಪ ಅಮೆರಿಕಕ್ಕೆ ಸೇರುತ್ತದೆ ! ಯಾರದೂ ಅಲ್ಲದ ನೆಲದ ಹಕ್ಕುಗಳನ್ನು ಅಮೆರಿಕವು ತನಗೆ ತಾನೇ ಕೊಟ್ಟುಕೊಂಡ ಕಾಯ್ದೆ ಅದು. ಅಂತಹ ೬೦ಕ್ಕೂ ಹೆಚ್ಚು ದ್ವೀಪಗಳು ಪತ್ತೆಯಾಗಿ ಅಮೆರಿಕಕ್ಕೆ ಸೇರಿದವು. ಈಗಲೂ ೯ ದ್ವೀಪಗಳು ಅಮೆರಿಕದ ಸುಪರ್ದಿನಲ್ಲೇ ಇವೆ.

ಗ್ವಾನೊ ದ್ವೀಪಗಳ ಆಧಿಪತ್ಯಕ್ಕಾಗಿ ಸಾಲುಸಾಲು ಯುದ್ಧಗಳೇ ನಡೆದವು. ೧೮೬೪–೬೬ರಲ್ಲಿ ಸ್ಪೇನ್ ಹಾಗೂ ಚಿಲಿ ದೇಶಗಳು ಒಟ್ಟಾಗಿ ಪೆರು ಮಿತ್ರಪಡೆಗಳ ಮೇಲೆ ಯುದ್ಧಕ್ಕೆ ಹೋದವು. ಚಿಂಚಾ ದ್ವೀಪದಲ್ಲಿ ಯುದ್ಧವಾಗಿ ಪೆರು ಚಿಲಿಗೆ ಸೋತಿತು. ಅರ್ಧಕ್ಕರ್ಧ ಗ್ವಾನೊ ದ್ವೀಪಗಳು, ಅಟಕಾಮಾದ ಒಂದಷ್ಟು ಭಾಗ ಚಿಲಿಯ ಪಾಲಾಯಿತು. ಚಿಲಿ ಬರಿಯ ಗ್ವಾನೊ ಮಾರಾಟದ ಲಾಭದಿಂದ ೩೦ ವರ್ಷಗಳಲ್ಲಿ ತನ್ನ ಖಜಾನೆಯನ್ನು ಶೇಕಡ ೯೦೦ರಷ್ಟು ಹೆಚ್ಚಿಸಿಕೊಂಡಿತು. ೧೮೭೦ರ ವೇಳೆಗೆ ಸಾಲ್ಟ್ ಪೀಟರ್ ಎಂಬ ನೈಟ್ರೇಟ್ ಕಚ್ಚಾವಸ್ತು ಅಟಕಾಮಾ ಮರುಭೂಮಿಯಲ್ಲಿ ಲಭ್ಯವಿದೆ ಎಂದು ತಿಳಿದಾಗ ಗ್ವಾನೊ ಬೇಡಿಕೆಯ ಒತ್ತಡ ಕೊಂಚ ಕಡಿಮೆಯಾಯಿತು. ಪೆರು ಇದ್ದಕ್ಕಿದ್ದಂತೆ ಕಡಿಮೆಯಾದ ಆದಾಯ ತುಂಬಿಸಲು ಗ್ವಾನೊವನ್ನು ಬಳಿದು ಬಾಚಿ ಫ್ರಾನ್ಸಿಗೆ ಮಾರಿತು.

೧೯೧೦ರ ಹೊತ್ತಿಗೆ ಸಾವಿರಾರು ವರ್ಷಗಳಿಂದ ಸಂಗ್ರಹವಾಗಿದ್ದ ಗ್ವಾನೊ ಖಾಲಿಯಾಯಿತು !

ಇಳಿಯುತ್ತಿರುವ ಸಂಗ್ರಹ, ಏರುತ್ತಿರುವ ಬೆಲೆಯಿಂದ ಎಚ್ಚೆತ್ತ ಯೂರೋಪ್‌ಗೆ ಪರ್ಯಾಯ ತಯಾರಿಕಾ ವಿಧಾನ ಅಭಿವೃದ್ಧಿಪಡಿಸದೆ ಬೇರೆ ಮಾರ್ಗವಿರಲಿಲ್ಲ. ಅದು ಕೈಗಾರಿಕಾ ಕ್ರಾಂತಿಯ ಕಾಲ. ಫ್ರಿಟ್ಜ್ ಹೇಬರ್ ಎಂಬ ಯುವ ವಿಜ್ಞಾನಿ ವಾತಾವರಣದಲ್ಲಿದ್ದ ನೈಟ್ರೊಜನ್ (ಸಾರಜನಕ) ಅನ್ನು ಸಂಗ್ರಹಿಸಬಹುದೆಂದು ತೋರಿಸಿದ. ಅವನ ಜೊತೆಗೆ ಬಾಶ್ ಎಂಬ ವಿಜ್ಞಾನಿಯೂ ಸೇರಿ ೧೯೦೯ರಲ್ಲಿ 'ಹೇಬರ್ ಬಾಶ್ ಪ್ರೋಸೆಸ್' ಅಭಿವೃದ್ಧಿಪಡಿಸಿ ಗಾಳಿಯ ಸಾರಜನಕ ಸಂಗ್ರಹಿಸುವ ವಿಧಾನ ರೂಪಿಸಿದರು. ಇದು ಚಂದ್ರನ ಮೇಲೆ ಮಾನವ ಇಳಿದಷ್ಟೇ ಪ್ರಾಮುಖ್ಯತೆಯ, 'ಗಾಳಿಯಿಂದ ಬ್ರೆಡ್ಡನ್ನು ಉತ್ಪತ್ತಿ ಮಾಡುವಷ್ಟೆ' ಅಚ್ಚರಿಯ ಒಂದು ಸಂಶೋಧನೆ ಎಂದು ಬಣ್ಣಿಸಲಾಗಿದೆ. ಯಾಕೆಂದರೆ ಆಗ ಜಗತ್ತು ಗೊಬ್ಬರಕ್ಕಾಗಿ ಹಸಿದಿತ್ತು, ಅದಕ್ಕಾಗಿ ಯುದ್ಧಗಳೇ ನಡೆದಿದ್ದವು. ಹೀಗಿರುತ್ತ ನೈಟ್ರೊಜನ್ ತಯಾರಿ ಸಾಧ್ಯವಾದಾಗ ಜರ್ಮನಿ ಅಮೋನಿಯಾ ತಯಾರಿಸುವ ವಿಧಾನ ಕಂಡುಕೊಂಡರೆ, ಬ್ರಿಟನ್ ಸೂಪರ್ ಫಾಸ್ಫೇಟ್ ಉತ್ಪಾದಿಸುವ ವಿಧಾನ ಸಂಶೋಧಿಸಿತು. ರಸಗೊಬ್ಬರಕ್ಕಾಗಿ ಹಾಗೂ ಸ್ಫೋಟಕಕ್ಕಾಗಿ ನೈಟ್ರೇಟ್ ತಯಾರಿಸುವ ಕಚ್ಚಾವಸ್ತುವಿನ ಭಂಡಾರದ ಹೆಬ್ಬಾಗಿಲು ತೆರೆಯಿತು. ಜಗತ್ತಿನ ಮೂರನೇ ಒಂದು ಭಾಗ ಜನರ ಹೊಟ್ಟೆ ತುಂಬಿಸಲು ಸಾಧ್ಯ ಮಾಡಿದೆ ಎಂದು ನಂಬಲಾದ ನೈಟ್ರೇಟ್ ರಸಗೊಬ್ಬರ ತಯಾರಿ ಶುರುವಾಯಿತು.

ಆ ಹೊತ್ತಿಗೆ ದ್ವೀಪಗಳ ಗ್ವಾನೊ ಬರಿದಾಗತೊಡಗಿತ್ತು. ಅದು ಬರಿಯ ಗೊಬ್ಬರವಾಗಿರಲಿಲ್ಲ; ಆ ದ್ವೀಪಗಳ ಸಾವಿರಾರು ವರ್ಷಗಳ ಇತಿಹಾಸದ ದಾಖಲೆಯಾಗಿತ್ತು. ಎಷ್ಟೋ ಅಕಶೇರುಕ ಜೀವಿಗಳಿಗೆ ಬಾವಲಿ ಹಿಕ್ಕೆಯೇ ಮುಖ್ಯ ಆಹಾರವಾಗಿತ್ತು. ಗ್ವಾನೊ ಗಣಿಗಾರಿಕೆ ನಡೆದಲ್ಲೆಲ್ಲ ಬಾವಲಿಗಳ ಸಂಖ್ಯೆ ಕ್ಷೀಣಿಸಿತು. ಗಣಿಗಾರಿಕೆಯ ಸದ್ದಿಗೆ ಅವು ಉಣ್ಣಲು ಮರೆತವು. ಆತಂಕಕ್ಕೆ ಸುಮ್ಮನೆ ಹಿಕ್ಕೆ ಉದುರಿಸಿದವು. ಶಬ್ದವೇ ಅವುಗಳ ಸಾವಿಗೆ ಕಾರಣವಾಯಿತು.

ಅತಿ ಮೀನುಗಾರಿಕೆ ಮತ್ಸ್ಯಕ್ಷಾಮಕ್ಕೆ ನಾಂದಿ ಹಾಡಿ ವಲಸೆ ಬರುವ ಹಕ್ಕಿಗಳ



ಸಂಖ್ಯೆಯೂ ಗಮನಾರ್ಹವಾಗಿ ಇಳಿಮುಖವಾಯಿತು. ೧೯೫೦ರ ವೇಳೆಗೆ ೩೦ ಮಿಲಿಯನ್ ಕಡಲ ಹಕ್ಕಿಗಳು ಪೆರು ತೀರಕ್ಕೆ ಬರುತ್ತಿದ್ದರೆ ಈಗ ಅವುಗಳ ಸಂಖ್ಯೆ ೪ ಮಿಲಿಯನ್‌ಗೆ ಇಳಿದಿದೆ. ಈಗ ಗ್ವಾನೊ ಸ್ಥಳೀಯ ಬಳಕೆಗಷ್ಟೆ ಸೀಮಿತವಾಗಿದೆ. ಪೆರು ಸರ್ಕಾರ ಗ್ವಾನೊ ದ್ವೀಪಗಳಿಂದ ಗಣಿಗಾರಿಕೆಯನ್ನು ಕಟ್ಟುನಿಟ್ಟಾಗಿ ನಿರ್ಬಂಧಿಸಿ ಬೇಲಿ ಹಾಕಿ ಕಾಯುತ್ತಿದೆ. ಏನಾದರೂ ಬಳಿದು ಬಾಚಿ ಬರಿದಾಗಿಸಿದ ಸಾವಿರಾರು ವರ್ಷಗಳ ಸಂಗ್ರಹ ಮತ್ತೆ ಮುಂಚಿನಂತಾಗಲು ಸಾಧ್ಯವೇ ?

ನಿಸರ್ಗ ಮತ್ತು ನಾಗರಿಕತೆ ಪರಸ್ಪರ ಸಹಬಾಳ್ವೆಯಿಂದ ಬಾಳಿದರೆ ಮಾತ್ರ ಪೂರಕವಾದಾವು. ಆಗ ಮಾತ್ರ ಮನುಷ್ಯರಿಗೆ ಸುಸ್ಥಿರ ಬದುಕು ಸಾಧ್ಯವಾಗಬಹುದು. ಕಡಲ ಒಳ ಹರಿವು ಮೀನುಗಳ ಬೆಳೆಸಬಲ್ಲುದು. ಮೀನು ಹಕ್ಕಿಯ ಹೊಟ್ಟೆ ತುಂಬಿಸಬಲ್ಲುದು. ಹಕ್ಕಿ ತನ್ನ ಪಿಷ್ಟೆಯಿಂದ ನೆಲದ ಸಾರ ಹೆಚ್ಚಿಸಿ ಮನುಷ್ಯನ ಹೊಟ್ಟೆ ತುಂಬಿಸಬಲ್ಲುದು.

ಈ ಸರಪಳಿಯನ್ನು ಎಲ್ಲೇ ಭಂಗಗೊಳಿಸಿದರೂ ಅದು ಅನೂಹ್ಯ ಅಪಾಯಗಳಿಗೆಡೆ ಮಾಡಿಕೊಡಬಹುದು. ನಾವೀಗ ಅಂಥ ಅಸಂಖ್ಯ ಅಪಾಯಗಳಿಗೆ ಸಾಕ್ಷಿಯಾಗಿದ್ದೇವೆ. ಇನ್ನಾದರೂ ಪಾಠ ಕಲಿಯದಿದ್ದರೆ ನಮಗೆ ಮತ್ತೊಂದು ಕೊನೆಯ ಅವಕಾಶ ಸಿಗಬಹುದೆ ?

* * *

ಪೆರುವಿನ ರೈತರು ಆತ್ಮಹತ್ಯೆಗೆಳಸುವರೆ ಎಂಬ ನಮ್ಮ ಪ್ರಶ್ನೆಗೆ ಉತ್ತರ ಸಿಕ್ಕಿರಲಿಲ್ಲ. ಗೈಡ್ ಅದಕ್ಕೆ ವ್ಯಂಗ್ಯವಾಗಿ ಉತ್ತರಿಸಿದ. 'ಪೆರುವಿನ ರೈತರು ಬೇರೆ ರೀತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಕಾಫಿಗೆ ಬೆಲೆ ಇಲ್ಲ. ಆಲೂಗೆ ಬೆಲೆ ಇಲ್ಲ, ಅಸ್ಪ್ಯಾರಗಸ್ ಬೆಳೆ, ಬೆಲೆ, ಸಾಲುವುದಿಲ್ಲ. ಏನು ಮಾಡುವುದು ? ಆಗವರು ಕೋಕಾ ಬೆಳೆದರು. ಉಳಿದವೆಲ್ಲ ಕೈ ಕೊಟ್ಟಾಗ ಕಾಸಿಗಾಗಿ ಕಾನೂನುಬಾಹಿರ ಮಾದಕದ್ರವ್ಯ ಕೋಕಾ ಬೆಳೆದರು. ನಿಮಗೆ ಗೊತ್ತೆ ? ೧೯೯೫ರಲ್ಲಿ ವಿಶ್ವದ ನಂಬರ್ ೧ ಕೋಕಾ ಬೆಳೆವ ದೇಶ ಪೆರು ಆಗಿತ್ತು ! ಜಗತ್ತಿನ ೬೦% ಕೊಕೇನ್, ಕೋಕಾ ಬೆಳೆ ಪೆರುವಿನಲ್ಲೆ ಬೆಳೆಯಲಾಗುತ್ತಿತ್ತು. ೨ ಲಕ್ಷ ಪೆರು ಕುಟುಂಬಗಳು, ೧೦ ಲಕ್ಷ ರೈತರು ತಮ್ಮ ಜೀವನಾಧಾರವಾಗಿ ಅದೊಂದೇ ಬೆಳೆಯನ್ನು ನಂಬಿದ್ದರು. ಅದನ್ನು ತಡೆಯಲು ಸರ್ಕಾರ ಮಾದಕ ದ್ರವ್ಯ ತುಂಬಿದ ವಿಮಾನಗಳನ್ನು ಹೊಡೆದುರುಳಿಸಬೇಕಾಯ್ತು. ಹತಾಶರಾದವರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಕೋಕಾ ಬೆಳೆಯುವುದು ಅದಕ್ಕಿಂತ ಭಿನ್ನವೆ ? ನಿಮ್ಮ ಮಕ್ಕಳನ್ನು ಮಾದಕ ವಸ್ತು ಜಾಲ ತನ್ನ ಭಾಗವಾಗಿಸಿಕೊಂಡರೆ, ನಿಮ್ಮ ಮಗಳನ್ನು ಮಾದಕ ವಸ್ತು ಕಳ್ಳಸಾಗಣೆದಾರರು ಎತ್ತೊಯ್ದು ಅಪಹರಿಸುವುದಾದರೆ, ಆದರೂ ನೀವು ಕೋಕಾ ಬೆಳೆಯುವಿರಾದರೆ ಅದು ಆತ್ಮಹತ್ಯೆಯಲ್ಲವೆ ? ಇರಲಿ, ನಮ್ಮ ರೈತರು ಪ್ರಾಣ ತೆಗೆದುಕೊಳ್ಳುವವರಲ್ಲ. ಅದರಲ್ಲೂ ಗೊಬ್ಬರ, ಬೀಜಕ್ಕೆ ಎಂದೂ ಇಲ್ಲ. ಗ್ವಾನೊ ಅಂತೂ ಇದ್ದೇ ಇದೆ. ಈಗ ರಾಸಾಯನಿಕ ಗೊಬ್ಬರವೂ ಬಂದಿದೆ' ಎಂದ.

ಪೆರುವಿನಲ್ಲಿ ಮಿಲಿಟರಿ ಆಡಳಿತವಿದ್ದಾಗ ಕೋಕಾ ಬೆಳೆಯುವುದನ್ನು ಕಡಿಮೆ ಮಾಡಲು ಹಲವು ಕ್ರಮಗಳನ್ನು ತೆಗೆದುಕೊಳ್ಳಲಾಯ್ತು. ಒಂದಷ್ಟು ಭ್ರಷ್ಟತೆ, ಒಂದಷ್ಟು ಯಶಸ್ಸು.

ಪೆರುವಿನಲ್ಲಿ ೭೨% ರೈತರು ೬ ಹೆಕ್ಟೇರಿಗಿಂತ ಕಡಿಮೆ ಕೃಷಿ ಭೂಮಿ ಉಳ್ಳವರು, ಸಣ್ಣ ರೈತರೆಂದು ಕರೆಸಿಕೊಂಡವರು. ಇನ್ನೂ ಹಳೆಯ ಕೃಷಿ ವಿಧಾನಗಳನ್ನೇ ನೆಚ್ಚಿಕೊಂಡು ಉಳುಮೆ ಮಾಡುವವರು. ಕಿವಿಚ, ಕಿನುಅ, ಕೈಹುಅ, ಲೀಮಾ ಬೀನ್, ತಾರ್‍ವಿ ಮೊದಲಾದ ತಮ್ಮ ದೇಶದ್ದೇ ಆದ ಆಹಾರ ಧಾನ್ಯ ಬೆಳೆಯುವವರು. ಆದರೆ ಈಗ ಅಲ್ಲಿ ಕೃಷಿಯತ್ತ ಒಲವು ಕಡಿಮೆಯಾಗುತ್ತಿದೆ. ಕೃಷಿ ಲಾಭಕರವಲ್ಲ ಎನಿಸಿ ಯುವಸಮೂಹ ನಗರಗಳಿಗೆ ವಲಸೆಹೋಗುತ್ತಿದೆ. ಸಣ್ಣರೈತರು ಗಣಿ ಕೆಲಸಗಳಿಗೆ ಹೊರಡುತ್ತಿದ್ದಾರೆ. ಗ್ರಾಮೀಣ ಪೆರುವಿನ ಜನಸಂಖ್ಯೆ ಬರಿಯ ೨೩% ಎನ್ನುವುದನ್ನು ಗಮನಿಸಿದರೆ ಕೃಷಿಗೆ ಕಡಿಮೆಯಾಗುತ್ತಿರುವ ಒಲವು ತಿಳಿದುಬರುತ್ತದೆ.

ಎಲ್ಲೋ ಒತ್ತಿದರೆ ಇನ್ನೆಲ್ಲೋ ಸುರಿಯುತ್ತದೆ. ಎಲ್ಲೋ ಚುಚ್ಚಿದರೆ ಇನ್ನೆಲ್ಲೋ ಗಾಯವಾಗುತ್ತದೆ. ಎಂಥ ಸಂಕೀರ್ಣ ಸಮಾಜದಲ್ಲಿ, ಎಂಥ ಸಂಕೀರ್ಣ ಕಾಲದಲ್ಲಿ ನಾವು ಬದುಕಿದ್ದೇವೆ ! ನಿಜ, ವಿಶ್ವಸಂಸ್ಥೆಯ ಪರಿಸರ ದಿನಾಚರಣೆ – ೨೦೧೭ರ ಘೋಷವಾಕ್ಯ, 'ಜನರನ್ನು ನಿಸರ್ಗದೊಡನೆ ಬೆಸೆಯುವುದು' ಬರಿಯ ಘೋಷಣೆಯಾಗದೆ ನಮ್ಮ ಬದುಕೇ ಆಗಬೇಕಾದ ದಿನ ಹತ್ತಿರ ಬಂದಿದೆ.

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

## ಸುದ್ದಿ ಚಿತ್ರ



ಮಂಗಳೂರಿನ ಬಲಂ ಭಟ್ ಹಾಲ್‌ನಲ್ಲಿ 'ಹಲಸು ಹಬ್ಬ'ದ ಸಂದರ್ಭದಲ್ಲಿ ನವಕರ್ನಾಟಕ ಪ್ರಕಟಿಸಿರುವ 'ಕೃಷಿ ವಿಜ್ಞಾನ' ಕೃತಿಯನ್ನು ಜೂನ್ ೧೧, ೨೦೧೭ರಂದು 'ಅಡಿಕೆ ಪತ್ರಿಕೆ'ಯ ಕಾರ್ಯನಿರ್ವಾಹಕ ಸಂಪಾದಕರಾದ ಶ್ರೀ ಪಡ್ರೆ ಅವರು ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಕೃತಿಯ ಸಹ ಲೇಖಕ ಅಡ್ಡೂರು ಕೃಷ್ಣರಾವ್ ಉಪಸ್ಥಿತರಿದ್ದರು.







**ಬಿರು ಬಿಸಿಲೊಳಗಣ ಕನ್ನಡದ ಹಾದಿ**

ನಿಷ್ಠಿ ರುದ್ರಪ್ಪ

**ಪುಟ : xii + ೧೬೪**

**ಬೆಲೆ : ರೂ. ೧೦೦**

**ಗೌತಮ್ ಬುಕ್ ಹೌಸ್,** ಕಮಲಾಪುರ, ಹೊಸಪೇಟೆ ತಾಲೂಕು – ೫೮೩ ೨೨೬, ಬಳ್ಳಾರಿ ಜಿಲ್ಲೆ, ಕರ್ನಾಟಕ

*ಇಂಗ್ಲಿಷ್ ವ್ಯಾಮೋಹದಿಂದಾಗಿ ಕನ್ನಡ ಭಾಷೆಯು ಇಂದು ಮೂಲೆ ಸೇರುತ್ತಿರುವುದು ಸರ್ವವೇದ್ಯ ವಿಚಾರ ವಾಗಿದೆ. ಇಷ್ಟಲ್ಲದೆ ಕನ್ನಡವನ್ನು ಬರೆಯುವ ಶೈಲಿಯಲ್ಲೂ ಬಹಳಷ್ಟು ಮಾರ್ಪಾಡಾಗಿದೆ. ತಪ್ಪು ಉಚ್ಚಾರಣೆಗಳು ಜನರ ಬಾಯಲ್ಲಷ್ಟೇ ಅಲ್ಲ, ಕೃತಿಗಳಲ್ಲಿ, ಮಾಧ್ಯಮಗಳಲ್ಲೂ ಢಾಳಾಗಿ ಗೋಚರಿಸುತ್ತಿವೆ. ಇಂಥ ಸಂದರ್ಭದಲ್ಲಿ ಕನ್ನಡವನ್ನು ಉಳಿಸುವ ಬಗ್ಗೆ, ಕನ್ನಡ ಭಾಷೆ ನಡೆದುಬಂದ ದಾರಿಯ ಬಗ್ಗೆ, ಜನರಿಗೆ ತಿಳಿಸಿ ಹೇಳಿ ಕಾಳಜಿ ತೋರ ಬೇಕಾದ್ದು ತೀರ ಅವಶ್ಯ. ಇಂದು ಕನ್ನಡಕ್ಕಾಗಿ ಹೋರಾಡುವು ದೆಂದರೆ ಇತರ ಭಾಷೆಗಳನ್ನು ದ್ವೇಷಿಸುವುದೆಂಬ ಮಟ್ಟಕ್ಕೆ ಮನಸ್ಸುಗಳು ಪರಿವರ್ತಿತವಾದದ್ದು ದುರದೃಷ್ಟಕರ. ಇಲ್ಲಿನ ಲೇಖನಗಳು ಕನ್ನಡವನ್ನು ಉಳಿಸುವ ಬಗ್ಗೆ, ಹಿಂದಿನ ಹಿರಿಯರು ಗಡಿನಾಡಿನ ಇತರ ಎಲ್ಲ ಭಾಷೆಗಳನ್ನು ಗೌರವಿಸುತ್ತಲೇ ಕನ್ನಡವನ್ನು ಕಾಪಾಡಿಕೊಂಡ ಬಗ್ಗೆ, ಕನ್ನಡಕ್ಕಾಗಿ ಯಾರೆಲ್ಲ ಎಷ್ಟೆಷ್ಟು ಹೋರಾಟಗಳನ್ನು ಮಾಡಿದರೆಂದು ಮಾಹಿತಿ ನೀಡಿವೆ. ಕನ್ನಡದ ಅನೇಕ ಹಿರಿಯ ಸಾಹಿತಿಗಳು, ಕಲಾಕಾರರು, ಜಾನಪದ ವಿದ್ವಾಂಸರು, ಮಹಿಳಾ ಹೋರಾಟಗಾರರು – ಇವರನ್ನೆಲ್ಲ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ನೆಲ–ಜಲ–ಸಂಸ್ಕೃತಿ–ಸಾಹಿತ್ಯದ ಪ್ರಶ್ನೆ ಬಂದಾಗ ಎಲ್ಲ ಕನ್ನಡಿಗರೂ ಒಗ್ಗಟ್ಟಿನಿಂದಿದ್ದು ಕಟ್ಟಿ ಬೆಳೆಸಿದ ಕನ್ನಡ ಭಾಷೆಯನ್ನು ಉಳಿಸಿಕೊಳ್ಳುವ ಬಗ್ಗೆ ಕಾಳಜಿ ತೋರಿ ಬರೆದಿರುವ ಲೇಖನಗಳಿವು. ಒಟ್ಟಿನಲ್ಲಿ ಕನ್ನಡ ಪ್ರಜ್ಞೆಯನ್ನು ಜಾಗೃತಗೊಳಿಸಲು, ಕನ್ನಡಿಗರಿಗೇ ಕನ್ನಡ ಕಲಿಸಬೇಕಾದ ಇಂದಿನ ಸಾಮಾಜಿಕ ಸಂದರ್ಭದಲ್ಲಿ ಕನ್ನಡದ ಬಗ್ಗೆ ಪ್ರೀತಿ ಬೆಳೆಸಲು ಇವು ಸಹಕಾರಿಯಾಗಬಲ್ಲವು. ತೆಲುಗು–ಕನ್ನಡಿಗರ ಸೌಹಾರ್ದತೆಯ ಬಗೆಗೂ ಲೇಖನವಿದೆ.*

**ಸೃಜನಶೀಲ ಶಿಕ್ಷಣ** — *ಡಾ॥ ಮಹಾಬಲೇಶ್ವರ ರಾವ್*

**ಪುಟ : ೧೩೬** — **ಬೆಲೆ : ರೂ. ೧೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಸೃಜನಶೀಲತೆ ಎಂಬ ವಿಸ್ಮಯವೊಂದನ್ನು ಹತ್ತು ಹಲವು ದಿಕ್ಕುಗಳಲ್ಲಿ ಹರಿದಾಡಿಸಿ ಅದರ ಎಲ್ಲ ಮಗ್ಗುಲುಗಳನ್ನು ಬೆನ್ನಟ್ಟಿ ತೆರೆದು ತೋರಿಸಲಾಗಿದೆ. ಸೃಜಿಸುವುದು ಎಂಬ ಅದ್ಭುತ ಪ್ರತಿಭೆ ಎಲ್ಲರಲ್ಲೂ ಸುಪ್ತವಾಗಿದ್ದು ಎಳೆಯರಲ್ಲಿ ವಿಕಸಿತವಾಗುವ ಸಂದರ್ಭವನ್ನು ದಮನಿಸದೇ ಇದ್ದರೆ ಸಂಪೂರ್ಣವಾಗಿ ಅರಳುವುದು ನಿಶ್ಚಿತವೆಂಬುದು ಲೇಖಕರ ವಾದ. ಅಲ್ಲದೆ ನಮ್ಮ ಸಾಮಾಜಿಕ ಪರಿಸರ, ಶಾಲೆಯ ಉಸಿರುಕಟ್ಟಿಸುವ ಪಠ್ಯವ್ಯವಸ್ಥೆ, ಜಡ್ಡುಗಟ್ಟಿದ ನಿರ್ಧಾರಿತ ವಿದ್ಯಾಭ್ಯಾಸದ ಮುಂದುವರಿಕೆ, ಸ್ವಾತಂತ್ರ್ಯವಿಲ್ಲದ ಯುವ ಪ್ರತಿಭೆಗಳು ಮತ್ತು ಈಗಾಗಲೇ ಸ್ಥಾಪಿತ ಮೌಲ್ಯಗಳಿಗೆ ಜೋತುಬೀಳಬೇಕಾದ ಅನಿವಾರ್ಯತೆ... ಇಂಥ ಹತ್ತು ಹಲವು ವಿಷಯಗಳನ್ನು ವಿಶದವಾಗಿ ತೆರೆದಿಡಲಾಗಿದೆ. ನಮ್ಮಲ್ಲಿ ಶಿಕ್ಷಣವೆಂಬುದು ನೊಗಕ್ಕೆ ಕಟ್ಟಿದ ಜೋಡೆತ್ತುಗಳಂತೆ ಹೀಗೇ ಸಾಗಬೇಕೆಂಬ ಮತ್ತು ಇಂಥ ಪ್ರಶ್ನೆಗೆ ಇಂಥದೇ ಉತ್ತರವೆಂಬ, ಯೋಚಿಸಿ ಒಂದಕ್ಷರವೂ ಮಾತನಾಡಬಾರದೆಂಬ ಶಿಸ್ತಿಗೆ ಒಳಪಟ್ಟು ಅವನತಿಯತ್ತ ಸಾಗಿರುವುದು ಇಲ್ಲಿನ ಲೇಖನಗಳಿಂದ ಮನನವಾಗುತ್ತದೆ. ಕೇವಲ ರ್‍ಯಾಂಕ್‌ಗಳಿಗಾಗಿಯೇ ಓದುವುದು, ನೌಕರಿ, ಉನ್ನತ ಹುದ್ದೆಗಳಿಗಾಗಿಯೇ ವಿದ್ಯಾಭ್ಯಾಸ – ಡಿಗ್ರಿ ಗಳಿಸುವುದು ಈ ವ್ಯವಸ್ಥೆಯಿಂದಾಗಿ ಸೃಜನಶೀಲ ಪ್ರತಿಭೆಗಳೆಲ್ಲ ಮಂಕಾಗುತ್ತಿವೆ ಎಂಬುದೇ ಇಲ್ಲಿನ ಲೇಖನಗಳ ಸಾರ. ಸಿದ್ಧ ಮಾದರಿಯ ಉತ್ತರಗಳನ್ನೇ ಹೇಳಬೇಕಾದ ವಿದ್ಯಾರ್ಥಿಗೆ ಯೋಚಿಸಿ ಹಲವು ರೀತಿಯಲ್ಲಿ ಪ್ರಸ್ತುತಪಡಿಸುವ ಅವಕಾಶವನ್ನೇ ನಿರಾಕರಿಸುವ ಶಿಕ್ಷಣ ವ್ಯವಸ್ಥೆ ಸೃಜನಶೀಲತೆಗೆ ಮಾರಕ ಎಂಬುದು ಇಲ್ಲಿನ ಖಚಿತ ಧ್ವನಿ. ಏಕತಾನತೆಗೆ ಶಾಲೆಯ ಅಧ್ಯಾಪಕರು, ಮನೆಯಲ್ಲಿನ ಪೋಷಕರು, ಕೊನೆಗೆ ಸಮಾಜದ ಎಲ್ಲರೂ ಕಾರಣರಾಗುತ್ತಾರೆಂಬುದು ಆತಂಕದ ಮತ್ತು ಖೇದದ ವಿಚಾರ.*




**ಚಿಟ್ಟೆ** (ಕವಿತೆಗಳು) — ನಭಾ ಒಕ್ಕುಂದ

**ಪುಟ : ೧೬ + ೪೬** — **ಬೆಲೆ : ರೂ. ೬೦**

**ಚಿಲಿಪಿಲಿ ಪ್ರಕಾಶನ,** ೪ನೇ ಅಡ್ಡರಸ್ತೆ, ಶಿವಾನಂದನಗರ, ಧಾರವಾಡ – ೫೮೦ ೦೦೧

*ಸುತ್ತಲ ಪರಿಸರವನ್ನು ಎಳೆಯರು ಬೆರಗಿನಿಂದ ಅವಲೋಕಿಸುತ್ತಾರೆ. ಬಾಲ್ಯದಿಂದ ಹರೆಯಕ್ಕೆ ಜಿಗಿಯುವ ಹಂತದಲ್ಲಂತೂ ಕೆಲವರ ಕುತೂಹಲ ಕವಿತೆಗಳಾಗಿ ಮಾರ್ಪಡುತ್ತವೆ. ನೋಡಿದಲ್ಲೆಲ್ಲ ಸಹಜವಾಗಿ ಸಂಭ್ರಮ – ಉತ್ಸಾಹ ಉಕ್ಕಿ ಹರಿಯುವಾಗ, ರೂಪುಗೊಂಡ ತನ್ನ ಕವಿತೆಗಳಿಗೆ ತಾನೇ ಚಿತ್ರ ಬರೆದಾಗಿನ ಆ ಕ್ಷಣ ತುಂಬ ಆತ್ಮವಿಶ್ವಾಸ ಮೂಡಿಸುತ್ತದೆ. ಹೀಗೊಂದು ಕವನ ಸಂಕಲನ ಇಲ್ಲಿ 'ನಭಾ' ಎಂಬ ಎಳೆಯ ಕವಯಿತ್ರಿಯಿಂದ ಮೂಡಿಬಂದಿದೆ. ಇಲ್ಲಿನ ಪದ್ಯಗಳು ಸರಳವಾಗಿವೆ. ಆದರೆ ಅಲ್ಲಿನ ಕಲ್ಪನೆಗಳನ್ನು ತೀರ ಹಗುರವಾಗಿ ಪರಿಗಣಿಸುವಂತಿಲ್ಲ. ಅಲ್ಲಿವೆ ದೊಡ್ಡದೊಡ್ಡ ಬಯಕೆಗಳು ಹಾಗೂ ಜಾಣ್ಮೆ ತುಂಬಿದ ಸಾಲುಗಳು, ನಮ್ಮ ಹುಬ್ಬು ಮೇಲೇರುವಂತೆ ಮಾಡುವ ನುಡಿಗಳು. ಇಲ್ಲಿನ ಪದ್ಯಗಳಿಗೆ ನಿಸರ್ಗದಲ್ಲಿ ಕಾಣಬರುವ, ಮಕ್ಕಳಿಗೆ ಪ್ರಿಯವಾಗುವ ಅನೇಕ ವಸ್ತುಗಳಿವೆ. ಪುಟ್ಟಹಕ್ಕಿ ಗೂಡು ಕಟ್ಟುವುದರಿಂದ – ರೈತರ ಸಾವಿನವರೆಗೂ ಈ ಪುಟ್ಟ ಹುಡುಗಿಯ ಮನಸ್ಸು ಚಿಂತಿಸಿದೆ. ಇಂದಿನ ಅನೇಕ ಸನ್ನಿವೇಶಗಳು ಪುಟ್ಟ ಮಕ್ಕಳಿಗೆ ಮನಸ್ಸಂತೋಷಪಡಿಸುವ ಬದಲು ಭಯಗ್ರಸ್ತ ವಾತಾವರಣ ನಿರ್ಮಿಸುವುದನ್ನು ಇಲ್ಲಿ ಕಾಣಬಹುದು. ಕೆಟ್ಟದ್ದೆಲ್ಲ ಬೇಡ, ಒಳ್ಳೆಯ ದಿನಗಳು ಬರಲೆಂಬ ಆಶಾಭಾವನೆ ಈ ಪದ್ಯಗಳಲ್ಲಿ ಮೂಡಿದೆ. ಪುಟ್ಟ ವಯಸ್ಸಿನಲ್ಲೇ ಜಗತ್ತನ್ನು ಅರ್ಥೈಸಿಕೊಂಡು ಕೆಟ್ಟದ್ದಕ್ಕೆ ಮರುಗುವ, ಒಳ್ಳೆಯದಕ್ಕೆ ಸ್ಪಂದಿಸುವ ಪರಿ ಈಕೆಯನ್ನು ಉತ್ತಮ ಕವಿಯನ್ನಾಗಿಸುವ ಲಕ್ಷಣಗಳಿವೆ.*

**ಚಿವ್ ಚಿವ್ ಗುಬ್ಬಿ** (ಶಿಶು ಗೀತೆಗಳು) — ಎಸ್. ಮಂಜುನಾಥ

**ಪುಟ : ೪೮** — **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




*ಮಕ್ಕಳಿಗಾಗಿ ಪದ್ಯ ಬರೆಯುವುದು ಮಗುವಿನ ಮನಸ್ಸನ್ನರಿತವರಿಗೆ ಮಾತ್ರ ಸಾಧ್ಯ. ಸ್ವಲ್ಪ ಎಡವಿದರೂ ಪುಟಾಣಿಗಳ "ಯಾಕೆ, ಏನು, ಹೇಗೆ, ಎಲ್ಲಿ ?" ಎಂಬ ಪ್ರಶ್ನೆಗಳು ಬಾಣದಂತೆ ಬಂದೆರಗುತ್ತವೆ. ಮಕ್ಕಳಿಗೆ ಪ್ರಿಯವಾದ ಸಂಗತಿಗಳನ್ನು ತಳವನ್ನಾಗಿಟ್ಟುಕೊಂಡು, ಎದುರುನಿಲ್ಲುವ ಪ್ರಶ್ನೆಗಳನ್ನು ಮೊದಲೇ ಊಹಿಸಿಕೊಂಡು ಬರವಣಿಗೆಗೆ ತೊಡಗಬೇಕಾಗುತ್ತದೆ. ಪ್ರಾಸಗಳಿದ್ದರಂತೂ ಮಕ್ಕಳು ಕೇಕೆ ಹಾಕಿ ಕುಣಿಯುತ್ತಾರೆ. ಮಕ್ಕಳಿಗಾಗಿ ಬರೆದ ಇಲ್ಲಿನ ಕವಿತೆಗಳಲ್ಲಿ ಇಂಥ ಪ್ರಯತ್ನ ನಡೆದಿರುವುದು ಕಾಣುತ್ತದೆ. ಮೊದಲೇ ಕಾಗೆ, ಗುಬ್ಬಿ, ಅಳಿಲು, ಹಸುಗಳೆಂದರೆ ಪಂಚಪ್ರಾಣವಾಗಿರುವ ಮಕ್ಕಳಿಗೆ ಆ ಬಗೆಗಿನ ಕವಿತೆ ಚಿತ್ರಗಳೊಂದಿಗೆ ಒದಗಿಬಂದರೆ ಇನ್ನಷ್ಟು ಸಂಭ್ರಮವಾಗಿ ಅವುಗಳ ಬಗ್ಗೆ ಪ್ರೀತಿ ಉಂಟಾದೀತು. ಹೀಗಾಗಿ ಈ ಪದ್ಯಗಳು ಮಕ್ಕಳನ್ನು ಪರಿಸರ ಪ್ರೇಮಿಗಳನ್ನಾಗಿ ರೂಪಿಸುವಲ್ಲಿ ನೆರವಾಗಬಲ್ಲವು. ಇಲ್ಲಿ ಸರಾಗವಾಗಿ ಓದಿಸಿಕೊಂಡು ಹೋಗುವ ಗುಣ ಮತ್ತು ಹೊಸದನ್ನೇನಾದರೂ ತಿಳಿಸುವತ್ತ ಹೆಚ್ಚಿನ ಗಮನ ನೀಡಲಾಗಿದೆ. ಶ್ರೀ ಗುಜ್ಜಾರ್ ಅವರ ಚಿತ್ರಗಳಂತೂ ಬಲು ಆಕರ್ಷಕವಾಗಿದ್ದು ಕವಿತೆಗಳಿಗೆ ಸರಿಯಾಗಿ ಹೊಂದುತ್ತವೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

# ಎಸ್ ಎಮ್ ಎಸ್

ಮೂಲ : ಶ್ರೀ ಬಿನೋದ ಘೋಸಾಲ್

ಕನ್ನಡಕ್ಕೆ : ಡಾ॥ ಬಸವರಾಜ ಸಾದರ

ಎಸ್ ಎಮ್ ಎಸ್-೧ : ನಮಸ್ಕಾರ, ಶುಭ ಮುಂಜಾವು.

ಎಸ್ ಎಮ್ ಎಸ್-೨ : ನಿಮಗೂ ಶುಭ ಮುಂಜಾವು. ಆದರೆ, ಕ್ಷಮಿಸಿ, ನಿಮ್ಮ ನಂಬರ್ ನನ್ನ ಮೊಬೈಲ್‌ನಲ್ಲಿ (ಸೇವ್) ದಾಖಲಾಗಿಲ್ಲ. ಹೀಗಾಗಿ ನೀವಾರೆಂಬುದು ತಿಳೀತಾ ಇಲ್ಲ. ದಯವಿಟ್ಟು ನಿಮ್ಮ ಹೆಸರನ್ನು ಕಳಿಸ್ತೀರಾ ?

ಎಸ್ ಎಮ್ ಎಸ್-೧ : ನೀವು ನನ್ನನ್ನು ಗುರುತಿಸದೇ ಇರೋದು ಹೇಗೆ ಸಾಧ್ಯ? ನಾನು ಮಾತ್ರ ನಿಮ್ಮನ್ನು ಚೆನ್ನಾಗಿ ಬಲ್ಲೆ.

ಎಸ್ ಎಮ್ ಎಸ್-೨ : ಕ್ಷಮಿಸಿ, ನನಗೆ ಗೊತ್ತಾಗ್ತಾ ಇಲ್ಲ. ಯಾರು ನೀವು ?

ಎಸ್ ಎಮ್ ಎಸ್-೧ : ದಯವಿಟ್ಟು ಊಹೆ ಮಾಡಿ. ನೀವೂ ನನ್ನನ್ನು ಚೆನ್ನಾಗಿಯೇ ಬಲ್ಲಿರಿ.

ಎಸ್ ಎಮ್ ಎಸ್-೨ : ಇಲ್ಲ, ನನಗೆ ನಿಜವಾಗಿಯೂ ಗೊತ್ತಾಗ್ತಿಲ್ಲ. ಬಹುಶಃ ನೀವು ಬೇರೆ ಯಾವುದೋ ಬೇರೆ ತಪ್ಪು ಸಂಖ್ಯೆಗೆ ಈ ಸಂದೇಶ ಕಳಿಸಿರಬಹುದು.

ಎಸ್ ಎಮ್ ಎಸ್-೧ : ಸಾಧ್ಯವೇ ಇಲ್ಲ. ನಾನು ಸರಿಯಾದ ಸಂಖ್ಯೆಗೇ ಸಂದೇಶ ಕಳಿಸಿರುವೆ. ನಿಮ್ಮ ಹೆಸರು ಮಲ್ಲಿಕಾ ರಾಯ್ ಮತ್ತು ನಿಮ್ಮ ಕಿರು ಹೆಸರು ಟುಟು. ಹೌದು ತಾನೆ ?

ಎಸ್ ಎಮ್ ಎಸ್-೨ : ಹೌದು !! ಇನ್ನೊಂದಿಷ್ಟು ವಿವರವಾದ ಮಾಹಿತಿ ಕೊಡ್ತೀರಾ? ಅಂದಹಾಗೆ ನೀವು ಗಂಡೋ – ಹೆಣ್ಣೋ ?

ಎಸ್ ಎಮ್ ಎಸ್-೧ : ಗಂಡು. ನಿಮಗೆ ನಾನು ಇನ್ನೂ ಹೆಚ್ಚಿನ ಮಾಹಿತಿ ಕೊಡುತ್ತೇನೆ. ನಿಮ್ಮ ತಂದೆ ಬಂಗಾಲಿ ಸಾಹಿತ್ಯದ ಪ್ರೊಫೆಸರ್ ಆಗಿದ್ದಾರೆ. ತಾಯಿ ಬ್ಯಾಂಕೊಂದರಲ್ಲಿ ಕೆಲಸ ಮಾಡ್ತಿದ್ದಾರೆ.

ಎಸ್ ಎಮ್ ಎಸ್-೨ : ಅರೆ ! ನಿಜ !! ಆದರೂ ನೀವಾರೆಂಬುದು ನನಗೆ ಗೊತ್ತಾಗ್ತಾ ಇಲ್ಲ.

ಎಸ್ ಎಮ್ ಎಸ್-೧ : ಸರಿ. ನಿಮಗೆ ನಾನು ಕೆಲವು ಆಯ್ಕೆಗಳನ್ನು ಕೊಡುತ್ತೇನೆ. ಕ್ಷಮಿಸಿ, ನಾನು ಈ ಮೊದಲು ನಿಮ್ಮ ದೂರವಾಣಿ ಕರೆಯನ್ನು ಕಟ್ ಮಾಡಿಬಿಟ್ಟೆ. ಯಾಕೆಂದರೆ, ನನ್ನ ದನಿಯನ್ನು ಕೇಳದೇ ನೀವು ನನ್ನನ್ನು ಗುರುತಿಸಬೇಕೆಂಬುದು ನನ್ನ ಗಟ್ಟಿಯಾದ ಅಪೇಕ್ಷೆ.

ಎಸ್ ಎಮ್ ಎಸ್-೨ : ಛೇ, ಕ್ಷಮಿಸಿ. ಯಾಕೆ ಇದೆಲ್ಲಾ ? ನಿಮ್ಮ ಮಾತುಗಳಿಂದ ನನಗೆ ಬೋರ್ ಆಗ್ತಿದೆ.

ಎಸ್ ಎಮ್ ಎಸ್-೧ : ಯಾಕೆ ಅಂತೀರಾ ? ಬೇಕಾದರೆ ನೀವಿದನ್ನು ಒಂದು ಆಟವೆಂದು ತಿಳಿದುಕೊಳ್ಳಿ. ಹೇಗೂ ನೀವು ಕಂಪ್ಯೂಟರ್ ಎದುರು ತಾಸುಗಟ್ಟಲೆ ಕುಳಿತು ಕೆಟ್ಟ ಆಟಗಳನ್ನಾಡುತ್ತ ಅಥವಾ ನಿಮ್ಮ ಸ್ನೇಹಿತರೊಂದಿಗೆ ಮಾತಾಡುತ್ತ (ಚ್ಯಾಟ್ ಮಾಡುತ್ತ) ಸಮಯವನ್ನು ಕಳೆಯುತ್ತೀರಲ್ಲವೆ ?

ಎಸ್ ಎಮ್ ಎಸ್-೨ : ಹೌದು. ಆದರೆ ಅವರು ನಮಗೆ ಪರಿಚಯದವರಾಗಿರುತ್ತಾರೆ.

ಎಸ್ ಎಮ್ ಎಸ್-೧ : ನೀವು ನನ್ನನ್ನೂ ಬಲ್ಲಿರಿ; ಚೆನ್ನಾಗಿಯೇ ಬಲ್ಲಿರಿ. ಇಷ್ಟೇ, ನೀವು ಸರಿಯಾಗಿ ಊಹಿಸಬೇಕು ಮಾತ್ರ. ಇದು ಆಟವಲ್ಲವೇ ?

ಎಸ್ ಎಮ್ ಎಸ್-೨ : ಆಯ್ತು. ಹಾಗಿದ್ದರೆ ನನಗೆ ನೀವು ಇನ್ನಷ್ಟು ಆಯ್ಕೆಗಳನ್ನು ಕೊಡಿ ನೋಡೋಣ.

ಎಸ್ ಎಮ್ ಎಸ್-೧ : ಈಗ, ಅಂದ್ರೆ ಈ ಕ್ಷಣಕ್ಕೆ ನಿಮ್ಮ ವಯಸ್ಸು ಇಪ್ಪತ್ತೊಂದು ವರ್ಷ, ಮೂರು ತಿಂಗಳು, ಏಳು ದಿನ, ನಾಲ್ಕು ತಾಸು ಮತ್ತು ಹದಿನೇಳು ನಿಮಿಷಗಳು.

ಎಸ್ ಎಮ್ ಎಸ್-೨ : ಅರೆ, ಅಚ್ಚರಿ !! ಇದೆಲ್ಲ ನಿಮಗೆ ಹೇಗೆ ಗೊತ್ತು ?

ಎಸ್ ಎಮ್ ಎಸ್-೧ : ಆಯ್ಕೆ ಎರಡು. ನಿಮ್ಮ ಬಲಕಿವಿಯ ಕೆಳಗೆ, ಬಹಳ ವರ್ಷಗಳ ಹಿಂದೆ ಬೆಕ್ಕೊಂದು ಕಚ್ಚಿದ್ದರಿಂದ ಉಂಟಾದ ಆಳವಾದ ಗಾಯದ ಕಲೆಯಿದೆ. ನಿಮ್ಮ ಇಷ್ಟದ ಬಣ್ಣ ತಿಳಿಗುಲಾಬಿ. ನೀವು ಜೀನ್ಸ್ ಪ್ಯಾಂಟ್ ಹಾಗೂ ಟಾಪ್‌ಗಳನ್ನು ಇಷ್ಟಪಡ್ತೀರಿ. ನೀವು ಕುರಿ ಮಾಂಸ ತಿನ್ನುವುದಿಲ್ಲ. ಆದರೆ, ಪಿಜ್ಜಾ ಅಂದರೆ ನಿಮಗೆ ತುಂಬ ಇಷ್ಟ. ... ಇನ್ನೂ ಹೆಚ್ಚಿನ ಆಯ್ಕೆಗಳನ್ನು ಕೊಡಲೇ ?

ಎಸ್ ಎಮ್ ಎಸ್-೨ : ನನಗೆ ನಿಜವಾಗಿಯೂ ಆಶ್ಚರ್ಯವಾಗ್ತಿದೆ !! ಇದೆಲ್ಲ ನಿಮಗೆ ಹೇಗೆ ಗೊತ್ತು ?

ಎಸ್ ಎಮ್ ಎಸ್-೧ : ನಾನು ಹೇಳಲಿಲ್ಲವೆ, ನಮಗಿಬ್ಬರಿಗೂ ಚೆನ್ನಾಗಿ ಪರಿಚಯವಿದೆಯೆಂದು !!

ಎಸ್ ಎಮ್ ಎಸ್-೨ : ಒತ್ತಿ, ಒತ್ತಿ ನನ್ನ ಕೈಬೆರಳುಗಳು ನೋಯುತ್ತಿವೆ. ಇನ್ನು ನನಗೆ ಟೈಪ್ ಮಾಡಲು ಆಗುವುದಿಲ್ಲ. ನೀವು ನನ್ನ ಫೋನನ್ನಾದರೂ ತೆಗೆದುಕೊಳ್ಳಿ, ಇಲ್ಲವಾದರೆ ಈ ಆಟವನ್ನು ಇಲ್ಲಿಗೇ ನಿಲ್ಲಿಸಿಬಿಡಿ.

ಎಸ್ ಎಮ್ ಎಸ್-೧ : ಆಯ್ತು. ನಾನೇನೋ ಇದನ್ನು ನಿಲ್ಲಿಸ್ತೇನೆ. ಆದರೆ, ನೀವು ಈ ಆಟವನ್ನು ಇಷ್ಟೊಂದು ಸುಲಭವಾಗಿ ಬಿಟ್ಟುಕೊಡೋದೆ ? ಸಾಫ್ಟ್‌ವೇರ್ ತಂತ್ರಜ್ಞಾನ ಕ್ಷೇತ್ರದಲ್ಲಿ ವೃತ್ತಿ ಮಾಡುತ್ತಿರುವ ನಿಮ್ಮಂಥ ಜಾಣರಿಂದ ಇಂಥದನ್ನು ನಿರೀಕ್ಷೆ ಮಾಡಲಾಗದು !! ಹೇಳಿ-ಕೇಳಿ ನೀವು ತಂತ್ರಜ್ಞರಲ್ಲವೆ ?

ಎಸ್ ಎಮ್ ಎಸ್-೨ : ಓಹೋ; ನಿಮಗೆ ಇದೂ ಗೊತ್ತಿದೆಯೇ? ಸರಿ. ಹಾಗಿದ್ದರೆ ನಾನು ಇನ್ನೊಂದು ಅವಕಾಶವನ್ನು ತೆಗೆದುಕೊಳ್ಳುತ್ತೇನೆ. ನೀವು ನಿಮ್ಮ ವಿಳಾಸ ಹೇಳ್ತೀರಾ ?

ಎಸ್ ಎಮ್ ಎಸ್-೧ : ನಿಮ್ಮ ಮನೆಯ ಹತ್ತಿರವೆ.

ಎಸ್ ಎಮ್ ಎಸ್-೨ : ಅಂದರೆ ಎಷ್ಟು ದೂರ ?

ಎಸ್ ಎಮ್ ಎಸ್-೧ : ತುಂಬ ಹತ್ತಿರ. ನಾನಿರುವ ಜಾಗದಿಂದಲೇ ನಿಮ್ಮ ಮಲಗುವ ಕೋಣೆಯನ್ನು ನೋಡಬಹುದು. ನಿಮ್ಮ ಆ ಕೋಣೆ ಗುಲಾಬಿ ಬಣ್ಣದ್ದಾಗಿದೆ.

ಎಸ್ ಎಮ್ ಎಸ್–೨ : ಏನು ? ನೀವು ನನ್ನ ಮಲಗುವ ಕೋಣೆಯನ್ನೂ ಹಣಿಕಿಹಾಕಬಹುದೆ ?

ಎಸ್ ಎಮ್ ಎಸ್–೧ : ಛೇ, ನನಗೆ ಅದೇನೂ ಬೇಡ. ಆದ್ರೆ ನೀವು ಇಷ್ಟಪಟ್ಟರೆ, ನಾನು ನಿಮ್ಮ ಕೋಣೆಗೆ ಬರಬಹುದು.

ಎಸ್ ಎಮ್ ಎಸ್–೨ : ನೀವು ನಿಮ್ಮ ಮಾತುಗಳ ಮಿತಿಯನ್ನು ಮೀರುತ್ತಿದ್ದೀರಿ.

ಎಸ್ ಎಮ್ ಎಸ್–೧ : ಇಲ್ಲ; ಖಂಡಿತ ಹಾಗೇನಿಲ್ಲ. ನೀವು ನನ್ನನ್ನು ನಂಬಿರಿ.

ಎಸ್ ಎಮ್ ಎಸ್–೨ : ನಿಮ್ಮ ಅಂಚೆ ವಿಳಾಸವನ್ನು ಸಂದೇಶದ ಮೂಲಕ ಕಳಿಸ್ತೀರಾ?

ಎಸ್ ಎಮ್ ಎಸ್–೧ : ೧೩೪/೫, ಬಿ. ಸಿ. ರಸ್ತೆ, ಕೊಲ್ಕತ್ತ – ೭೦೦ ೧೧೮.

ಎಸ್ ಎಮ್ ಎಸ್–೨ : ನೀವು ತಮಾಷೆ ಮಾಡ್ತಿದ್ದೀರಾ ? ಇದು ನನ್ನ ಅಪಾರ್ಟ್‌ಮೆಂಟ್‌ನ ವಿಳಾಸ !!

ಎಸ್ ಎಮ್ ಎಸ್–೧ : ಇದು ನನ್ನದು ಕೂಡ.

ಎಸ್ ಎಮ್ ಎಸ್–೨ : ಯಾವ ಮಹಡಿ, ಹೇಳ್ತೀರಾ ?

ಎಸ್ ಎಮ್ ಎಸ್–೧ : ನಾಲ್ಕನೆಯ ಮಹಡಿ, ಫ್ಲ್ಯಾಟ್ ಸಂಖ್ಯೆ – ೪ಜಿ.

ಎಸ್ ಎಮ್ ಎಸ್–೨ : ಇದೇನು ಕುಚೇಷ್ಟೆ ನಿಮ್ಮದು !! ಇದು ನನ್ನ ಫ್ಲ್ಯಾಟ್ ಸಂಖ್ಯೆ.

ಎಸ್ ಎಮ್ ಎಸ್–೧ : ನನ್ನದೂ ಅದೇ...

ಎಸ್ ಎಮ್ ಎಸ್–೨ : ನೀವು ನನ್ನ ಸಮಯವನ್ನು ಹಾಳುಮಾಡ್ತಿದ್ದೀರಿ. ಊಹೂಂ ಸಾಧ್ಯವಿಲ್ಲ, ನಾನೀಗ ಈ ಆಟವನ್ನು ಇಲ್ಲಿಗೇ ನಿಲ್ಲಿಸುತ್ತೇನೆ.

ಎಸ್ ಎಮ್ ಎಸ್–೧ : ದಯವಿಟ್ಟು ಹಾಗೆ ಮಾತ್ರ ಮಾಡಬೇಡಿ. ಇವತ್ತು, ನಿಮ್ಮ ಕೋಣೆಯ ಪಕ್ಕದಲ್ಲಿ ವಾಸವಾಗಿರುವ ಸದ್ಗೃಹಸ್ಥರೊಬ್ಬರ ಜನ್ಮದಿನ ಇದೆಯಲ್ಲವೆ ? ಹೌದು ತಾನೆ ? ಹೇಳಿ, ಇವತ್ತು ಜುಲೈ ೧೫ನೆಯ ದಿನಾಂಕವಲ್ಲವೆ ?

ಎಸ್ ಎಮ್ ಎಸ್–೨ : ಓ ! ಓ !! ಅಪ್ಪಾ, ನೀವಾ ? ಛೇ... ಇದು ತುಂಬ ಅನ್ಯಾಯ. ಯಾಕೆ ನೀವು ಬೇರೊಂದು ಸಂಖ್ಯೆಯ ಮೂಲಕ ಸಂದೇಶ ಕಳಿಸಿ ನನ್ನನ್ನು ಗಲಿಬಿಲಿಗೀಡುಮಾಡುತ್ತಿದ್ದೀರಿ ? ಹೀಗೆ ಮಾಡಿದರೆ ನಾನು ನಿಮ್ಮನ್ನು ಗುರುತಿಸುವುದಾದರೂ ಹೇಗೆ ?

ಎಸ್ ಎಮ್ ಎಸ್–೧ : ಸರಿ, ತಿಳಿಯಿತಲ್ಲವೆ ? ಇತ್ತೀಚಿನ ದಿನಗಳಲ್ಲಿ ನಾವೆಲ್ಲ ಬರೀ ಸಂಖ್ಯೆಗಳಾಗಿ ಬಿಟ್ಟಿದ್ದೇವೆ. ಯಂತ್ರಗಳಲ್ಲಿ ದಾಖಲೆಗೊಂಡ ಸಂಖ್ಯೆಗಳ ಮೂಲಕ ಮಾತ್ರ ನಾವೀಗ ವ್ಯಕ್ತಿಗಳನ್ನು ಗುರುತಿಸಬೇಕಾಗಿದೆ. ಅದಿಲ್ಲವಾದರೆ ಗುರುತಿಸುವುದೇ ಅಸಾಧ್ಯ !! ಬೇರೆ ನೂರಾರು ಪುರಾವೆಗಳಿದ್ದರೂ ಅವು ಈಗ ಕೆಲಸಕ್ಕೆ ಬರುವುದಿಲ್ಲ. ಇದು ಸಹಜವಾಗಿಬಿಟ್ಟಿದೆ ತಾನೆ ? ಯಾವ ಹೆಸರಿರದಿದ್ದರೂ, ಹಿಂದೆ ಕೈಯಿಂದ ಬರೆದ ಪತ್ರಗಳ ಮೂಲಕ ಆ ಕೈಬರಹ ಯಾರದೆಂಬುದನ್ನು ಸಹಜವಾಗಿ ಗುರುತಿಸಬಹುದಾಗಿತ್ತು. ಅದೆಲ್ಲಾ ಮನಸ್ಸಿನಲ್ಲಿಯೇ ದಾಖಲಾಗಿ ಬಿಟ್ಟಿರುತ್ತಿತ್ತು. ಆದರೆ, ಈ ಯಂತ್ರಗಳ ಹಾರ್ಡ್ ಡಿಸ್ಕ್‌ಗಳಲ್ಲಿ ಎಲ್ಲ ಕೈಬರಹಗಳೂ ಒಂದೇ ಬಗೆಯದಾಗಿರುತ್ತವೆಯಲ್ಲವೆ ?

ಎಸ್ ಎಮ್ ಎಸ್–೨ : ಅಪ್ಪಾ, ನನ್ನನ್ನು ಕ್ಷಮಿಸಿ. ನಿಮಗೆ ಹುಟ್ಟುಹಬ್ಬದ ಶುಭಾಶಯಗಳು. ನಿಮ್ಮ ಹುಟ್ಟುಹಬ್ಬಕ್ಕೆ ನಿಮಗೆ ನಾನು ಯಾವ ಕಾಣಿಕೆ ಕೊಡಲಿ, ಹೇಳಿ?

ಎಸ್ ಎಮ್ ಎಸ್–೧ : ನಾನು ಇಷ್ಟಪಡುವುದನ್ನು ನೀನು ಕೊಡ್ತೀಯಾ ?

ಎಸ್ ಎಮ್ ಎಸ್–೨ : ಖಂಡಿತವಾಗಿ. ಪ್ರಮಾಣ ಮಾಡುತ್ತೇನೆ.

ಎಸ್ ಎಮ್ ಎಸ್–೧ : ಇವತ್ತಿಂದ ನೀನು ನಿನ್ನ ಕಂಪ್ಯೂಟರ್ ಮೂಲಕ (ಚ್ಯಾಟ್) ಮಾತಾಡುವಂತಿಲ್ಲ ಹಾಗೂ ಮೊಬೈಲ್ ಮೂಲಕ (ಮೆಸೇಜ್) ಸಂದೇಶ ಕಳಿಸುವಂತಿಲ್ಲ. ಇವುಗಳಿಗೆ ಬದಲಾಗಿ ನೀನು ಕಾಗದದ ಮೇಲೆ ಪತ್ರ ಬರೆಯಬೇಕು. ಮಗು, ನಿನ್ನಿಂದ ಬರುವ ಆ ರೀತಿಯ ಕೈ ಬರಹದ ಪತ್ರವೇ ನನಗೆ ನೀನು ಕೊಡಬಹುದಾದ ಹುಟ್ಟುಹಬ್ಬದ ಕಾಣಿಕೆ. ಆಗಬಹುದಾ ?

*(ಕೇಂದ್ರ ಸಾಹಿತ್ಯ ಅಕಾಡೆಮಿಯ ಯುವ ಪುರಸ್ಕಾರ ಪಡೆದ ಬಂಗಾಲಿ ಲೇಖಕ : ಶ್ರೀ ಬಿನೋದ ಘೋಸಾಲ್ ಅವರ ಸಣ್ಣಕತೆಯ ಕನ್ನಡ ಅನುವಾದ)*


ಕನ್ನಡಕ್ಕೆ : **ಡಾ|| ಬಸವರಾಜ ಸಾದರ**

(ಆಕಾಶವಾಣಿಯ ನಿವೃತ್ತ ನಿರ್ದೇಶಕ), ಎಫ್–೪, ಬಾಲಾಜಿ ಪ್ಯಾರಡೈಸ್, ೪ನೆಯ ಕ್ರಾಸ್ ಭುವನೇಶ್ವರಿನಗರ, (ಹೆಬ್ಬಾಳ–ಕೆಂಪಾಪುರ), ಬೆಂಗಳೂರು – ೫೬೦ ೦೨೪




# ಯುದ್ಧ

**ಯು**ದ್ಧವೆಂದರೆ :




ಕೋವಿ ಫಿರಂಗಿಗಳು
ಮದ್ದು ಗುಂಡುಗಳು
ಸೋಲು ಗೆಲುವುಗಳು
ಮಾತ್ರವಲ್ಲ !
ಯುದ್ಧವೆಂದರೆ :
ಅಂಗೈನ ಮದರಂಗೀ ಆರುವ ಮೊದಲೇ
ಹಣೆ ಕುಂಕುಮವನಳಿಸಿಕೊಂಡ ಹೆಣ್ಣುಮಕ್ಕಳು
ಅಪ್ಪನ ತಬ್ಬುವ ಮೊದಲೆ
ತಬ್ಬಲಿಯಾದ ಹಸುಗೂಸುಗಳು
ಮಗನ ಮನಿಯಾರ್ಡರ್‌ಗಾಗಿ ಕಾದು
ಕೂತ ಮುದಿ ಜೀವಗಳು
ಮತ್ತೂ
ಯುದ್ಧವೆಂದರೆ :
ಇರುವುದೆಲ್ಲವ
ಇಲ್ಲವಾಗಿಸುವ
ನಾಶಮಾಡಹೊರಟು
ತಾವೂ ನಾಶವಾಗುವ
ಹಳೆಯ ಆಟ
ಖಳರ ಕ್ಷಮೆಯಿರದ ಚಟ.


**ಕು. ಸ. ಮಧುಸೂದನ ನಾಯರ್**

ರಂಗೇನಹಳ್ಳಿ – ೫೭೭ ೧೪೪, ತರೀಕೆರೆ ತಾಲೂಕು, ಚಿಕ್ಕಮಗಳೂರು ಜಿಲ್ಲೆ





ಭಾರತದ ಶಿಕ್ಷಣ ವ್ಯವಸ್ಥೆ ಕ್ರಮೇಣ ಅಂಕ ಗಳಿಕೆಯ ಸಂತೆಯಾಗುತ್ತಿದ್ದು, ಭವಿಷ್ಯ ನಿರ್ಮಾಣದ ಮಾರುಕಟ್ಟೆ ವೇದಿಕೆಯಾಗುತ್ತಿರುವುದು ದುರಂತವಾದರೂ ಸತ್ಯ. ಒಂದು ಸುಭದ್ರ ಸಂವೇದನಾಶೀಲ ಸಮಾಜದ ನಿರ್ಮಾಣಕ್ಕೆ ಶಿಕ್ಷಣ ಪ್ರಥಮ ಸೋಪಾನವಾಗಬೇಕು ಎನ್ನುವ ವಾಸ್ತವವನ್ನೇ ನಮ್ಮ ಆಳುವ ವರ್ಗಗಳು ಮರೆತಂತಿದೆ. ಹಾಗಾಗಿಯೇ ಶಿಕ್ಷಣ ವ್ಯಕ್ತಿ, ವ್ಯಷ್ಟಿ, ಸಮಷ್ಟಿಯ ಮೌಲ್ಯಯುತ ಅಭ್ಯುದಯದ ಸಾರಥ್ಯ ವಹಿಸುವ ಬದಲು ಮಾರುಕಟ್ಟೆಯ ಜಗನ್ನಾಥ ರಥದ ಚಕ್ರಗಳಾಗಿ ಮುನ್ನಡೆಯುತ್ತಿದೆ. ಪ್ರತಿವರ್ಷ ಹತ್ತನೆಯ ತರಗತಿ ಮತ್ತು ಪಿಯುಸಿ ಫಲಿತಾಂಶಗಳು ಪ್ರಕಟವಾಗುವ ವೇಳೆಗೆ ಇಡೀ ರಾಜ್ಯದಲ್ಲಿ ಸಂಚಲನ ಮೂಡುತ್ತದೆ. ಮಾಧ್ಯಮಗಳು ಚುರುಕಾಗುತ್ತವೆ. ಮುದ್ರಣ ಮಾಧ್ಯಮಗಳಲ್ಲಿ ನೂರಾರು ಮುಖಗಳು ಫಳಫಳ ಹೊಳೆಯುತ್ತವೆ. ನೂರಕ್ಕೆ ನೂರು ಅಂಕ ತೆಗೆಯುವ ಅಂಕ ಸಾಮ್ರಾಟರ ಸಾಧನೆಗೆ ಶಿಕ್ಷಣ ಸಂಸ್ಥೆಗಳು ಕಾರಣವೋ ಅಥವಾ ಶಿಕ್ಷಣ ಸಂಸ್ಥೆಗಳ ಶ್ರೇಯಸ್ಸಿಗೆ ಕೆಲವೇ ಮಕ್ಕಳ ಪರಿಶ್ರಮ ಮತ್ತು ಸಾಧನೆ ಕಾರಣವೋ ಎಂಬ ಪ್ರಶ್ನೆಯ ನಡುವೆಯೇ ಮಕ್ಕಳು ಎಲ್ಲೋ ಒಂದು ಕಡೆ ಮಾರುಕಟ್ಟೆಯ ಸರಕುಗಳಂತಾಗುತ್ತಿದ್ದಾರೆ.

ಮಾರುಕಟ್ಟೆಗೆ ಜಾಹೀರಾತು ಜೀವಾಳ. ಶಿಕ್ಷಣ ಮಾರುಕಟ್ಟೆಯಾದಾಗ ಸರಕುಗಳ ಶೋಧ ನಡೆಯುತ್ತದೆ. ಸಂಸ್ಥೆಗಳೇ ಸರಕುಗಳೋ, ಸಂಸ್ಥೆಯೊಳಗಿನ ಭವಿಷ್ಯದ ಪ್ರಜೆಗಳು ಸರಕುಗಳೋ ಎಂಬ ಜಿಜ್ಞಾಸೆಯ ನಡುವೆಯೇ ನಮ್ಮ ಶಿಕ್ಷಣ ವ್ಯವಸ್ಥೆ ತನ್ನ ವಾರ್ಷಿಕ ಸಂತೆಯನ್ನು ನಡೆಸುತ್ತದೆ. ನೂರಕ್ಕೆ ನೂರು ಎನ್ನುವುದು ಜ್ಞಾನಾರ್ಜನೆಯ ಪರಾಕಾಷ್ಠೆಯೋ ಅಥವಾ ಲಾಭಾಂಶದ ಶಿಖರವೋ ಎಂಬ ಗೊಂದಲ ಮೂಡುತ್ತದೆ. ಸಾಮಾನ್ಯವಾಗಿ ಮಾರುಕಟ್ಟೆಗೆ ಸರಕುಗಳನ್ನು ಒದಗಿಸುವ ಉತ್ಪಾದಕರು ತಮ್ಮ ಉತ್ಪನ್ನಗಳ ಮೇಲೆ ನೂರಕ್ಕೆ ನೂರು ಪದ ಬಳಸುತ್ತಾರೆ. ಉತ್ಕೃಷ್ಟ ಗುಣಮಟ್ಟ ಮತ್ತು ಅತ್ಯಧಿಕ ಬಾಳಿಕೆ ಈ ಎರಡೂ ಲಕ್ಷಣಗಳು ಮಾರುಕಟ್ಟೆ ಸರಕುಗಳ ಭವಿಷ್ಯವನ್ನು ನಿರ್ಧರಿಸುತ್ತವೆ. ಬಹುಶಃ ಶೈಕ್ಷಣಿಕ ಮಾರುಕಟ್ಟೆಯಲ್ಲಿ ಈ ಎರಡೂ ಲಕ್ಷಣಗಳನ್ನು ವಿದ್ಯಾರ್ಥಿಗಳಿಗೆ ತಾತ್ವಿಕವಾಗಿ ಅನ್ವಯಿಸಲಾಗುತ್ತಿದೆ. ಈ ಮಾರುಕಟ್ಟೆಯಲ್ಲಿ ಪ್ರತಿಭೆ ಬಿಳಿ ಹಾಳೆಯ ಮೇಲೆ ಬಿಡಿಸುವ ಚಿತ್ತಾರಗಳಲ್ಲಿ ಲೀನವಾಗಿಬಿಟ್ಟಿದೆ. ಈ ಚಿತ್ತಾರಗಳ ವಾರಸುದಾರರೇ ಮುಂದಿನ ಹಲವು ತಿಂಗಳುಗಳಲ್ಲಿ ಪ್ರತಿಭಾ ಪುರಸ್ಕಾರದಲ್ಲಿ ರಾರಾಜಿಸುತ್ತಾರೆ. ಅರಳುವ ಪ್ರತಿಭೆಗಳನ್ನು ಹಾಳೆಗಳ ಮೇಲಿನ ಕಪ್ಪು ಬಿಳುಪಿನ ಅಕ್ಷರಗಳ ನಡುವೆ ಗುರುತಿಸುವ ಜಾತಿವಾರು ಸಂಘಟನೆಗಳು ಭವಿಷ್ಯದ ಪ್ರಜೆಗಳನ್ನು ಮತ್ತೊಮ್ಮೆ ತಮ್ಮದೇ ಆದ ಚೌಕಟ್ಟಿನೊಳಗೆ ಬಂಧಿಸಿ ಮುನ್ನಡೆಸಲು ಮುಂದಾಗುತ್ತಾರೆ.

ಈ ಗೊಂದಲ, ಜಿಜ್ಞಾಸೆ ಮತ್ತು ಪ್ರಕ್ಷುಬ್ಧ ವಾತಾವರಣದ ನಡುವೆಯೇ ೨೧ನೆಯ ಶತಮಾನದ ಭವ್ಯ ಭಾರತದ ನಿರ್ಮಾತೃಗಳನ್ನು ರೂಪಿಸಲು ಈ ದೇಶದ ಶಿಕ್ಷಣ ವ್ಯವಸ್ಥೆ ಸಜ್ಜಾಗುತ್ತಿದೆ. ಎಸ್‌ಎಸ್‌ಎಲ್‌ಸಿ ಪರೀಕ್ಷಾ ಫಲಿತಾಂಶಗಳು ಕುಸಿದಿವೆ, ಪಿಯುಸಿ ಫಲಿತಾಂಶಗಳು ಕುಸಿದಿವೆ ಎಂಬ ಆತಂಕದ ವಾತಾವರಣದ ನಡುವೆಯೇ ನಾಯಿಕೊಡೆಗಳಂತೆ ತಲೆ ಎತ್ತಿರುವ ಖಾಸಗಿ ಶಿಕ್ಷಣ ಸಂಸ್ಥೆಗಳು ಅತ್ಯುತ್ತಮ ಶಿಕ್ಷಣ ಒದಗಿಸುವ ಆಶ್ವಾಸನೆಯೊಡನೆ ಮುನ್ನಡೆಯುತ್ತಿವೆ. ಸರ್ವ ಶಿಕ್ಷಣ ಅಭಿಯಾನ, ಶಿಕ್ಷಣದ ಹಕ್ಕು, ಸಮಗ್ರ ಶಿಕ್ಷಣದ ಘೋಷಣೆಗಳನ್ನು ಹೊತ್ತ ಸರ್ಕಾರಿ ಶಾಲೆಗಳು ಕುಂಟುತ್ತಾ ಸಾಗುತ್ತಿವೆ. ಈ ನಡುವೆ ಪ್ರತಿಭೆ ಎಂಬ ಪದವೇ ಅಪಭ್ರಂಶವಾಗಿ ಪರಿಣಮಿಸುತ್ತಿದೆ. ಜಾತಿವಾರು ಸಂಘಟನೆಗಳ ಪ್ರತಿಭಾ ಪುರಸ್ಕಾರ ಸಮಾರಂಭಗಳನ್ನು ನೋಡಿದಾಗ ನಮ್ಮ ಸಮಾಜ ಎತ್ತ ಸಾಗುತ್ತಿದೆ ಎಂಬ ಆತಂಕ ಉಂಟಾಗುತ್ತದೆ. ಜಾತಿ, ಭಾಷೆ, ಧರ್ಮ ಮುಂತಾದ ಸೀಮಿತ ಚೌಕಟ್ಟಿನಿಂದ ಹೊರಬಂದು ವಿಶ್ವಮಾನವ ತತ್ವ




# ಅಂಕ ಗಳಿಕೆಯ ಸಂತೆಯಲ್ಲಿ ನರಳುತ್ತಿರುವ ಶಿಕ್ಷಣ

ನಾ. ದಿವಾಕರ



ಅನುಸರಿಸಬೇಕಾದ ಮಕ್ಕಳನ್ನು ಜಾತಿ ವೇದಿಕೆಗಳಲ್ಲಿ ವಿಜೃಂಭಿಸುವ ಮೂಲಕ ಪ್ರತಿಭೆಯ ಪರಿಕಲ್ಪನೆಯನ್ನೇ ಅಣಕಿಸಲಾಗುತ್ತಿದೆ.

ಮತ್ತೊಂದೆಡೆ ಅಂಕ ಗಳಿಕೆಯೇ ಪ್ರತಿಭೆಯೇ ಎನ್ನುವ ಪ್ರಶ್ನೆ ಇಂದು ಚರ್ಚೆಗೊಳಗಾಗಬೇಕಿದೆ. ನಿಜ, ಮಧ್ಯಮ ವರ್ಗದ ಜನತೆಗೆ ಶಿಕ್ಷಣ ಎಂದರೆ ಉದ್ಯೋಗ ಅರಸಲು ಇರುವ ಒಂದು ಅತ್ಯುತ್ತಮ ಸಾಧನ. ಸ್ಪರ್ಧಾತ್ಮಕ ಯುಗದಲ್ಲಿ ಮುನ್ನಡೆಯಲು ಪ್ರತಿಭೆಯೊಂದೇ ಸಾಲದು, ಅಂಕಗಳೂ ಬೇಕು. ಇದು ಒಂದು ಸಾರ್ವತ್ರಿಕ ರೋಗ. ಈ ರೋಗದ ನಿವಾರಣೆಗೆ ಸಮಸ್ತ ಪ್ರಜ್ಞಾವಂತ ಜನರೂ ಹೋರಾಡುವುದು ಅಗತ್ಯ. ಆದರೆ ಪ್ರಸ್ತುತ ಸಂದರ್ಭದಲ್ಲಿ ಮಕ್ಕಳಿಗೆ ತಮ್ಮ ಭವಿಷ್ಯ ರೂಪಿಸಿಕೊಳ್ಳಲು ಅಂಕ ಗಳಿಕೆ ಪ್ರಧಾನ ಧ್ಯೇಯವಾಗಿದ್ದರೆ ಅದು ನಾವು ನಿರ್ಮಿಸಿರುವ ಸಮಾಜ, ನಾವು ರೂಪಿಸಿರುವ ಶಿಕ್ಷಣ ವ್ಯವಸ್ಥೆ ಮತ್ತು ನಾವು ಅನುಸರಿಸುವ ಸಾಂಸ್ಕೃತಿಕ ಮಾರ್ಗಗಳ ಪರಿಣಾಮ ಎಂದಷ್ಟೇ ಹೇಳಬಹುದು. ಆದರೆ ಈ ಅಂಕ ಗಳಿಕೆಯ ಹುಚ್ಚು ಕುದುರೆ ಓಟದ ಲಾಭ ಪಡೆಯುತ್ತಿರುವವರು ವಿದ್ಯಾರ್ಥಿಗಳೂ ಅಲ್ಲ ಪೋಷಕರೂ ಅಲ್ಲ. ಬದಲಾಗಿ, ಖಾಸಗಿ ವಿದ್ಯಾ ಸಂಸ್ಥೆಗಳು. ಹೆಚ್ಚು ಅಂಕ ಗಳಿಸಿದ ಮಕ್ಕಳ ಜಾಹೀರಾತು ಫಲಕಗಳ ಹಿಂದೆ ಮುಂಬರುವ ವರ್ಷದಲ್ಲಿ ಹೆಚ್ಚಿನ ಡೊನೇಷನ್ ವಸೂಲಿ ಮಾಡುವ ಕುಹಕ ಯತ್ನ ಇರುವುದನ್ನು ಅಲ್ಲಗಳೆಯಲಾಗುವುದಿಲ್ಲ.

ಇಷ್ಟೆಲ್ಲಾ ಪ್ರತಿಭೆಗಳನ್ನು ಸೃಷ್ಟಿಸುತ್ತಿರುವ ಶಿಕ್ಷಣ ವ್ಯವಸ್ಥೆ ರೂಪಿಸುತ್ತಿರುವ ಸಮಾಜ ವಾದರೂ ಎಂತಹುದು ? ಮುಂದಿನ ಪೀಳಿಗೆಗೆ, ದೇಶದ ಭವಿಷ್ಯ ನಿರ್ಮಾತೃಗಳಿಗೆ ನೀಡುತ್ತಿರುವ ಮಾರ್ಗದರ್ಶನವಾದರೂ ಎಂತಹುದು ? ಈ ದೇಶದ ಶಿಕ್ಷಣ ವ್ಯವಸ್ಥೆ, ಶೈಕ್ಷಣಿಕ ಸಂಸ್ಥೆಗಳು ಮತ್ತು ಶಿಕ್ಷಕರು ಒಂದು ಸೌಹಾರ್ದಯುತ ಸಮಾಜದ ನಿರ್ಮಾಣಕ್ಕಾಗಿ ಶ್ರಮಿಸಿರುವುದಾದರೂ ಎಂತು ? ಇಲ್ಲಿ ಯಾವುದೇ ಅಭಿಪ್ರಾಯವನ್ನು ಸಾರ್ವತ್ರೀಕರಿಸಲಾಗುವುದಿಲ್ಲ. ಆದರೆ ಸಾಮಾಜಿಕ ಮೌಲ್ಯಗಳನ್ನು ಮಕ್ಕಳ ಮನಸ್ಸಿನಲ್ಲಿ ಬಿತ್ತಲು ಶಿಕ್ಷಣ ವ್ಯವಸ್ಥೆ ಶ್ರಮಿಸುತ್ತಿದೆಯೇ ಎಂಬ ಪ್ರಶ್ನೆ ಎದುರಾದಾಗ ನಿರುತ್ತರ ರಾಗುತ್ತೇವೆ. ಕಾನೂನು ಪಾಲನೆ, ಸಂವಿಧಾನ ಬದ್ಧತೆ, ಸಾಮಾಜಿಕ ಕಾಳಜಿ ಮತ್ತು ಮಾನವೀಯ ಸಂವೇದನೆ ಈ ನಾಲ್ಕೂ ಗುಣಗಳನ್ನು ಮಕ್ಕಳಲ್ಲಿ ವೃದ್ಧಿಸಲಾಗದ ಶಿಕ್ಷಣ ವ್ಯವಸ್ಥೆ ಸಮಾಜವನ್ನು ತಿದ್ದಲು ಹೇಗೆ ತಾನೇ ಸಾಧ್ಯ ? ಈ ವಿಷಮ ಸನ್ನಿವೇಶವನ್ನು ಇಂದು ನಾವು ಎದುರಿಸುತ್ತಿದ್ದೇವೆ.

ಪ್ರತಿಭಾವಂತರ ಅಂಕ ಗಳಿಕೆಯ ಭರಾಟೆಯ ನಡುವೆಯೇ ಅರ್ಧಕ್ಕೂ ಹೆಚ್ಚು ಮಕ್ಕಳು ಎಸ್‌ಎಸ್‌ಎಲ್‌ಸಿ ಮತ್ತು ಪಿಯುಸಿ ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗುತ್ತಿದ್ದಾರೆ. ಉತ್ತರ ಕರ್ನಾಟಕದಲ್ಲಿ ಫಲಿತಾಂಶಗಳು ಆತಂಕಕಾರಿ ಹಂತ ತಲುಪಿವೆ. ದಕ್ಷಿಣ ಕರ್ನಾಟಕದಲ್ಲಿ ಹಿಂದುಳಿದ ಜಿಲ್ಲೆಗಳಲ್ಲೂ ಇದೇ ಪರಿಸ್ಥಿತಿ ಇದೆ. ಇಲ್ಲಿಯೂ ಖಾಸಗಿ ಶಾಲೆಗಳಿವೆ. ಖಾಸಗಿ ಟ್ಯೂಷನ್ ಹೇಳುವ ವ್ಯಾಪಾರಿ ಕೇಂದ್ರಗಳಿವೆ. ಅತ್ಯುತ್ತಮ ಶಿಕ್ಷಣದ ಬ್ಯಾನರ್ ಹೊತ್ತ ಡೊನೇಷನ್ ಕೂಪಗಳಿವೆ. ಆದರೂ ಫಲಿತಾಂಶವೇಕೆ ಕುಸಿಯುತ್ತಿದೆ ? ಅಂದರೆ ಖಾಸಗೀಕರಣಕ್ಕೂ ಅಂಕಗಳಿಗೆ ಅಥವಾ ಪ್ರತಿಭಾ ಶೋಧನೆಗೂ ಸಂಬಂಧವಿಲ್ಲ ಎಂದಾಯಿತಲ್ಲವೇ ? ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡುವ ಮಕ್ಕಳೂ ಅಂಕ ಸಾಮ್ರಾಟರಾಗಲು ಅವಕಾಶವಿದೆಯಲ್ಲವೇ ? ಆದರೆ ಈ ಅವಕಾಶಗಳನ್ನು ಶಿಕ್ಷಣ ವ್ಯವಸ್ಥೆಯೇ ಕಸಿದುಕೊಳ್ಳುತ್ತಿದೆ. ಯಾವುದೇ ನಗರದಲ್ಲಿ ಹೊಸ ಬಡಾವಣೆಗಳಲ್ಲಿ ಸರ್ಕಾರಿ ಶಾಲೆಯನ್ನು ಕಾಣಲು ಸಾಧ್ಯವೇ ? ಈ ಅಗ್ರಹಾರ ಸಂಸ್ಕೃತಿಗೆ ಯಾರು ಹೊಣೆ ? ನಮ್ಮನ್ನಾಳುವ ಜನಪ್ರತಿನಿಧಿಗಳು ಈ ಪ್ರಶ್ನೆಗಳಿಗೆ ಪ್ರಾಮಾಣಿಕವಾಗಿ ಉತ್ತರಿಸಬೇಕಿದೆ.

ಆಧುನಿಕ ತಂತ್ರಜ್ಞಾನ ಮತ್ತು ಇದರಿಂದ ರೂಪುಗೊಂಡಿರುವ ಐಷಾರಾಮಿ ಬದುಕಿನ ಪರಿಕಲ್ಪನೆ ಇಂದಿನ ಯುವ ಸಮಾಜವನ್ನು ಮತ್ತು ವಿದ್ಯಾರ್ಥಿ ಸಮುದಾಯವನ್ನು ದಿಕ್ಕು ತಪ್ಪಿಸುತ್ತಿದೆ. ಮೊಬೈಲ್, ಟಿವಿ, ನೋಟ್‌ಬುಕ್, ಲ್ಯಾಪ್‌ಟಾಪ್‌ನ ಪರದೆಗಳಿಗೆ ಅಂಟಿಕೊಂಡಿರುವ ಯುವ ಜನತೆ ತಮ್ಮ ಪೋಷಕರನ್ನೇ ಕಡೆಗಣಿಸಲಾರಂಭಿಸಿರುವುದು ಕಣ್ಣಿಗೆ ಕಾಣುವ ಸತ್ಯ. ತಂತ್ರಜ್ಞಾನದ ಬಳಕೆಯಲ್ಲಿನ ಕೈಚಳಕವನ್ನೇ ತಮ್ಮ ಬುದ್ಧಿಶಕ್ತಿಯ ಸಂಕೇತ ಎಂಬ ಭ್ರಮೆಯಲ್ಲಿ ಯುವ ಜನತೆ, ವಿದ್ಯಾರ್ಥಿ ಸಮುದಾಯ ಸಾಮಾಜಿಕ ಮೌಲ್ಯಗಳನ್ನೇ ಕಳೆದುಕೊಳ್ಳುತ್ತಿರುವುದು ದುರಂತವಾದರೂ ಸತ್ಯ. ಹಾಗಾಗಿಯೇ ಕಾನೂನು ಉಲ್ಲಂಘನೆ ಹೆಚ್ಚಾಗಿ ಸುಶಿಕ್ಷಿತ ರಿಂದಲೇ ನಡೆಯುತ್ತಿದೆ, ವಿದ್ಯಾರ್ಥಿಗಳೇ ಕಾನೂನು ಭಂಜಕರಲ್ಲಿ ಮುಂಚೂಣಿಯಲ್ಲಿ ಇರುತ್ತಾರೆ. ಆದರೆ ಕಾನೂನುಬಾಹಿರವಾಗಿ ಖಾಸಗಿ ಟ್ಯೂಷನ್ ಹೇಳುವ ಶಿಕ್ಷಕರಿಗೆ ಮಕ್ಕಳಲ್ಲಿ ಕಾನೂನು ಪ್ರಜ್ಞೆ ಮೂಡಿಸಲು ಹೇಗೆ ಸಾಧ್ಯ ?

ಇಂತಹ ವಿಕೃತ ಶಿಕ್ಷಣ ವ್ಯವಸ್ಥೆಯಿಂದ ಮಕ್ಕಳಿಂದ ಹೊರಹೊಮ್ಮುವ ಪ್ರತಿಭಾವಂತ ಮಕ್ಕಳಿಗೆ, ಅಂಕ ಸಾಮ್ರಾಟರಿಗೆ ಜಾತಿ ವೇದಿಕೆಗಳಲ್ಲಿ ಸನ್ಮಾನಿಸುವುದರ ಮೂಲಕ ಸಮಾಜದ ಸೌಹಾರ್ದತೆಯನ್ನೇ ಕದಡುವ ಜಾತೀಯತೆಯ ಬೀಜಗಳನ್ನು ವ್ಯವಸ್ಥಿತವಾಗಿ ಬಿತ್ತಲಾಗುತ್ತಿದೆ. ಪ್ರತಿಭಾ ಪುರಸ್ಕಾರದ ವೇದಿಕೆಗಳಲ್ಲಿ ಅಂಕ ಗಳಿಸದೆ ಇರುವ ಪ್ರತಿಭೆಗಳು ಏಕೆ ಗೋಚರಿಸುವುದೇ ಇಲ್ಲ ಎಂಬ ಪ್ರಶ್ನೆ ಪ್ರಜ್ಞಾವಂತ ಸಮಾಜವನ್ನು ಕಾಡಲೇಬೇಕಲ್ಲವೇ ? ಆದರೆ ಕಾಡುತ್ತಿಲ್ಲ. ಮತೀಯತೆ, ಜಾತೀಯತೆ, ಮತಾಂಧತೆ, ಭಾಷಾಂಧತೆ ಹೀಗೆ ಇಡೀ ವಿಶ್ವವನ್ನೇ ಅಂಧ ಕೂಪವನ್ನಾಗಿ ಮಾಡುತ್ತಿರುವ ದುಷ್ಟ ಶಕ್ತಿಗಳ ರುದ್ರ ನರ್ತನದ ನಡುವೆ ಅಂಕ ಸಾಮ್ರಾಟ ಪ್ರತಿಭೆಗಳು ಉದಯಿಸುತ್ತಿದ್ದಾರೆ. ಈ ಪ್ರತಿಭೆಗಳಿಗೆ ತಮ್ಮ ಭವಿಷ್ಯದ ಹಾದಿ ಎಷ್ಟು ದುರ್ಗಮ ಎಂಬ ಕಲ್ಪನೆಯೂ ಇರಲಿಕ್ಕಿಲ್ಲ. ಏಕೆಂದರೆ ಇಡೀ ಭಾರತೀಯ ಸಮಾಜ ಭ್ರಮಾಲೋಕದಲ್ಲಿ ತೇಲುತ್ತಿದೆ. ನವ ಉದಾರವಾದ ಸೃಷ್ಟಿಸಿರುವ ಈ ಭ್ರಮಾಲೋಕದಲ್ಲಿ ಲೀನವಾಗುವ ಮುನ್ನ ಎಚ್ಚೆತ್ತುಕೊಳ್ಳದಿದ್ದರೆ ಬಹುಶಃ ಮಾರುಕಟ್ಟೆಯಾಗಿರುವ ಶಿಕ್ಷಣ ವ್ಯವಸ್ಥೆ ಷಾಪಿಂಗ್ ಮಾಲ್ ಆಗುವುದರಲ್ಲಿ ಸಂದೇಹವೇ ಇಲ್ಲ.

ಇದು ನಮ್ಮ ಮುಂದಿರುವ ಸವಾಲು ಮತ್ತು ಮೂರ್ತ ಪ್ರಶ್ನೆಯೂ ಹೌದು.

ನಾ. ದಿವಾಕರ
ಸಂಖ್ಯೆ ೭೯, ಈಶವಾಸ್ಯಂ, ನಾಗಲಕ್ಷ್ಮಿ ಮಾರ್ಗ, ೫ನೇ ಅಡ್ಡರಸ್ತೆ, ಎಂ.ಎಂ.ಜಿ. ದೇವಸ್ಥಾನ
ಬೆಲ್ ಬಡಾವಣೆ, ಲಿಂಗಾಂಬುಧಿ ರಸ್ತೆ, ಶ್ರೀರಾಂಪುರ ೨ನೇ ಹಂತ, ಮೈಸೂರು – ೫೭೦ ೦೨೩




ಮೇಡಂ ಕ್ಯೂರಿ ವಿಜ್ಞಾನ ಅಕಾಡೆಮಿ ೧೮.೬.೨೦೧೮ರಂದು ಬಳ್ಳಾರಿಯ ಲಯನ್ಸ್ ಕ್ಲಬ್ ಸಭಾಂಗಣದಲ್ಲಿ ಆಯೋಜಿಸಿರುವ ಕಾರ್ಯಕ್ರಮದಲ್ಲಿ ಶ್ರೀ ಎಸ್. ಮಂಜುನಾಥ್ ರಚಿಸಿರುವ 'ಚಿವ್ ಚಿವ್ ಗುಬ್ಬಿ' (ನವಕರ್ನಾಟಕ ಪ್ರಕಾಶನ) ಕೃತಿಯನ್ನು ವಿ.ಎಸ್.ಕೆ.ವಿ.ವಿ. ಕುಲಸಚಿವರಾದ ಪ್ರೊ|| ಟಿ. ಎಂ. ಭಾಸ್ಕರ್ ಲೋಕಾರ್ಪಣೆಗೊಳಿಸಿದರು. ಈ ಕೃತಿಗೆ ಚಿತ್ರಗಳನ್ನು ಬರೆದಿರುವ ಶ್ರೀ ಬಿ. ಜಿ. ಗುಜ್ಜಾರಪ್ಪ, ಸಾಹಿತಿಗಳಾದ ಶ್ರೀ ನಿಷ್ಠಿ ರುದ್ರಪ್ಪ, ಶ್ರೀ ಪರಮೇಶ್ವರಯ್ಯ ಸೊಪ್ಪಿಮಠ, ಶ್ರೀ ಬಿ. ನಾಗರಾಜ ಮುಂತಾದವರು ವೇದಿಕೆಯಲ್ಲಿದ್ದರು. ಹಲವಾರು ಮಕ್ಕಳು ಭಾಗವಹಿಸಿದ್ದರು.

# ಬ್ರಿಟನ್ ಸಾರ್ವತ್ರಿಕ ಚುನಾವಣೆ

# ಲೇಬರ್ ಪಕ್ಷದ ಮುನ್ನಡೆ




ಬ್ರಿಟನ್‌ನಲ್ಲಿ ಜೂನ್ ೮ರಂದು ಜರುಗಿದ ಸಾರ್ವತ್ರಿಕ ಚುನಾವಣೆಯಲ್ಲಿ ರಾಜಕೀಯ ಪಂಡಿತರು ಮತ್ತು ಚುನಾವಣಾ ವಿಶ್ಲೇಷಕರ ಲೆಕ್ಕಾಚಾರಗಳು, ಸಮೀಕ್ಷೆಗಳ ಫಲಿತಾಂಶಗಳು, ಒಂದರ್ಥದಲ್ಲಿ ತಲೆಕೆಳಗಾದವು. ಚುನಾವಣೆಗೆ ಮುನ್ನ ಜರುಗಿದ ಅನೇಕ ಸಮೀಕ್ಷೆಗಳು ಕನ್ಸರ್ವೇಟಿವ್ ಪಕ್ಷ ಸ್ವಲ್ಪ ಹಿನ್ನಡೆ ಅನುಭವಿಸಬಹುದು, ಆದರೆ ಅದು ಸರಳ ಬಹುಮತವನ್ನು ಪಡೆಯಬಹುದು ಎಂದು ಸಾರಿದ್ದವು. ಚುನಾವಣಾ ಫಲಿತಾಂಶಗಳು ಈ ಅಂದಾಜಿಗೆ ವ್ಯತಿರಿಕ್ತವಾಗಿದ್ದವು.

ಈ ಸಾರ್ವತ್ರಿಕ ಚುನಾವಣೆ ಜರುಗುವ ಮುನ್ನ ಸಂಭವಿಸಿದ ಕೆಲವು ಬೆಳವಣಿಗೆಗಳನ್ನು ಗಮನಿಸೋಣ. ಕಳೆದ ಮೂರು ವರ್ಷಗಳಲ್ಲಿ ಬ್ರಿಟಿಷ್ ಪ್ರಜೆಗಳು ನಾಲ್ಕು ಚುನಾವಣೆಗಳಲ್ಲಿ ಭಾಗವಹಿಸಿದರು – ೨೦೧೪ರಲ್ಲಿ ಸ್ವತಂತ್ರ ಸ್ಕಾಟ್ಲೆಂಡ್‌ಗಾಗಿ ಜರುಗಿದ ಮತದಾನ, ೨೦೧೫ರಲ್ಲಿ ಸಾರ್ವತ್ರಿಕ ಚುನಾವಣೆ, ೨೦೧೬ರಲ್ಲಿ ಬ್ರೆಕ್ಸಿಟ್ ಜನಮತಗಣನೆ ಮತ್ತು ಪ್ರಸ್ತುತ ಸಾರ್ವತ್ರಿಕ ಚುನಾವಣೆ. ೨೦೧೫ರಲ್ಲಿ ಜರುಗಿದ ಸಾರ್ವತ್ರಿಕ ಚುನಾವಣೆಯಲ್ಲಿ ಕನ್ಸರ್ವೇಟಿವ್ ಪಕ್ಷ ೩೩೧ ಸ್ಥಾನಗಳನ್ನು ಪಡೆದು ಸರ್ಕಾರವನ್ನು ರಚಿಸಿತು. ಡೇವಿಡ್ ಕ್ಯಾಮರನ್ ಅದರ ಪ್ರಧಾನಿಯಾಗಿದ್ದರು. ಬ್ರೆಕ್ಸಿಟ್ ಜನಮತಗಣನೆ ೨೦೧೬ರಲ್ಲಿ ಜರುಗಿತು. ಅಂದರೆ ಐರೋಪ್ಯ ಒಕ್ಕೂಟದಿಂದ ನಿರ್ಗಮಿಸುವ ನಿರ್ಧಾರಕ್ಕೆ ಸಂಬಂಧಿಸಿದಂತೆ ನಡೆದ ಜನಮತಗಣನೆಯಲ್ಲಿ ಸೋಲನ್ನು ಅನುಭವಿಸಿದ ಕ್ಯಾಮರನ್ ತಮ್ಮ ಸ್ಥಾನಕ್ಕೆ ರಾಜೀನಾಮೆಯನ್ನಿತ್ತರು. ಆಗ ಅಧಿಕಾರದ ಗದ್ದುಗೆಯನ್ನು ಏರಿದವರು ತೆರೆಸಾ ಮೇ. ಸಂಸತ್‌ನ ಅವಧಿ ಮುಗಿಯುವ ಮೂರು ವರ್ಷಗಳ ಮುನ್ನವೆ ಅವರು ಚುನಾವಣೆಯನ್ನು ಘೋಷಿಸಿದರು. ಬ್ರೆಕ್ಸಿಟ್ ಜನಮತಗಣನೆ ಫಲಿತಾಂಶ ಕುರಿತಂತೆ ಹೆಚ್ಚಿನ ಜನಾದೇಶವನ್ನು ಪಡೆಯಲು ಹಾಗೂ ಇನ್ನು ಕೆಲವು ಲೆಕ್ಕಾಚಾರಗಳ ಅನ್ವಯ ಅವರು ಈ ಕ್ರಮಕ್ಕೆ ಮುಂದಾಗಿದ್ದರು.

ಈಗ ಕನ್ಸರ್ವೇಟಿವ್ ಮತ್ತು ಲೇಬರ್ ಪಕ್ಷಗಳು ಜನರೆದುರು ಮಂಡಿಸಿದ್ದ ಪ್ರಣಾಲಿಕೆಗಳ ಕೆಲವು ಅಂಶಗಳತ್ತ ಗಮನ ಹರಿಸೋಣ. ಕನ್ಸರ್ವೇಟಿವ್ ಪಕ್ಷ ಬ್ರೆಕ್ಸಿಟ್ ಪ್ರಕ್ರಿಯೆಯನ್ನು ಸುಸಂಬದ್ಧ ಹಾಗೂ ಸುಲಲಿತವಾಗಿ ಮಾಡುವುದು, ರಾಷ್ಟ್ರೀಯ ಆರೋಗ್ಯ ಯೋಜನೆಯ ಬಜೆಟ್ಟಿಗೆ ಪ್ರತಿವರ್ಷ ೮ ಬಿಲಿಯ ಪೌಂಡುಗಳನ್ನು ನೀಡುವುದರ ಮೂಲಕ ಅದನ್ನು ವೃದ್ಧಿಸುವುದು, ೨೦೨೨ರ ವೇಳೆಗೆ ಶಾಲೆಗಳಿಗೆ ೪ ಬಿಲಿಯ ಪೌಂಡುಗಳ ಅಧಿಕ ಹಣವನ್ನು ನೀಡುವುದು ಇತ್ಯಾದಿ ಅಂಶಗಳನ್ನು ಬ್ರಿಟನ್ ಜನತೆಯ ಮುಂದಿಟ್ಟಿತು. ಜನರ ಕಲ್ಯಾಣ ಯೋಜನೆಗಳ ಬಗೆಗೆ ಮೃದು ಧೋರಣೆ, ಸಾರ್ವಜನಿಕ ಸೇವೆಗಳಲ್ಲಿ ಅಧಿಕ ಹಣದ ಹೂಡಿಕೆ, ರೈಲು, ಅಂಚೆ, ಜಲ ಇತ್ಯಾದಿ ಮೂಲಭೂತ ಸೇವೆಗಳನ್ನು ರಾಷ್ಟ್ರೀಕರಿಸುವುದು, ವ್ಯಾಪಾರಗಳ ಮೇಲಿನ ಕರವನ್ನು ಜಾಸ್ತಿ ಮಾಡುವುದು ಮತ್ತು ಇಂತಹ ಚಟುವಟಿಕೆಗಳ ಮೂಲಕ ಧನಿಕರಾದವರ ಮೇಲಿನ ಕರವನ್ನು ಹೆಚ್ಚಿಸುವುದು, ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳ ಶಿಕ್ಷಣ ಶುಲ್ಕವನ್ನು ರದ್ದುಮಾಡುವುದು ಮುಂತಾದ ಭರವಸೆಗಳನ್ನು ಲೇಬರ್ ಪಕ್ಷ ನೀಡಿತ್ತು.




**ಮ. ಶ್ರೀ. ಮುರಳಿ ಕೃಷ್ಣ**

ಈ ಬಾರಿಯ ಚುನಾವಣೆಯಲ್ಲಿ ೧೨ ಮಂದಿ ಭಾರತ ಮೂಲದ ವ್ಯಕ್ತಿಗಳು ಜಯಶಾಲಿಗಳಾಗಿದ್ದಾರೆ (ಲೇಬರ್ ಪಕ್ಷ - ೭, ಕನ್ಸರ್ವೇಟಿವ್ ಪಕ್ಷ - ೫). ಇಬ್ಬರು ಸಿಖ್ ಅಭ್ಯರ್ಥಿಗಳು ಸಂಸತ್ತನ್ನು ಪ್ರವೇಶಿಸಿದ್ದಾರೆ. ಇವರಲ್ಲಿ ಬಿರ್‌ಮಿಂಗ್‌ಹ್ಯಾಂ ಎಡ್‌ಬಾಸ್ಟನ್‌ನಿಂದ ಸ್ಪರ್ಧಿಸಿದ್ದ ಪ್ರೀತ್ ಕೌರ್ ಗಿಲ್ ಪ್ರಥಮ ಸಿಖ್ ಮಹಿಳಾ ಸಂಸದೆಯಾಗಿದ್ದಾರೆ. ಒಂದು ಮೂಲದ ಅನ್ವಯ ಈ ಚುನಾವಣೆಯಲ್ಲಿ ಶೇ. ೭೦ಕ್ಕೂ ಹೆಚ್ಚಿನ ಯುವಜನರು ಲೇಬರ್ ಪಕ್ಷಕ್ಕೆ ತಮ್ಮ ಮತ ಹಾಕಿದ್ದಾರೆ. ಇದು ಕನ್ಸರ್ವೇಟಿವ್ ಪಕ್ಷದ ಸರ್ಕಾರದ ಚಾಲ್ತಿಯಲ್ಲಿರುವ ಯುವಜನರ ಬಾಳ್ವೆಗೆ ಸಂಬಂಧಿಸಿದ ನೀತಿಗಳ ವಿರುದ್ಧದ ಅಭಿಪ್ರಾಯವಾಗಿದೆ ಎಂಬುದು ಕೆಲವು ರಾಜಕೀಯ ವಿಶ್ಲೇಷಕರ ಅಂಬೋಣ.




೨೦೧೫ರಲ್ಲಿ ಜರುಗಿದ ಸಾರ್ವತ್ರಿಕ ಚುನಾವಣೆಯಲ್ಲಿ ಒಟ್ಟು ೬೫೦ ಸ್ಥಾನಗಳ ಪೈಕಿ ರಾಜಕೀಯ ಪಕ್ಷಗಳ ಬಲಾಬಲ ಹೀಗಿತ್ತು : ಕನ್ಸರ್ವೇಟಿವ್ ಪಕ್ಷ –೩೩೧ ಸ್ಥಾನಗಳು (ಶೇ. ೩೬.೯ ಮತಗಳು), ಲೇಬರ್ ಪಕ್ಷ – ೨೩೨ ಸ್ಥಾನಗಳು (ಶೇ. ೩೦.೪ ಮತಗಳು), ಸ್ಕಾಟಿಷ್ ನ್ಯಾಷನಲ್ ಪಾರ್ಟಿ – ೫೬ ಸ್ಥಾನಗಳು (ಶೇ. ೪.೭ ಮತಗಳು), ಲಿಬರಲ್ ಡೆಮಾಕ್ರಟಿಕ್ ಪಕ್ಷ – ೮ ಸ್ಥಾನಗಳು (ಶೇ. ೭.೯ ಮತಗಳು), ಇತರರು – ೨೩ ಸ್ಥಾನಗಳು (ಶೇ. ೨೦.೧ ಮತಗಳು).

ಇತ್ತೀಚಿನ ದಶಕಗಳಲ್ಲಿ ಬ್ರಿಟನ್ನಿನ ಆರ್ಥಿಕರಂಗ ಅನೇಕ ಎಡರುತೊಡರುಗಳನ್ನು ಎದುರಿಸುತ್ತಿದೆ. ಸಾಮಾನ್ಯ ಜನರ ಜೀವನ ಅನೇಕ ಬಗೆಯ ಸಂಕಷ್ಟಗಳಿಗೆ ಒಳಗಾಗಿದೆ. ಅವರಿಗೆ ಲಭ್ಯವಾಗುತ್ತಿದ್ದ ಸರ್ಕಾರಿ ಮೂಲದ ಅನೇಕ ಸೇವೆಗಳನ್ನು ಮೊಟಕುಗೊಳಿಸುತ್ತ ಬರಲಾಗಿದೆ. ಅಲ್ಲದೆ, ಅಲ್ಲಿ ಭಯೋತ್ಪಾದಕರ ದಾಳಿಗಳು ಹೆಚ್ಚಾಗುತ್ತಿವೆ. ೨೦೧೭ರ ಚುನಾವಣೆ ಘೋಷಣೆಯಾದ ತರುವಾಯ ಎರಡು ಭೀಕರ ಭಯೋತ್ಪಾದನಾ ಕೃತ್ಯಗಳು ಜರುಗಿದವು. ಮ್ಯಾಂಚೆಸ್ಟರ್‌ನಲ್ಲಿ ೨೨ ಮಂದಿ ಮತ್ತು ಲಂಡನ್ ಸೇತುವೆ ದಾಳಿಯಲ್ಲಿ ೮ ಜನರು ಹತರಾಗಿದ್ದರು. ವಲಸೆಗೆ ಸಂಬಂಧಿಸಿದ ಸಮಸ್ಯೆಗಳು ವೃದ್ಧಿಸುತ್ತಿವೆ.

ತೆರೆಸಾ ಮೇ ೨೦೧೬ರಲ್ಲಿ ಪ್ರಧಾನಿಯಾದರು. ಚುನಾವಣಾ ಪ್ರಚಾರದ ಸಮಯದಲ್ಲಿ ಅವರು ಒಬ್ಬ ದಕ್ಷ, ಆದರೆ ಕಠಿಣ ಕ್ರಮಗಳನ್ನು ಜಾರಿಗೊಳಿಸುವ ವ್ಯಕ್ತಿ ಎಂಬಂತೆ ಬಿಂಬಿಸಲಾಯಿತು. ಆದರೆ ಅವರು ಸಾಮಾನ್ಯ ಜನರ ದೃಷ್ಟಿಯಲ್ಲಿ 'ಹೆಚ್ಚು ಬೆರೆಯದ' ಪ್ರಧಾನಿಯಾಗಿದ್ದರು ಎಂದರೆ ಅತಿಶಯೋಕ್ತಿಯಾಗುವುದಿಲ್ಲ. ಲೇಬರ್ ಪಕ್ಷದ ಪ್ರಧಾನ ನಾಯಕ ಜೆರೆಮಿ ಕಾರ್ಬಿನ್ ಮೊದಲಿನಿಂದಲೂ ಒಬ್ಬ 'ಸ್ಟ್ರೀಟ್ ಫೈಟರ್.' ಅಂದರೆ 'ಬೀದಿ ಹೋರಾಟಗಾರ'. ಅನೇಕ ಜನಪರ ವಿಷಯಗಳಿಗೆ ಸಂಬಂಧಿಸಿದಂತೆ ತನ್ನದೇ ಆದ ರೀತಿಯಲ್ಲಿ ಸ್ಪಂದಿಸುತ್ತ ಬಂದಿರುವ ವ್ಯಕ್ತಿ. ೨೦೧೫ರಲ್ಲಿ ಅವರು ಲೇಬರ್ ಪಕ್ಷದ ಅತ್ಯಂತ ದೊಡ್ಡ ಹುದ್ದೆಯೇರಿದ ಹಾದಿ ಸುಗಮವಾಗಿರಲಿಲ್ಲ. ಪಕ್ಷದ ಒಳಗೆ ಹಾಗೂ ಹೊರಗೆ ಅನೇಕ ಬಗೆಯ ಪ್ರತಿರೋಧಗಳನ್ನು ಎದುರಿಸಬೇಕಾಯಿತು. ಅವರದ್ದು ಅಸಾಂಪ್ರದಾಯಿಕ ಎನ್ನಬಹುದಾದ ಶೈಲಿ.

ಪ್ರಸ್ತುತ ಸಾರ್ವತ್ರಿಕ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳು ಪಡೆದ ಸ್ಥಾನಗಳ ವಿವರಗಳು : ಕನ್ಸರ್ವೇಟಿವ್ ಪಕ್ಷ – ೩೧೮ ಸ್ಥಾನಗಳು (ಶೇ. ೪೨.೪೫ ಮತಗಳು), ಲೇಬರ್ ಪಕ್ಷ – ೨೬೧ ಸ್ಥಾನಗಳು (ಶೇ. ೪೦ ಮತಗಳು), ಸ್ಕಾಟಿಷ್ ನ್ಯಾಷನಲ್ ಪಾರ್ಟಿ – ೩೫ ಸ್ಥಾನಗಳು (ಶೇ. ೩.೪ ಮತಗಳು), ಲಿಬರಲ್ ಡೆಮಾಕ್ರಟಿಕ್ ಪಕ್ಷ – ೧೨ ಸ್ಥಾನಗಳು (ಶೇ. ೭.೩೬ ಮತಗಳು), ಡೆಮಾಕ್ರಟಿಕ್ ಯೂನಿಯನಿಸ್ಟ್ ಪಕ್ಷ–೧೦ ಸ್ಥಾನಗಳು (ಶೇ. ೦.೯೧ ಮತಗಳು, ಸಿನ್ ಫೇನ್ – ೭ ಸ್ಥಾನಗಳು, ಪ್ಲೈಡ್ ಕಮ್ರಿ – ೪ ಸ್ಥಾನಗಳು, ಗ್ರೀನ್ ಪಕ್ಷ – ೧ ಸ್ಥಾನ, ಯುನೈಟೆಡ್ ಕಿಂಗ್‌ಡಂ ಇಂಡಿಪೆಂಡೆಂಸ್ ಪಕ್ಷ – ೦ ಸ್ಥಾನಗಳು (ಶೇ. ೧.೮೫). ಕಳೆದ ಸಾರ್ವತ್ರಿಕ ಚುನಾವಣೆಗೆ ಹೋಲಿಸಿದಾಗ ಈ ಬಾರಿ ಕನ್ಸರ್ವೇಟಿವ್ ಪಕ್ಷ ೧೩ ಸ್ಥಾನಗಳನ್ನು ಕಳೆದುಕೊಂಡಿದೆ. ಲೇಬರ್ ಪಕ್ಷ ೨೯ ಸ್ಥಾನಗಳನ್ನು ಗಳಿಸಿದೆ. ಕನ್ಸರ್ವೇಟಿವ್ ಪಕ್ಷದ ೯ ಸಚಿವರು ಚುನಾವಣೆಯಲ್ಲಿ ಸೋತಿದ್ದಾರೆ. ಆದರೆ ಯಾವ ಪಕ್ಷವೂ ಬಹುಮತವನ್ನು ಗಳಿಸಿಲ್ಲ. ಅಂದರೆ ೬೫೦ ಸ್ಥಾನಗಳ ಪೈಕಿ ೩೨೬ ಸ್ಥಾನಗಳನ್ನು ಪಡೆದಿಲ್ಲ. ೧೯೪೫ರಲ್ಲಿ ಕ್ಲೆಮೆಂಟ್ ಅಟ್ಲಿ ನೇತೃತ್ವದ ಲೇಬರ್ ಪಕ್ಷ ೧೦.೪% ಸ್ವಿಂಗ್ ಗಳಿಸಿತ್ತು. ಪ್ರಸ್ತುತ ಜೆರೆಮಿ ಕಾರ್ಬಿನ್ ಅವರನ್ನು ಹೊರತುಪಡಿಸಿದರೆ ಯಾವ ನಾಯಕನ ಮುಂದಾಳತ್ವದಲ್ಲೂ ಈ ಪಕ್ಷ ಇದಕ್ಕೆ ಸರಿಸಮಾನವಾದ ಸಾಧನೆ ಮಾಡಲು ಸಾಧ್ಯವಾಗಿರಲಿಲ್ಲ. ಇದು ಅನೇಕ ರಾಜಕೀಯ ತಜ್ಞರನ್ನು ಅಚ್ಚರಿಗೀಡು ಮಾಡಿದೆ. ಈಗ ಅಲ್ಲಿ ಕನ್ಸರ್ವೇಟಿವ್ ಪಕ್ಷ, ಡೆಮಾಕ್ರಟಿಕ್ ಯೂನಿಯನಿಸ್ಟ್ ಪಕ್ಷದ ಜೊತೆ ಸೇರಿ ಸರ್ಕಾರವನ್ನು ರಚಿಸಿದೆ.

ಈ ಬಾರಿಯ ಚುನಾವಣೆಯಲ್ಲಿ ೧೨ ಮಂದಿ ಭಾರತ ಮೂಲದ ವ್ಯಕ್ತಿಗಳು ಜಯಶಾಲಿಗಳಾಗಿದ್ದಾರೆ (ಲೇಬರ್ ಪಕ್ಷ – ೭, ಕನ್ಸರ್ವೇಟಿವ್ ಪಕ್ಷ – ೫). ಇಬ್ಬರು ಸಿಖ್ ಅಭ್ಯರ್ಥಿಗಳು ಸಂಸತ್ತನ್ನು ಪ್ರವೇಶಿಸಿದ್ದಾರೆ. ಇವರಲ್ಲಿ ಬಿರ್‌ಮಿಂಗ್‌ಹ್ಯಾಂ ಎಡ್‌ಬಾಸ್ಟನ್‌ನಿಂದ ಸ್ಪರ್ಧಿಸಿದ್ದ ಪ್ರೀತ್ ಕೌರ್ ಗಿಲ್ ಪ್ರಥಮ ಸಿಖ್ ಮಹಿಳಾ ಸಂಸದೆಯಾಗಿದ್ದಾರೆ. ಒಂದು ಮೂಲದ ಅನ್ವಯ ಈ ಚುನಾವಣೆಯಲ್ಲಿ ಶೇ. ೭೦ಕ್ಕೂ ಹೆಚ್ಚಿನ ಯುವಜನರು ಲೇಬರ್ ಪಕ್ಷಕ್ಕೆ ತಮ್ಮ ಮತವನ್ನು ಹಾಕಿದ್ದಾರೆ. ಇದು ಕನ್ಸರ್ವೇಟಿವ್ ಪಕ್ಷದ ಸರ್ಕಾರದ ಚಾಲ್ತಿಯಲ್ಲಿರುವ ಯುವಜನರ ಬಾಳ್ವೆಗೆ ಸಂಬಂಧಿಸಿದ ನೀತಿಗಳ ವಿರುದ್ಧದ ಅಭಿಪ್ರಾಯವಾಗಿದೆ ಎಂಬುದು ಕೆಲವು ರಾಜಕೀಯ ವಿಶ್ಲೇಷಕರ ಅಂಬೋಣ.

ಈ ಚುನಾವಣೆಯ ಫಲಿತಾಂಶಗಳನ್ನು ವಿಶ್ಲೇಷಿಸುವಾಗ ಒಂದು ಅಂಶ ಢಾಳಾಗಿ ಕಂಡುಬರುತ್ತದೆ. ಅದೇನೆಂದರೆ ರಾಜಕೀಯ ಪಕ್ಷಗಳು ಗಳಿಸಿದ ಮತಗಳಿಗೂ ಅವುಗಳು ಪಡೆದ ಸ್ಥಾನಗಳಿಗೂ ಸಂಬಂಧವಿಲ್ಲದೆಯಿರುವುದು. ಉದಾಹರಣೆಗಾಗಿ ಈ ಎರಡು ಪಕ್ಷಗಳ ಮತ–ಸ್ಥಾನಗಳತ್ತ ಗಮನವನ್ನು ಹರಿಸೋಣ. ಸ್ಕಾಟಿಷ್ ನ್ಯಾಷನಲ್ ಪಾರ್ಟಿ – ೩೫ ಸ್ಥಾನಗಳು (ಶೇ. ೩.೪ ಮತಗಳು) ಮತ್ತು ಲಿಬರಲ್ ಡೆಮಾಕ್ರಟಿಕ್ ಪಕ್ಷ – ೧೨ ಸ್ಥಾನಗಳನ್ನು (ಶೇ. ೭.೩೬ ಮತಗಳು) ಪಡೆದಿವೆ. ಇದೊಂದು ವಿಪರ್ಯಾಸವಲ್ಲವೇ ? ನ್ಯೂನತೆಯಲ್ಲವೇ ? ಇದು 'ಫಸ್ಟ್ ಪಾಸ್ಟ್ ದಿ ಪೋಸ್ಟ್' (ಎಫ್‌ಪಿಟಿಪಿ) ಅಂದರೆ ಒಂದು ಮತಕ್ಷೇತ್ರದಲ್ಲಿ ಯಾವ ಅಭ್ಯರ್ಥಿ ಮತ ಗಳಿಸುವಿಕೆಯಲ್ಲಿ ಪ್ರಥಮ ಸ್ಥಾನದಲ್ಲಿರುತ್ತಾನೋ ಆತನನ್ನು ವಿಜಯಶಾಲಿಯೆಂದು ಪರಿಗಣಿಸುವ ವ್ಯವಸ್ಥೆಯ ಒಂದು ದೊಡ್ಡ ಕೊರತೆ. ಅನುಪಾತ ಆಧಾರಿತ ಚುನಾವಣಾ ವ್ಯವಸ್ಥೆಯಲ್ಲಿ ಇಂತಹ ನ್ಯೂನತೆಯಿರುವುದಿಲ್ಲ. ಭಾರತದಲ್ಲಿ ಈ ವ್ಯವಸ್ಥೆ ಜಾರಿಯಾಗಬೇಕೆಂದು ಎಡಪಕ್ಷಗಳು ಮತ್ತು ಕೆಲವು ಪುರೋಗಾಮಿ ಸಂಘಟನೆಗಳು ಹೋರಾಡುತ್ತಿವೆ.

ಮುಖ್ಯವಾಗಿ, ಈ ಚುನಾವಣೆಯಲ್ಲಿ ಲೇಬರ್ ಪಕ್ಷದ ನಾಯಕ ಜೆರೆಮಿ ಕಾರ್ಬಿನ್ ಬ್ರಿಟನ್‌ನಲ್ಲಿ 'ಕೆಲವರಿಗಲ್ಲ, ಅನೇಕರಿಗೆ' ಒಂದು ರಾಷ್ಟ್ರವನ್ನು ಕಟ್ಟುತ್ತೇವೆಂದು ಸಾರಿದ್ದರು. ಅವರು ಆ ದೇಶದ ಜನತೆಯ ಮುಂದಿರಿಸಿದ್ದ ಪ್ರಣಾಳಿಕೆಯಲ್ಲಿ ಅನೇಕ ಸಮಾಜವಾದಿ ಅಂಶಗಳಿದ್ದದ್ದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಲೇಬರ್ ಪಕ್ಷದ ಮುನ್ನಡೆ ವಿಶ್ವದ ಸಮಾಜವಾದಿ, ಎಡಪಂಥೀಯ ಶಕ್ತಿಗಳಿಗೆ ಒಂದು ಆಶಾದಾಯಕ ಬೆಳವಣಿಗೆ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯ ಲೇಔಟ್
ತುರಹಳ್ಳಿ ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧






# ಸಾಕಿದ ಗಿಳಿಮರಿಯ ವಿಶ್ವಾಸ

**ರಾಧಾ ಟೇಕಲ್**

"ಅತ್ತಿಗೆ, ನನ್ನ ಸಾಕ್ಸ್, ಬಿಳಿ ಬಣ್ಣದ್ದು, ಕಾಣಿಸ್ತಾ ಇಲ್ಲ." ಮಾನಸಿ, ಒದ್ದೆಯಾದ ಕೈಗಳನ್ನು ಸರಸರನೆ ಟವೆಲ್ಲಿಗೆ ಒರೆಸಿಕೊಂಡು ರೂಮಿಗೆ ಹೋದಳು. ಚಂದನ್ ತನ್ನ ಬಟ್ಟೆಗಳ ಕಪಾಟಿನ ಎರಡೂ ಬಾಗಿಲು ತೆರೆದು ಅಲ್ಲೇ ನಿಂತಿದ್ದ.

"ಇಲ್ಲಿದೆ ನೋಡಿ, ಸಾಕ್ಸ್‌ಗಳನ್ನೆಲ್ಲ ಕೆಳಗಡೆ ಜೋಡಿಸಿದ್ದೀನಿ. ಕರ್ಚೀಫ್‌ಗಳೂ ಅಲ್ಲೆ ಇವೆ" ಎಂದು ಕೆಳಗಿನ ಸಾಲು ತೋರಿಸಿದಳು.

"ಥ್ಯಾಂಕ್ಸ್" ಎಂದು ಅವನು ಹೇಳುವುದನ್ನು ಕೇಳುವ ಮೊದಲೇ ಅಡಿಗೆ ಮನೆ ಸೇರಿದ್ದಳು. ತಯಾರಾಗಿದ್ದ ಬಿಸಿ ಬಿಸಿ ಮೂಲಿ ಪರಾಠಗಳನ್ನು ಊಟದ ಟೇಬಲ್ ಮೇಲಿಟ್ಟಳು. ತಟ್ಟೆ , ಲೋಟ, ನೀರಿನ ಹೂಜಿ ಎಲ್ಲ ತಂದಿಟ್ಟಾಯ್ತು.

"ಮಾನಸಿ, ನಮ್ಮ ಅಂಗಡೀದು ಟ್ಯಾಕ್ಸ್ ಡಾಕ್ಯುಮೆಂಟ್ಸ್ ಕಾಣಿಸ್ತಾನೇ ಇಲ್ಲ" ರೂಮಿನಿಂದ ಮದನ್ ಕೂಗು ಹಾಕಿದ.

"ನೀನು ಬಂದಾಗಿನಿಂದ ಈ ಮನೇಲಿ ಯಾರಿಗೂ ಅವರವರ ಸಾಮಾನು ಕಣ್ಣಿಗ್ ಕಾಣಿಸೋದೇ ಇಲ್ಲ", ಅಲ್ಲೇ ದೇವರಿಗೆ ಇಟ್ಟಿದ್ದ ಹಳೆಯ ಹೂಗಳನ್ನು ತೆಗೆದು, ಹೊಸತನ್ನು ಜೋಡಿಸುತ್ತಿದ್ದ ಅತ್ತೆ ಹೇಳಿದರು. ಮಾನಸಿ ನಸುನಗುತ್ತಾ ಹಾಲ್ ದಾಟುತ್ತಿರುವಾಗ, "ನನ್ನ ಕನ್ನಡಕ ಅದೆಲ್ಲೋ ಇಟ್ಟಿಟ್ಟು ಇಲ್ಲಿ ಬಂದು ಕೂತ್ಕೊಂಡು ಬಿಟ್ಟಿದ್ದೀನಿ. ಹಾಳು ಮರೆವು. ಸ್ವಲ್ಪ ತಂದ್ಕೊಟ್ಟುಬಿಡಮ್ಮ" ಎಂದರು. ಅವಳಿಗೆ ನಗು ಬಂತು. ಅವಳ ಅತ್ತೆಯೂ ನಕ್ಕುಬಿಟ್ಟರು.

ಮದನ್ ಮತ್ತೊಮ್ಮೆ ಕರೆಯುವ ಮೊದಲೇ ರೂಮಿಗೆ ಹೋಗಿ ಟೇಬಲ್‌ನ ಡ್ರಾದಲ್ಲಿದ್ದ ಫೈಲ್ ತೆಗೆದು ಹೊರಗಿಟ್ಟಳು. "ಓಹ್ ! ಅಲ್ಲೇ ಇತ್ತಾ ? ಸಾರಿ, ನಿಂಗೆ ತೊಂದ್ರೆ ಕೊಟ್ಟೆ . ಹೇಗೂ ಬಂದಿದ್ದೀಯಲ್ಲ ಈ ಷರ್ಟ್‌ನ ಬಟನ್ಸ್ ಸ್ವಲ್ಪ ಹಾಕ್ಬಿಡು, ಪ್ಲೀಸ್, ಯಾಕೊ ಅದು ನನ್ಮಾತು ಕೇಳ್ತಿಲ್ಲ" ಎಂದ. ಅವಳು ಹಾಗೆ ಅವನಿಗೆ ಹತ್ತಿರವಾಗಿ ನಿಂತು ಬಟನ್ಸ್ ಹಾಕುತ್ತಿರುವಾಗ ಬಿಗಿಯಾಗಿ ಅಪ್ಪಿ ಮುತ್ತಿನ ಮಳೆಗರೆದ. "ಅಯ್ಯೋ, ಬಿಡಿ, ಇಷ್ಟು ಹೊತ್ನಲ್ಲಿ ಇದೆಲ್ಲ ಏನು ? ಆಗ್ಲೆ ಮಾವ ರೆಡಿಯಾಗಿ ಟೇಬಲ್ ಹತ್ತಿರ ಕೂತಿದಾರೆ" ಎಂದು ಕೊಸರಾಡಿದಳು.

"ರಾತ್ರಿಗೆ ಸಿಗ್ತೀಯಲ್ಲ, ಮಾಡ್ತೀನಿ ತಡಿ" ಎಂದ ಗಂಡನಿಗೆ, "ಇವತ್ತು ರಾತ್ರಿ ಅತ್ತೆ ರೂಮಿನಲ್ಲೆ ಮಲಗ್ಬೇಕು, ಅವ್ರಿಗೆ ತುಂಬ ಕಾಲು ನೋವಂತೆ. ಎಣ್ಣೆ ಹಚ್ಚಿ ನೀವಬೇಕು" ಎಂದಳು ವಯ್ಯಾರವಾಗಿ. "ಊಂ, ಹೋಗು ಹೋಗು, ಅವರ್ ಜೊತೇಲೆ ಇರು" ಎಂದು ಹುಸಿ ಮುನಿಸು ತೋರಿದ.

ಟೇಬಲ್ ಬಳಿ ಆಗಲೆ ಮಾವನವರು, ಚಂದನ್ ಕುಳಿತು ತಿಂಡಿ ತಿನ್ನಲು ಪ್ರಾರಂಭಿಸಿದ್ದರು. "ಎಲ್ಲಮ್ಮ ಮದನ್ ? ಅವನ ಕೆಲಸ ಆಯ್ತಾ ?" ಎಂದು ಸೊಸೆಯನ್ನು ಕೇಳಿದರು. "ಬರ್ತಿದಾರೆ" ಎಂದು ಅತ್ತೆಗೆ ಕನ್ನಡಕ ಕೊಡಲು ಹೋದಳು.

ಈಗೊಂದು ವಾರದಿಂದ ಚಂದನ್ ನಡವಳಿಕೆ ಮಾನಸಿಗೆ ಬೇಸರವಾಗಿದೆ. ಸಂದರ್ಭ ಸಿಕ್ಕಾಗೆಲ್ಲ ತನ್ನನ್ನು ಅತಿಯಾಗಿ ಹೊಗಳುವುದು, ತಟ್ಟೆ , ಲೋಟ ಕೊಡುವಾಗ ಬೆರಳು ತಗಲಿಸುವುದು, ಇದ್ಯಾವುದೂ ಅವಳಿಗೆ ಹಿಡಿಸುತ್ತಿಲ್ಲ. ತನ್ನ ಮನದುಮ್ಮಳ ಹೇಳಿಕೊಳ್ಳಲು ಸಾಧ್ಯವಾಗುತ್ತಿಲ್ಲ, ಗಂಡನ ಬಳಿ ಏನೆಂದು ಹೇಳುತ್ತಾಳೆ ? ಅವನು ತಮ್ಮನನ್ನು ಸಮರ್ಥಿಸುತ್ತಾನೆ. ಚಿಕ್ಕವನು ಬಿಡು ಎನ್ನುತ್ತಾನೆ. ತೋತಾರಾಂ ಒಬ್ಬನ ಬಳಿಯೇ ಅವಳ ದುಗುಡ ಕಳೆಯಲು ಸಾಧ್ಯ. ಬಹಳ ಅರ್ಥವಾದವನಂತೆ, ಅವಳ ಕೆನ್ನೆಗೆ ತನ್ನ ಕೊಕ್ಕು ತಗಲಿಸುತ್ತಾನೆ, ಧೈರ್ಯ ಹೇಳುವಂತೆ ಕಿವಿಯಲ್ಲಿ ಕಿಚಕಿಚಗುಟ್ಟುತ್ತಾನೆ. ನಕ್ಕು ಮನ ಹಗುರಗೊಳಿಸಿಕೊಳ್ಳುತ್ತಾಳೆ. ಅದೇ ಸಮಾಧಾನ.

"ಬೆಳಗಿನಿಂದ ಉಸಿರು ತೊಗೋಳ್ಳೊಕ್ಕೂ ಪುರುಸೊತ್ತಿಲ್ಲದ ಹಾಗೆ ಎಲ್ಲಾರೂ ಒಂದೊಂದ್ ಕೆಲ್ಸ ಹೇಳ್ತಾನೆ ಇರ್ತೀವಿ. ಪಾಪ, ಕನ್ನಡಕ ಕೊಟ್ಬಿಟ್ಟು ನೀನು ಬಾಮ್ಮ" ಎನ್ನುತ್ತಾ ಕಾರಿನ ಕೀ ಹಿಡಿದು ಮೆಟ್ಟಲಿಳಿದರು. ನಿತ್ಯವೂ ಮೂವರೂ ಕಾರಿನಲ್ಲಿ ಕುಳಿತು ಮದನ್ ಕಾರು ಸ್ಟಾರ್ಟ್ ಮಾಡುವಾಗ ಸರಿಯಾಗಿ ಅವಳು ಅದರ ಬಲದಿಂದ ಹಾಯ್ದು ಎಡಗಡೆಗೆ ಹೋಗಬೇಕು. ಮೂಢನಂಬಿಕೆಯೋ, ಮನಸ್ಸಿನ ಭ್ರಮೆಯೋ, ಅಂತೂ ಹಾಗೆ ಹೋದ ದಿನ ಅವರ ಅಂಗಡಿಯಲ್ಲಿ ವ್ಯಾಪಾರ ಚೆನ್ನಾಗಿರುತ್ತಿತ್ತು. ಅವಳು ಹಾಗೆ ಬಾರದ ದಿನ ವ್ಯಾಪಾರಾನೇ ಆಗಿಲ್ಲ ಎಂದು ಅವಳ ಮಾವ ನಿಡುಸುಯ್ದದ್ದೂ ಉಂಟು.

ಮದನ್ ಮದುವೆಗೆ ಮುಂಚೆ ಅವರ ಮನೆ ಹೇಗಿತ್ತೋ ಅವರ್ಯಾರಿಗೂ ನೆನಪಿಲ್ಲ. ಈಗ ಮಾನಸಿಯ ಕೈಚಳಕ, ಅವಳಿಗಿರುವ ಶ್ರದ್ಧೆಯಿಂದ, ಮನೆಯೆಲ್ಲ ಆಲಂಕಾರಿಕವಾಗಿತ್ತು. ಮಣ್ಣು, ಕುರುಚಲುಗಳಿಂದ ತುಂಬಿದ್ದ ದೊಡ್ಡ ಕಾಂಪೌಂಡ್, ಈಗ ಬಣ್ಣಬಣ್ಣದ ಹೂಗಳು, ತರಕಾರಿ ಗಿಡಗಳಿಂದ ಹಸುರಾಗಿ, ಸೊಂಪಾಗಿ, ನಳನಳಿಸುತ್ತಿದೆ. ಅದಲ್ಲದೆ ಸೀಬೆ, ದಾಳಿಂಬೆ, ಸಪೋಟ ಗಿಡಗಳೂ ಇವೆ. ಮಾನಸಿಗೆ ಮಧ್ಯಾಹ್ನ ಊಟದ ನಂತರ ಖುಷಿಕೊಡುವ ಕೆಲಸ ಎಂದರೆ ಗಿಡಗಳಿಗೆ ಗೊಬ್ಬರ, ನೀರು ಸಿಂಪಡಿಕೆ ಮತ್ತು ಕಳೆ ಕೀಳುವುದು.

ಎಂದಿನಂತೆ ಅಂದೂ ಮಧ್ಯಾಹ್ನ ತೋಟದಲ್ಲಿ ಸುತ್ತಾಡುವಾಗ, ಸಣ್ಣದಾಗಿ ಪಕ್ಷಿಯೊಂದರ ನರಳಿಕೆ! ಸುತ್ತಲೂ ಕಣ್ಣು ಹಾಯಿಸಿದಳು. ಕಾಣಲಿಲ್ಲ, ಮತ್ತೊಮ್ಮೆ ಪ್ರತೀ ಗಿಡವನ್ನು ಪರೀಕ್ಷಿಸಿದಾಗ ಅಲ್ಲೇ ಸೀಬೆಗಿಡದ ಬದುವಿನಲ್ಲಿ ಪುಟ್ಟ ಗಿಳಿಮರಿ. ಮೇಲಕ್ಕೆ ಹಾರಲಾರದೆ, ತೆವಳಲೂ ಆಗದೆ, ನೋವಿನಿಂದ 'ಚೀವ್ ಚೀವ್' ಎಂದು ಸಣ್ಣ ದನಿಯಲ್ಲಿ ಚೀರುತ್ತಿದೆ. ಅದು ಕಂಡ ಮಾನಸಿ ಥಟ್ಟನೆ ನಾಲ್ಕೈದು ಎಲೆಗಳನ್ನು ಕಿತ್ತು ದೊನ್ನೆಯಾಕಾರ ಮಾಡಿದಳು. ಅದರೊಳಗೆ ಸಣ್ಣ ಬಟ್ಟಲಷ್ಟು ನೀರು ತುಂಬಿಸಿ ಮರಿಯ ಕೊಕ್ಕಿನ ಸಮೀಪಕ್ಕಿಟ್ಟಳು. ಅದು ಕುಡಿಯುವ ತವಕ ತೋರಿತು. ಒಂದು ಚಿಕ್ಕ ರಟ್ಟಿನ ಡಬ್ಬ ತಂದಳು. ಅದರಲ್ಲಿ ಮೆತ್ತನೆಯ ಬಟ್ಟೆ ಚೂರುಗಳನ್ನು ಹಾಸಿಗೆಯಂತೆ ಮಾಡಿ ಆ ಡಬ್ಬ ಬಗ್ಗಿಸಿ ಅದರೊಳಗೆ ಮರಿ ನುಸುಳುವಂತೆ ಮಾಡಿದಳು. ಅತ್ತೆ ನೋಡಿದರು. "ಪಾಪ ಅತ್ತೆ. ಗಿಡಗಳ ಸಂದೀಲಿ ಬಿದ್ದು ನರಳ್ತಾ ಇತ್ತು, ಪುಟಾಣಿ ಗಿಣಿ" ಎಂದಳು ಸಹಾನುಭೂತಿಯಿಂದ. ಅವರೂ ಮರುಕದಿಂದ ನೋಡಿ ನಸುನಕ್ಕರು. ಇಂಥಾ ಮೃದು ಹೃದಯಿಗೆ ಇನ್ನೂ ಏಕೆ ಮಗು ಆಗಲಿಲ್ಲವೋ ? ಅತ್ತೆಯ ಆಲೋಚನೆ.

"ಅತ್ತೆ, ಇದನ್ನೆಲ್ಲಿಡಲಿ?" "ನಿನ್ನ ರೂಮಿನಲ್ಲಿ ಗಾಳಿ ಬೆಳಕು ಚೆನ್ನಾಗಿದೆ ಅಲ್ವಾ, ಅಲ್ಲೇ ಕಿಟಕೀಲಿಡು. ಹಾರಕ್ಕೆ ಕೈಲಾದಾಗ ಅಲ್ಲಿಂದ ಹಾಗೆ ಆಚೆ ಹೋಗುತ್ತೆ" ಅಂದರು. ಅವಳಿಗೂ ಅದೇ ಉತ್ತರ ಬೇಕಾಗಿತ್ತು. ತನ್ನ ರೂಮಿನ ಕಿಟಕಿಯಲ್ಲಿಟ್ಟಳು.

ಮದನ್ ಬಂದ ಕೂಡಲೆ ತೋರಿಸಿದಳು. ಅದು ಹೇಗೆ ಬಂತು ಅಂತ ಕಥೆ ಹೇಳಿದಳು. ಅವಳ ಅರಳು ಮುಖ ನೋಡಿ ಅವನಿಗೂ ಸಂತೋಷ. "ಭೇಷ್, ಒಳ್ಳೆ ಕೆಲಸ ಮಾಡಿದೆ ಕಣಮ್ಮಾ" ಎಂದು ಮಾವನಿಂದಲೂ ಶಹಭಾಸಗಿರಿ ಸಿಕ್ಕಿತು.

ಮಾನಸಿಯ ಮುದ್ದು, ಉಪಚಾರದಿಂದ ಮರಿ ಬೇಗ ಚೇತರಿಸಿತು. ಕಾಳು, ನೀರು, ರೊಟ್ಟಿ ಚೂರು ಎಲ್ಲಾ ಸಮಯಕ್ಕೆ ಸರಿಯಾಗಿ ಒದಗಿಸುತ್ತಿದ್ದಳು. ಕಿಟಕಿ ತೆರೆದಿಟ್ಟರೂ ಹಾರಿ ಹೋಗಲಿಲ್ಲ. ಬದಲು, ಇದು ತನ್ನದೇ ಮನೆ ಎನ್ನುವಂತೆ ಮನೆಯೆಲ್ಲಾ ಹಾರಾಡುತ್ತಿತ್ತು. ಮಾನಸಿ ಮಾತ್ರವೇ ಅಲ್ಲ, ಮನೆಯವರೆಲ್ಲರಿಗೂ ಅಚ್ಚುಮೆಚ್ಚು. ಮನೆಯವರೆಲ್ಲ 'ಮಾನಸಿ' ಎಂದು ಕರೆದರೆ, ತಾನೂ ಅವರನ್ನು ಅನುಕರಿಸಿ ಮಾತನಾಡುತ್ತಿತ್ತು, ತನ್ನದೇ ಭಾಷೆಯಲ್ಲಿ. ತೋತಾರಾಂನನ್ನು ಮಗುವಿಗಿಂತ ಮಿಗಿಲಾಗಿ ಮುದ್ದಿಸುತ್ತಿದ್ದಳು ಮಾನಸಿ. ಚಂದನ್‌ಗೆ ಮಾತ್ರ ಅತ್ತಿಗೆ ಅದನ್ನು ಅಷ್ಟು ಹಚ್ಚಿಕೊಂಡಿದ್ದು ಇಷ್ಟವಾಗಿರಲಿಲ್ಲ.

"ಮದನ್‌ಗೆ ಮದ್ವೆ ಮಾಡಿ ಮೂರು ವರ್ಷಗಳಾಯ್ತು. ಇನ್ನು

## ಸವೆಯುತಿದೆ ದಾರಿ




**ಈ** ಜೇಬಿನಿಂದ ಆ ಜೇಬಿಗೆ
ಆ ಜೇಬಿನಿಂದ ಈ ಜೇಬಿಗೆ
ಕರ್ಚೀಫು ಬಾಚಣಿಗೆ ಕೀಬಂಚು
ಮೊಬೈಲೂ ಸೇರಿಕೊಂಡಿದೆ ಈಚೀಚೆಗೆ;

ಹೊಂದಿಕೆ ಹೊಂದಾಣಿಕೆ ಮರು ಹೊಂದಾಣಿಕೆ -
ಮರಿ ಹೊಂದಾಣಿಕೆಯೂ ಸಾಗುವುದು ತನ್ನಿಚ್ಛೆಗೆ;

ಹೀಗೇ...
ಇಟ್ಟ ಹೆಜ್ಜೆ ಕಿತ್ತು, ಕಿತ್ತ ಹೆಜ್ಜೆ ಇಟ್ಟು
ನಡೆಯಿಂದ ನಡೆಗೆ ನಡೆದಿದೆ ನಡಿಗೆ;
ದಾರಿಯಂತೂ ಸವೆಯುತಿದೆ ಕಿಲೋಮೀಟರುಗಳವರೆಗೆ

ಮುಂಗಾಲು ಊರಿದರೆ ಅನಿಷ್ಟ
ಹಿಮ್ಮಡಿ ಊರಿದರೆ ಕನಿಷ್ಠ
ಹಿರಿತನದ ಹಲ್ಲಿ ಲೊಚಗುಡುವುದ ಬಿಡದು
ಕಾಲು ಬಿದ್ದು ಸೊಂಟ ಮುರಿದು ಎಂದೋ ಮೂಲೆ ಸೇರಿದ್ದರೂ;

ಹೇಗೆ ನಿರ್ಧರಿಸುವುದೋ ತಿಳಿಯದು
ಇಟ್ಟದ್ದು ಮುನ್ನಡೆಯೊ
ಸಾಗಿದ್ದು ಹಿನ್ನಡೆಯೊ
ಕಾದ ಚರ್ಮದ ತಮಟೆ ಸದ್ದಿನ ಹದ
ನೋಡುವುದರಲ್ಲೇ ಕಳೆದೀತೇನೊ ಆಯಸ್ಸು ಅಷ್ಟೂ !



**ಡಾ|| ಬೋರೇಗೌಡ ಚಿಕ್ಕಮರಳಿ**
'ಸಿದ್ಧಿ', ನಂ. ೫೮/೭, ಶಾಂತಿನಗರ, ೨ನೇ ಹಂತ
ಪಾಂಡವಪುರ – ೫೭೧ ೪೩೪, ಮಂಡ್ಯ ಜಿಲ್ಲೆ

ಚಂದನ್‌ಗೂ ಒಂದು ಹುಡುಗಿ ನೋಡಿಬಿಟ್ರೆ ನಮಗಿನ್ನು ಆರಾಂ. ಮಾನಸಿಗೂ ಮನೆಯಲ್ಲಿ ಜೊತೆ ಸಿಗುತ್ತೆ, ನಮ್ಮ ಜವಾಬ್ದಾರೀನೂ ಮುಗಿಯುತ್ತೆ" ಎಂದರು ತಾಯಿ.

"ನಂಗೀಗ್ಲೆ ಮದ್ವೆ ಬೇಡ" ಎನ್ನುತ್ತಾ ರೂಮಿ ನೊಳಗೆ ಹೋದ ಚಂದನ್. ಅಣ್ಣ ರೇಗಿಸಿದ.

"ಏಯ್ ಚಂದನ್, ನಿನಗೆಂಥ ಹುಡ್ಗಿ ಬೇಕು ಹೇಳೋ, ಮ್ಯಾಟ್ರಿಮೋನಿಯಲ್‌ಡಾಟ್‌ಕಾಂನಲ್ಲಿ ಹಾಕೋಣ."

"ನಂಗೆ ಅತ್ತಿಗೆಯಂಥ ಹುಡುಗಿ ಸಿಕ್ತಾಳಾ ನೋಡು, ಹಾಗಾದ್ರೆ ಈಗ್ಲೇ ರೆಡಿ."

ಅವನ ಮಾತು ಕೇಳಿ "ಹೋ ಹೋ" ಎಂದು ಗಟ್ಟಿಯಾಗಿ ನಕ್ಕ. "ನೋಡು ಮಾನಸಿ, ನೀನು ಅಂದ್ರೆ ಅವನಿಗೆಷ್ಟು ಪ್ರೀತಿ" ಎಂದು ಪ್ರೇಮದಿಂದ ಹೆಂಡತಿಯ ಕಡೆ ನೋಡಿದ. ಮಾನಸಿ ಬಲವಂತವಾಗಿ ನಕ್ಕಳು.

ಇತ್ತೀಚೆಗೆ ಚಂದನ್ ಮೊದಲಿನಂತಿಲ್ಲ ಎಂದು ಗಮನಿಸಿದ್ದಾಳೆ. ಅವನ ನೋಟ ವಿಚಿತ್ರ ಎನ್ನಿಸುತ್ತಿದೆ. ರಾತ್ರಿ ಊಟವಾದ ನಂತರ ರೂಮಿನಲ್ಲಿ ಮದನ್ ತನ್ನ ಹೆಂಡತಿಗೆ ಹೇಳುತ್ತಿದ್ದ, "ನಿನ್ನಂಥವಳೇ ಬೇಕಂತೆ ನೋಡು, ಯಾರಾದ್ರು ಇದಾರಾ ?" ಹಾಸಿಗೆಯನ್ನು ಸರಿಪಡಿಸುತ್ತಾ ಮಾನಸಿ ಅವನ ಸಮೀಪದಲ್ಲೇ ಬಗ್ಗಿ ನಿಂತಿದ್ದಳು. ಅವಳ ದುಪ್ಪಟ್ಟ ಸ್ವಲ್ಪ ಸರಿದಿತ್ತು. ಅವಳು ಅದನ್ನು ಸರಿಪಡಿಸಿಕೊಳ್ಳುವ ಮೊದಲೇ ಬಾಚಿ ತಬ್ಬಿದ ಮದನ್. ಇನ್ನೇನು ಅವಳಿಗೆ ಚುಂಬನ ಕೊಡಬೇಕು, ಅಷ್ಟರಲ್ಲಿ ಬಾಗಿಲ ಬಳಿ ಸದ್ದಾಯಿತು. ಹಾಗೆ ತಿರುಗಿ ನೋಡಿದಳು. ಚಂದನ್ ರೆಪ್ಪೆ ಹಾಕದೆ ಅವಳನ್ನೇ ನೋಡುತ್ತಿದ್ದಾನೆ. ಸರಿದ ದುಪ್ಪಟ್ಟದ ಒಳಗಿಂದ ಅವಳ ದುಂಡು ಸ್ತನಗಳು ಸ್ವಲ್ಪಸ್ವಲ್ಪವೇ ಕಾಣಿಸುತ್ತಿವೆ. ಅವಸರವಸರವಾಗಿ ಗಂಡನ ಬಾಹುಗಳಿಂದ ತಪ್ಪಿಸಿಕೊಂಡು, ದುಪ್ಪಟ್ಟ ಸರಿಪಡಿಸಿಕೊಂಡಳು.

"ಸಾರಿ ಅಣ್ಣ, ನಾನು ಬಾಗಿಲು ತಟ್ಟಿದೆ, ನಿಮಗೆ ಕೇಳಿಸಲಿಲ್ಲ."

"ಇಲ್ಲ ಪರವಾಗಿಲ್ಲ ಬಿಡು. ಬಾ, ಏನ್ಸಮಾಚಾರ ?" ಎಂದ ಅಣ್ಣ.

"ಏನಿಲ್ಲ. ನಾಳೆ ನನ್ನ ಫ್ರೆಂಡ್ ನಿಲೇಶನ ಹುಟ್ಟಿದ ಹಬ್ಬ. ನಾಲ್ಕು ವರ್ಷಗಳ ಕೆಳಗೆ ಸ್ಟೇಟ್ಸ್‌ಗೆ ಹೋದವನು ಈಗ್ಲೇ ಬಂದಿರೋದು. ಅವನ ಹುಟ್ಟಿದ ಹಬ್ಬಕ್ಕೆ ಏನು ಗಿಫ್ಟ್ ಕೊಟ್ರೆ ಚೆನ್ನಾಗಿರುತ್ತೆ ಅಂತ ಅತ್ತಿಗೇನ ಕೇಳಕ್ಕೆ ಬಂದೆ" ಎಂದ, ಬಾಗಿಲ ಬಳಿಯೇ ನಿಂತು. ಮಾನಸಿಯ ಮುಖದ ಬಣ್ಣ, ಅವಳ ದುಪ್ಪಟ್ಟದೊಂದಿಗೆ ಪೈಪೋಟಿಯಂತೆ ಇನ್ನೂ ಕೆಂಪಗಾಗಿತ್ತು. ಅತ್ತಿಗೆ ಇಂದು ಹೊಸದಾಗಿ ಕಾಣಿಸಿದಳು, ಅಲ್ಲ, ಚಂದನ್ ಕಣ್ಣಲ್ಲಿ ಇಂದು 'ಮಾನಸಿ' ಹೊಸದಾಗಿ ಕಾಣಿಸಿದಳು.

"ಅಲ್ವೋ ಚಂದನ್, ನಿನ್ನ ಸ್ನೇಹಿತನಿಗೆ ಉಡುಗೊರೆ ಕೊಡೋಕ್ಕೆ ಅತ್ತಿಗೆ ಏನೋ ಹೇಳ್ತಾಳೆ ?"

ಅಣ್ಣ ನಸುನಗುತ್ತಾ ಮಾತನಾಡಿದ್ದೇ ಸಲೀಸಾಯ್ತು, ಒಳಗೆ ಬಂದು ಕುರ್ಚಿ ಆಕ್ರಮಿಸಿದ. ಮಾನಸಿಯನ್ನೇ ಕಣ್ಣುಗಳಲ್ಲಿ ತುಂಬಿಕೊಳ್ಳುತ್ತಾ "ಅತ್ತಿಗೆಯ ಛಾಯ್ಸ್ ತುಂಬ ಚೆನ್ನಾಗಿರುತ್ತೆ" ಎಂದು ಅವಳನ್ನೇ ನೋಡಿದಾಗ ಗಲಿಬಿಲಿಗೊಂಡಳು ಮಾನಸಿ. ತೋತಾರಾಂ ಹಾರಿ ಬಂದು ಅವಳ ಭುಜದ ಮೇಲೆ ಕುಳಿತ, ಕಿವಿಯೊಳಗೆ ಏನೋ ಉಸುರುವಂತೆ ತನ್ನ ಚೂಪಾದ ಕೊಕ್ಕನ್ನು ಅವಳ ಕಿವಿಗೆ ಆನಿಸಿದ. ನಂತರ ಹಾರಿ ಚಂದನ್ ಸುತ್ತ ಹಾರುತ್ತಾ ರೆಕ್ಕೆ ಬಡಿದ. "ಮಾನಸಿ ನೀನು ಹೇಳುವವರೆಗೂ ಇವ್ನು ನಮ್ಮ ರೂಮಿಂದಾಚೆ ಹೋಗೊಲ್ಲ" ಎಂದು ತಮಾಷೆ ಮಾಡಿದ ಮದನ್.

"ಯಾವುದಾದ್ರು ಷೋಪೀಸ್ ಅಥವಾ ರಿಸ್ಟ್‌ವಾಚ್ ಆಗುತ್ತೇನೋ ?" ಮೆಲ್ಲನೆ ಉಸುರಿದಳು.

"ವೆರಿ ಗುಡ್ ಐಡಿಯಾ. ಅವನ್ಗೂ ಟೈಮ್ ಸೆನ್ಸ್ ಇಲ್ಲ ನನ್ತಾಗೆ" ಎಂದು ತನ್ನ ಜೋಕಿಗೆ ತಾನೇ ನಗುತ್ತಾ "ನೋಡಿದ್ಯಾ ಅಣ್ಣ, ಸುಂದರವಾಗಿರೊವ್ರಿಗೆ ಸುಂದರವಾದದ್ದೇ ಹೊಳೆಯುತ್ತೆ" ಎಂದ ಮೆಚ್ಚುಗೆಯಿಂದ ಅತ್ತಿಗೆಯನ್ನುದ್ದೇಶಿಸಿ. ಅವಳು ಅಲ್ಲಿಂದೆದ್ದು ಅಡಿಗೆಯ ಮನೆ ಕಡೆ ಹೊರಟಳು ನೀರು ತರುತ್ತೇನೆಂದು. ಅಣ್ಣ ತಮ್ಮಂದಿರ ಮಾತು ವ್ಯಾಪಾರದ ಕಡೆ ಹೊರಳಿತು.

"ಏನೇ ಹೇಳಣ್ಣ, ನೀನು ತುಂಬ ಲಕ್ಕಿ. ಅತ್ತಿಗೇಂಥಾವ್ರು, ನಿನ್ನ ಲೈಫ್ ಪಾರ್ಟ್ನರ್ ಆಗಿರೋದು." ಅವನು ಹೋದ ಕೂಡಲೆ ಒಳಗೆ ಬಂದಳು ಮಾನಸಿ.

## ಅಭಿನಂದನೆ

ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯವರು ನೀಡುವ 'ಶ್ರೇಷ್ಠ ಲೇಖಕ' ಪ್ರಶಸ್ತಿಯು ೨೦೧೧–೧೨ರ ಸಾಲಿನಲ್ಲಿ ವೈದ್ಯಕೀಯ ವಿಭಾಗದಲ್ಲಿ ನವಕರ್ನಾಟಕ ಪ್ರಕಟಿಸಿರುವ 'ಆರೋಗ್ಯ ಆಶಯ' ಕೃತಿಯ ಲೇಖಕರಾದ ಡಾ|| ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ ಅವರಿಗೆ ಲಭಿಸಿದೆ. ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಈಗೊಂದು ವಾರದಿಂದ ಚಂದನ್ ನಡವಳಿಕೆ ಮಾನಸಿಗೆ ಬೇಸರವಾಗಿದೆ. ಸಂದರ್ಭ ಸಿಕ್ಕಾಗೆಲ್ಲ ತನ್ನನ್ನು ಅತಿಯಾಗಿ ಹೊಗಳುವುದು, ತಟ್ಟೆ, ಲೋಟ ಕೊಡುವಾಗ ಬೆರಳು ತಗಲಿಸುವುದು, ಇದ್ಯಾವುದೂ ಅವಳಿಗೆ ಹಿಡಿಸುತ್ತಿಲ್ಲ. ತನ್ನ ಮನದುಮ್ಮಳ ಹೇಳಿಕೊಳ್ಳಲು ಸಾಧ್ಯವಾಗುತ್ತಿಲ್ಲ, ಗಂಡನ ಬಳಿ ಏನೆಂದು ಹೇಳುತ್ತಾಳೆ ? ಅವನು ತಮ್ಮನನ್ನು ಸಮರ್ಥಿಸುತ್ತಾನೆ. ಚಿಕ್ಕವನು ಬಿಡು ಎನ್ನುತ್ತಾನೆ. ತೋತಾರಾಂ ಒಬ್ಬನ ಬಳಿಯೇ ಅವಳ ದುಗುಡ ಕಳೆಯಲು ಸಾಧ್ಯ. ಬಹಳ ಅರ್ಥವಾದವನಂತೆ, ಅವಳ ಕೆನ್ನೆಗೆ ತನ್ನ ಕೊಕ್ಕು ತಗಲಿಸುತ್ತಾನೆ, ಧೈರ್ಯ ಹೇಳುವಂತೆ ಕಿವಿಯಲ್ಲಿ ಕಿಚಕಿಚ ಗುಟ್ಟುತ್ತಾನೆ. ನಕ್ಕು ಮನ ಹಗುರಗೊಳಿಸಿಕೊಳ್ಳುತ್ತಾಳೆ. ಅದೇ ಸಮಾಧಾನ.

ಮಾನಸಿಯ ಅತ್ತೆ, ಮಾವ ತುರ್ತಾಗಿ ಊರಿಗೆ ಹೊರಡಬೇಕಾಗಿ ಬಂತು. ಮದನ್‌ನ ಸೋದರಮಾವನ ಒಬ್ಬಳೇ ಮಗಳ ಮದುವೆ ! ಹೋಗಲೇಬೇಕು. ಸೊಸೆ ಮನೆ ನೋಡಿಕೊಳ್ಳುತ್ತಾಳೆ ಎಂಬ ಧೈರ್ಯ ಮಾಡಿ ಹೊರಟರು. ಮದುವೆಯ ಮನೆಯಲ್ಲಿ ಚಂದನ್‌ಗೂ ಒಂದು ಒಳ್ಳೆಯ ಹೆಣ್ಣು ನೋಡಬಹುದು ಎಂದು ಯೋಚಿಸಿ, ಅವನನ್ನು ಕರೆದರು. ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿದ. ಮದುವೆ ಮನೆ, ಗಲಾಟೆ ಅವನಿಗೆ ಇಷ್ಟವಿಲ್ಲ.

ಎಂದಿನಂತೆ ಕಾರು ಚಲಿಸುವ ಮುಂಚೆ ಮಾನಸಿ ಎದುರಾಗಬೇಕು. ಮಾವ ಕಾರ್ ಸ್ಟಾರ್ಟ್ ಮಾಡಿದಾಗ ಚಂದನ್ ಇನ್ನೂ ಹೊರಗೇ ನಿಂತಿದ್ದ. ಅವಳು ದಾಟುವಾಗ ಏನೋ ಕಾಲಿಗೆ ತೊಡರಿದಂತಾಗಿ, ಬೀಳುವವಳಿದ್ದಳು. ಮದನ್‌ಗಿಂತ ಮುಂಚೆ, ಚಂದನ್ ಛಕ್ಕನೆ ಬಂದು ಅವಳನ್ನು ಎತ್ತಿ ಹಿಡಿದ ಅರೆಕ್ಷಣ ! ತನ್ನ ಕೆನ್ನೆಯನ್ನು ಅವಳ ಕೆನ್ನೆಗೆ ತಗುಲಿಸಿದ. ಸಾವರಿಸಿಕೊಂಡಳು. "ಜಾಗ್ರತೆ ಮಾನಸಿ !" ಎನ್ನುತ್ತಾ ಅತ್ತೆ ಮಾವ ಊರಿಗೆ ಹೊರಟರು. ಮನಸ್ಸಿಗೆ ಏನೋ ಅಪಶಕುನ ಎನ್ನಿಸಿದರೂ, "ಜಾಗ್ರತೆ !" ಎಂದಾಗ ಅವರನ್ನೇ ಅನುಕರಿಸಿತು ತೋತಾರಾಂ ಅವಳ ಭುಜದ ಮೇಲೆ ಕುಳಿತು.

ರಾತ್ರಿ ಅಂಗಡಿ ಬಾಗಿಲು ಹಾಕಿ ಬಂದ ಮದನ್ ಹೆಂಡತಿಗಾಗಿ ಸಿಹಿತಿಂಡಿ ತಂದ. ಬಾಗಿಲಲ್ಲೇ ಕಾದಿದ್ದ ಅವಳನ್ನು ತುಂಬುತೋಳಿನಲ್ಲಿ ಹಿಡಿದು ಬಾಗಿಲು ಭದ್ರಪಡಿಸಿ ಅವಳನ್ನೆತ್ತಿಕೊಂಡೇ ಒಳಗೆ ಬಂದ. ಮದುವೆಯಾಗಿ ಮೂರು ವರ್ಷಗಳ ನಂತರ ಇದೇ ಮೊದಲ ಬಾರಿಗೆ ಅವರಿಬ್ಬರೇ ಮಧುರ ಲೋಕದಲ್ಲಿ ತೇಲಾಡಿದರು. ರಾತ್ರಿ ಕಳೆದು ಬೆಳಗಾದದ್ದೂ ಅರಿವಿಲ್ಲದಷ್ಟು ಸಿಹಿ ಕ್ಷಣಗಳು !

"ಹೀಗೇ ನಿನ್ಜೊತೇಲಿ ಇದ್ದುಬಿಡ್ತೀನಿ, ಇವತ್ತು ಅಂಗಡಿ ಬಾಗಿಲು ತೆಗೆಯೋಲ್ಲ. ವಿಠ್ಠೂಗೆ ಫೋನ್ ಮಾಡಿ ಹೇಳ್ತೀನಿ" ಎಂದ ಅವಳನ್ನು ಏಳಲೂ ಬಿಡದೆ, ಮತ್ತಷ್ಟು ತಬ್ಬಿ ಮಲಗುತ್ತಾ.

"ಉಷ್ ! ತೋತಾರಾಂ ನೋಡ್ತಾ ಇದಾನೆ. ಏಳಿ, ಅಂಗಡಿಗೆ ಹೋಗಿ ಬನ್ನಿ. ಬೇಗ ಬಂದ್ಬಿಡಿ" ಎಂದು ಅವನ ತುಟಿಗಳನ್ನು ಮುಚ್ಚಿದಳು, ತನ್ನ ಅಧರಗಳಿಂದ.

ಸಂಜೆ ಬೇಗನೇ ಬಂದದ್ದೇ, "ಆಚೆ ಹೋಗಿ ಬರೋಣ ನಡಿ" ಎಂದು ಅವಳನ್ನು ಒತ್ತಾಯಿಸಿ ಹೊರಗೆ ಕರೆದೊಯ್ದ.

ಅಕ್ಕಪಕ್ಕದವರಿಗೂ ಅಚ್ಚರಿ !

"ಎಷ್ಟು ಸುಂದರವಾಗಿದ್ದಾಳೆ" ಎಂದು ನೆರೆಹೊರೆ ಮಾತನಾಡಿಕೊಂಡರು.

"ಮುದ್ದಾದ ಜೋಡಿ" ಎಂದರು ಕೆಲವರು.

ಎರಡು ದಿನಗಳು ಕಳೆದದ್ದು, ಏನೋ ಉಲ್ಲಾಸ, ಹೊಸತನ ಅವಳಲ್ಲಿ. 'ಎಷ್ಟು ಚೆಂದ ಈ ಜೀವನ' ಎಂದು ಹಾಡು ಗುನುಗುತ್ತಾ ದಿನ ಪ್ರಾರಂಭಿಸಿದಳು.

"ಮಾನಸಿ ಇವತ್ತು ನಾಲ್ಕು ಘಂಟೆಗೇ ಬಾಗಿಲು ಹಾಕಿ ಬರ್ತೀನಿ."

"ಯಾಕೆ ?!" ತನಗೂ ಮನದಲ್ಲಿ ಆಸೆ ಬೇಗ ಬರಲಿ ಎಂದು. ಆದರೆ ವ್ಯಾಪಾರ ನಿರ್ಲಕ್ಷಿಸಿದರೆ ?

"ನಾಳೆ ಮಾವನಿಗೆ ತಿಳಿದರೆ ?"

"ವಿಶ್ವೂ ಬರಲ್ವಂತೆ. ಮಧೂ ಒಬ್ನೇ ಆಗ್ತಾನೆ. ಚಂದನ್ ಕೂಡಾ ಊರಲಿಲ್ಲ ಅದಕ್ಕೇ." ಸರಿ ಎನ್ನುವಂತೆ ತಲೆಯಾಡಿಸಿದಳು.

"ಮಾನಸಿ, ನಮ್ಮ ಈ ಪ್ರಣಯದ ಚಿಹ್ನೆಯಾಗಿ ಇನ್ನು ನಮಗೊಬ್ಬ ಮಗ ಅಥವಾ ಮಗಳು !"

"ಥೂ, ಹೋಗಿ ನೀವು" ಎಂದು ನಾಚಿಕೆಯಿಂದ ಮುಖ ತಿರುಗಿಸಿದಳು.

"ಬೇಗ ಬರ್ತೀನಿ, ನಾಳೆ ಬೆಳಗ್ಗೆವರೆಗೆ ನಾವು ಈ ಥರ ಇಬ್ರೇ. ನಾಳೆ ಬೆಳಿಗ್ಗೇಗೆ ಅವರು ಬರ್ತಾರೆ" ಎನ್ನುತ್ತಾ ಮದನ್ ಹೊರಟ.

ತೋತಾರಾಂನನ್ನು ಮುದ್ದಿಸಿದಳು. "ನಿಂಗೂ ಕೇಳಿಸ್ತಾ ಅವರು ಹೇಳಿದ್ದು. ಪುಟ್ಟಮಗು ಬೇಕಂತೆ." ಮಧ್ಯಾಹ್ನ ನಾಲ್ಕು ಘಂಟೆಯವರೆಗೂ ಕಾಲ ಕಳೆಯುವುದೇ ಕಷ್ಟವಾಗಿತ್ತು. ತಾನು ಯಾವ ಡ್ರೆಸ್ ಹಾಕಿಕೊಂಡರೆ ಮದನ್‌ಗೆ ಇಷ್ಟ ಎನ್ನುವ ಯೋಚನೆಯಲ್ಲೆ ಮಧ್ಯಾಹ್ನದವರೆಗೂ ಕಾಲ ಕಳೆದಳು. ನಾಲ್ಕು ಘಂಟೆಗೆ ಸರಿಯಾಗಿ ಬಾಗಿಲ ಬಳಿ ಸದ್ದು. ಬೆಲ್ ಆಯ್ತು. 'ಬಂದೇ ಬಿಟ್ರು' ಎನ್ನುತ್ತಾ ಗಡಬಡಿಸಿ ಬಾಗಿಲು ತೆರೆದಳು. ಮುಖದ ತುಂಬ ನಗು ಹರಡಿತ್ತು.

ಸಂಜೆ ಆರು ಘಂಟೆಗೆ ಮದನ್ ಬಂದ. ತಾನು ಲೇಟಾಗಿ ಬಂದದ್ದಕ್ಕೆ ಕ್ಷಮಾಪಣೆ ಕೇಳುವ ಬಗ್ಗೆ ಯೋಜನೆ ಹಾಕಿದ್ದ. ಸಣ್ಣಗೆ ಸಿಳ್ಳೆ ಹಾಕುತ್ತಾ ಬಂದವನಿಗೆ ಬಾಗಿಲು ಸುಮ್ಮನೆ ಮುಂದೂಡಿತ್ತು. ತಳ್ಳಿಕೊಂಡೇ ಒಳಬಂದ. "ಮಾನಸಿ" ಎಂದು ಕೂಗಿದ. ಉತ್ತರವಿಲ್ಲ. ಎರಡು ಸಲ, ಮೂರು ಸಲ ಕೂಗಿದರೂ ಎಲ್ಲಿಂದಲೂ 'ಬಂದೆ' ಎನ್ನುವ ಉತ್ತರವಿಲ್ಲ. ಒಳಗೆ ತನಗಾಗಿ ಕಾಯುತ್ತಾ ಇದ್ದಾಳೆ ಎಂಬ ತವಕದಿಂದ ಬಂದ ಮದನ್‌ಗೆ, ಆಘಾತ ಕಾದಿತ್ತು. ನೆಲದ ಮೇಲೆ ಅಂಗಾತಳಾಗಿ ಬಿದ್ದಿದ್ದಾಳೆ ಮಾನಸಿ. ಅವಳ ಬಟ್ಟೆಗಳು ಅಸ್ತವ್ಯಸ್ತ. ಕಳ್ಳರು ನುಗ್ಗಿ ದೋಚಿರಬಹುದೇ ಎಂದರೆ, ಅವಳ ಮೇಲಿನ ಒಡವೆಗಳೆಲ್ಲಾ ಹಾಗೆ ಇವೆ. ಮಂಚದ ಮೇಲಿನ ಛದ್ದರ್ ಎಳೆದಾಡಿದಂತಿದೆ. ಮದನ್‌ಗೆ ಮಾತೇ ಹೊರಡುತ್ತಿಲ್ಲ. ಅಚೇತನಾಗಿ ಹಾಗೇ ಕುಳಿತುಬಿಟ್ಟ.

'ಮಾನಸಿ' 'ಮಾನಸಿ' ಎನ್ನುತ್ತಾ ತೋತಾರಾಂ ರೆಕ್ಕೆ ಬಡಿಯುತ್ತ ಮನೆಯೆಲ್ಲಾ ಹಾರಾಡುತ್ತಿದೆ, ಚೀರುತ್ತಿದೆ.

"ಮಾನಸಿ, ಮಾನಸಿ, ಮಾತಾಡು" ಎಂದು ಮದನ್ ಅವಳ ದೇಹವನ್ನು ಜಗ್ಗಾಡಿಸುತ್ತಿದ್ದಾನೆ. ಮಾತಾಡಲು ಆಗಿದ್ದರೆ, ನಡೆದದ್ದೇನೆಂದು ಹೇಳುತ್ತಿದ್ದಳೇನೋ, ಆದರೆ ಮಾತನಾಡದವಳಾಗಿ ಬಿದ್ದಿದ್ದಳು.

ಎಷ್ಟು ಹೊತ್ತು ಹಾಗೇ ಕುಳಿತಿದ್ದನೋ, ಅವನ ತಂದೆ, ತಾಯಿ, ಚಂದನ್ ಬಂದಾಗಲೆ ಅವನಿಗೆ ಸ್ಮೃಹೆ ಬಂದದ್ದು. ಬಂದವರೇ ನಿಶ್ಚೇಷ್ಟರಾದರು. ಚಂದನ್‌ಗಂತು ಧಾರೆಯಾಗಿ ಸುರಿಯುತ್ತಿದೆ ಕಣ್ಣೀರು. ಯಾರನ್ನು ಯಾರು ಸಮಾಧಾನಪಡಿಸಬೇಕು? ತೋತಾರಾಂ ಮಾತ್ರ "ಚೋರ್" "ಚೋರ್" ಅಂತ ಅರಚುತ್ತಿದ್ದ.

ಪೊಲೀಸರು ಬಂದರು. ಮನೆಯೆಲ್ಲ ಶೋಧಿಸಿದರು. ಪಕ್ಕದ ಮನೆಯವರನ್ನು ಪ್ರಶ್ನಿಸಿದರು. ಯಾರಿಗೂ ಅರ್ಥವಾಗದ, ಬಗೆಹರಿಯದ ಪ್ರಶ್ನೆ. ಒಂದು ವಾರ ಕಳೆಯಿತು, ಹದಿನೈದು ದಿನ ಕಳೆಯಿತು. ಮನೆಯಲ್ಲಿ ಸ್ಮಶಾನ ಮೌನ. ತೋತಾರಾಂನ ಗಲಾಟೆ ಬಿಟ್ಟರೆ ಬೇರಾರು ಮಾತೂ ಆಡಲಾರದೆ ಮೂಕರಾಗಿದ್ದಾರೆ ಈ ಬೀಭತ್ಸ ಘಟನೆಯಿಂದ.

ಪೊಲೀಸ್ ಇನ್ಸ್‌ಪೆಕ್ಟರ್ ಶ್ಯಾಮ್‌ನೊಂದಿಗೆ ಜಗ್ಗೂರಾಂ ಕಾನ್ಸ್‌ಸ್ಟೆಬಲ್ ಬಂದವನು ಹೇಳಿದ "ನನಗೆ ಪಕ್ಷಿಗಳ ಭಾಷೆ ಗೊತ್ತಿದೆ. ತೋತಾರಾಂನನ್ನು ಪ್ರಶ್ನಿಸುತ್ತೀನಿ." ಗಿಣಿಯನ್ನು ಕಾಳು, ನೀರು ಕೊಟ್ಟು ಹತ್ತಿರಕ್ಕೆ ಬರಮಾಡಿಕೊಂಡ. ಅದರ ಭಾಷೆ ಎನ್ನುವಂತೆ ಏನೋ ಕಿಚಕಿಚ ಎಂದ. ಅದು ಅವನ ಭುಜದ ಮೇಲೆ ವಾಲಿತು, ಕಿವಿಯಲ್ಲಿ ಏನೋ ಉಸುರಿತು. ಅದೇನು ಹೇಳಿತೋ, ಅವನೇನು ಸಮಾಧಾನ ನೀಡಿದನೋ, ಚಂದನ್‌ನನ್ನು ಕರೆದುಕೊಂಡು ಹೋದರು ಎನ್‌ಕ್ವೈರಿಗೆ.

"ಇನ್ಸ್‌ಪೆಕ್ಟರ್ ! ನೀವು ತಪ್ಪು ತಿಳಿದಿದ್ದೀರಿ. ನನಗೆ ನಮ್ಮತ್ತಿಗೆ ಅಂದರೆ ಬಹಳ ಪ್ರೀತಿ ಇತ್ತು" ಎಂದು ಬಿಕ್ಕಿದ. ಮನೆಯ ಉಳಿದವರೂ ವಿರೋಧ ತೋರಿಸಿದರು.

"ಹೌದು ! ನಿಮಗೆ ಅತ್ತಿಗೆಯ ಮೇಲೆ ಪ್ರೀತಿ ಇತ್ತು ಅಂತಾನೆ ತೋತಾರಾಂ ಹೇಳಿದ್ದು, ಇಲ್ಲಿ ನೋಡಿ ನಿಮ್ಮತ್ತಿಗೇನೂ ಅದೇ ಬರೆದಿಟ್ಟಿದ್ದಾಳೆ" ಎಂದು ಮೊದಲನೆ ದಿವಸವೇ ಅವಳ ಡೈರಿ ತೆಗೆದು ವಶಪಡಿಸಿಕೊಂಡಿದ್ದ ಇನ್ಸ್‌ಪೆಕ್ಟರ್ ಹೇಳಿದರು.

"ಅವನು ಊರಲ್ಲೆ ಇರಲಿಲ್ಲ" ತಮ್ಮನ ಕಡೆ ವಹಿಸಿ ಮಾತನಾಡಿದ ಮದನ್.

"ನೋಡಿ ಯಾವ ಆಧಾರವೂ ಇಲ್ಲದೆ ತಪ್ಪಿತಸ್ಥನನ್ನು ಹಿಡಿಯಲಾರೆವು. ಈಗ ನಮಗೆ ಸಿಕ್ಕಿರುವ ಆಧಾರವೆಂದರೆ, 'ಈಗ ಬಹಳ ದಿನಗಳಿಂದ ಚಂದನ್ ಯಾಕೊ ಬಹಳ ವಿಚಿತ್ರವಾಗಿ ಬಿಹೇವ್ ಮಾಡ್ತಿದ್ದಾನೆ. ಆದಷ್ಟು ಅವನ ಮುಂದೆ ಓಡಾಡದಿರಲು ಪ್ರಯತ್ನ ಮಾಡ್ತಿದ್ದೀನಿ. ಯಾರ ಬಳಿ ಹೇಳಿಕೊಳ್ಳಲಿ ನನ್ನ ಅಳಲನ್ನು ? ತೋತಾರಾಂ ಮನುಷ್ಯನಾಗಿದ್ದರೆ, ಹೇಳಬಹುದಾಗಿತ್ತು. ಅದು ಗಿಣಿಯಾದರೂ ನನ್ನನ್ನು ಅರ್ಥ ಮಾಡಿಕೊಂಡಿದೆ. ಹಿಂದಿನ ಜನ್ಮದಲ್ಲಿ ನನ್ನ ತಾಯಿಯೋ, ತಂಗಿಯೋ ಆಗಿರಬೇಕು. ಅದಕ್ಕೆ ಮಾತ್ರವೇ ಅರ್ಥವಾಗುತ್ತಿದೆ. ಚಂದನ್ ಕಣ್ಣುಗಳಲ್ಲಿ ಆವೇಶ ಎಲ್ಲಾ ನೋಡಿದರೆ ನನಗೆ ಹೆದರಿಕೆಯಾಗುತ್ತೆ. ದೇವರ ದಯೆಯಿಂದ ಅವನಿಗೊಂದು ಹೆಣ್ಣು ನೋಡಿ ಮದುವೆ ಮಾಡಿಬಿಟ್ಟರೆ ನಾನು ಎಷ್ಟೋ ನಿರಾಳವಾಗಿ ಉಸಿರಾಡುವೆ.' ಒಂದೊಂದು ಪುಟದಲ್ಲೂ, ಈಗೆರಡು ಮೂರು ತಿಂಗಳಿಂದ ಚಂದನ್ ಬಗ್ಗೆ ಹೆದರಿಕೆ ತೋಡಿಕೊಂಡಿದ್ದಾಳೆ. ಅದಕ್ಕೆ ಅವನನ್ನು ಸೂಕ್ಷ್ಮವಾಗಿ ಗಮನಿಸಿ, ಈಗ ಅವನನ್ನು ಕರೆದುಕೊಂಡು ಹೋಗುತ್ತಿರುವುದು."

ಎಷ್ಟೋ ಪೆಟ್ಟು ತಿಂದ ಮೇಲೆ ನಿಜ ಒಪ್ಪಿಕೊಂಡ. ಅವಳನ್ನು ಹೇಗಾದರೂ ಅನುಭವಿಸಲೇಬೇಕು ಎಂದು ನಿಶ್ಚಯಿಸಿಬಿಟ್ಟಿದ್ದ. ಊರಿಗೆ ಹೋದವನು, ಮದುವೆ ಮನೆಯ ಗಲಾಟೆಯಲ್ಲಿದ್ದ ತಂದೆ-ತಾಯಿಗೆ ಗೊತ್ತಾಗದಂತೆ ಹಿಂತಿರುಗಿ ಬಂದು, ಬಚ್ಚಿಟ್ಟುಕೊಂಡು, ಮನೆಗೆ ಬಂದಿದ್ದಾನೆ. ಕೊಸರಾಡಿದರು ಬಿಡದೆ, ಅವಳನ್ನು ಕಟ್ಟಿಹಾಕಿ ಅನುಭವಿಸಿದ್ದಾನೆ. ಬದುಕಿದ್ದರೆ ಹೇಳಿಬಿಡುತ್ತಾಳೆ ಎಂದು, ಅವಳ ದುಪ್ಪಟ್ಟದಿಂದಲೇ ಅವಳ ಕತ್ತು ಕುಯ್ದಿದ್ದಾನೆ. ತೋತಾರಾಂನೆ ಇದಕ್ಕೆಲ್ಲಾ ಸಾಕ್ಷಿ. ಅದಕ್ಕೇ 'ಚೋರ್, ಚೋರ್' ಎಂದು ಚಂದನ್‌ನನ್ನು ತೋರಿಸುತ್ತಿದೆ. ಇನ್ಸ್‌ಪೆಕ್ಟರ್‌ಗೆ ಅದೇಕೊ ಅನುಮಾನ ಬಂದು ಜಗ್ಗೂರಾಂನೊಂದಿಗೆ ಸ್ವಲ್ಪ ನಾಟಕವಾಡಿದರು. ಇವನೇ ತಪ್ಪಿತಸ್ಥ ಎಂದು ತೀರ್ಮಾನಿಸಿದರು. ಈಗ ತೋತಾರಾಂ ಸಂತೋಷದಿಂದ ಮನೆಯಿಂದಾಚೆ ಹಾರಿಹೋಯಿತು. ಸಾಕಿದ ಗಿಳಿ ತನ್ನ ಯಜಮಾನಿಯ ವಿಶ್ವಾಸಕ್ಕೆ ಪ್ರತಿಫಲ ನೀಡಿತ್ತು.

ಮೈದುನ ಎಂದು ಅಕ್ಕರೆ ತೋರಿದ್ದಕ್ಕೆ ವಿಶ್ವಾಸಘಾತಕನಾದ. ತಪ್ಪು ಮಾಡಿದವನು ಎಂದಾದರೂ ಸಿಕ್ಕಿಹಾಕಿಕೊಳ್ಳಲೇಬೇಕು ! ಆದರೂ ಈ ಗಂಡಸರೇಕೆ ಹೀಗೆ ಪೈಶಾಚಿಕ ಆನಂದ ಅನುಭವಿಸುತ್ತಿದ್ದಾರೆ ? ಹೆಣ್ಣೆಂದರೆ ಬರೀ ಭೋಗದ ವಸ್ತುವೇ ? ಮಾನವೀಯತೆ ಮರೆತಿದ್ದಾರೇಕೆ ?


**ರಾಧಾ ಟೇಕಲ್**

ನಂ. ೧೧೧, 'ಮಾರುತಿ ನಿಲಯ', ೩ನೇ 'ಎ' ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ೭ನೇ ಬ್ಲಾಕ್
೨ನೇ ಹಂತ, ನಾಗರಭಾವಿ, ಬೆಂಗಳೂರು - ೫೬೦ ೦೭೨


## ಪಾಪ - ಪುಣ್ಯ

ಅವರು ಪುಣ್ಯಗಳನ್ನು
ರಕ್ತದಿಂದ ಮುಚ್ಚುತ್ತಿದ್ದಾರೆ.
ನಾವು ಅವರ ಪಾಪಗಳನ್ನು
ಕಣ್ಣೀರಿನಿಂದ
ಅಲ್ಲ
ಬೆವರಿನಿಂದ
ತೊಳೆಯುತ್ತಿದ್ದೇವೆ.

**ಶ್ರೀಸುಮಿತ್ರಾಸುತ ಅಗಸಬಾಳ**
ಬೆಂಗಳೂರು




ಮಾರ್ಚ್ ತಿಂಗಳಲ್ಲಿ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟದಿಂದ ಕೊಪ್ಪಳದಲ್ಲಿ ನಡೆದ ಮಹಿಳಾ ದಿನಾಚರಣೆಯನ್ನು ಉದ್ಘಾಟಿಸಲು ದೆಹಲಿಯಿಂದ ಲೇಖಕಿ ರಂಜನಾ ಪಡಿಯವರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು. ಪಂಜಾಬಿನಲ್ಲಿ ಆತ್ಮಹತ್ಯೆ ಮಾಡಿಕೊಂಡ ರೈತರ ಸಾವಿನ ನಂತರ ಆ ಕುಟುಂಬಗಳ ಮಹಿಳೆಯರ ಬದುಕಿನ ಮೇಲೆ ಉಂಟಾದ ಪರಿಣಾಮವನ್ನು ಕುರಿತಂತೆ ಅಧ್ಯಯನ ನಡೆಸಿರುವ ರಂಜನಾ ಪಡಿಯವರ "ದೋಸ್ ಹು ಡಿಡ್ ನಾಟ್ ಡೈ" ಪುಸ್ತಕವು ನಮ್ಮ ದೇಶದ ಕೃಷಿ ಬಿಕ್ಕಟ್ಟಿನ ಸಮಸ್ಯೆಯನ್ನು ಲಿಂಗ ಸಂಬಂಧಿ ದೃಷ್ಟಿಕೋನದಿಂದ ನೋಡಿದ ವಿಶಿಷ್ಟ ಪ್ರಯತ್ನವಾಗಿದೆ. ಈ ಸಮ್ಮೇಳನದಲ್ಲಿ ಭಾಗವಹಿಸಿದ್ದ 'ಹೊಸತು' ಸಂಪಾದಕ ಬಳಗದ ಶ್ರೀಮತಿ ಎನ್. ಗಾಯತ್ರಿಯವರು ವಿಶಿಷ್ಟ ಸ್ತ್ರೀವಾದಿ ಚಿಂತಕಿ ಮತ್ತು ಬರಹಗಾರ್ತಿ ರಂಜನಾ ಪಡಿಯವರನ್ನು ಹೊಸತು ಪತ್ರಿಕೆಗಾಗಿ ಸಂದರ್ಶಿಸಿದ್ದಾರೆ.

**ಸಂದರ್ಶಕರು : ಡಾ॥ ಎನ್. ಗಾಯತ್ರಿ**

# 'ಸಾಯದೇ ಬದುಕುಳಿದವರು' – ರಂಜನಾ ಪಡಿ

**ಹೊಸತು :** ನಮಸ್ಕಾರ. ನಿಮ್ಮ "ದೋಸ್ ಹು ಡಿಡ್ ನಾಟ್ ಡೈ" ಪುಸ್ತಕ ಓದಿದೆ. ತುಂಬ ಚೆನ್ನಾಗಿದೆ. ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ಮಹಿಳಾ ಪ್ರಶ್ನೆಯನ್ನು ಅರ್ಥೈಸಿದ್ದೀರ. ಈ ಸಂಬಂಧವಾಗಿ ನಿಮ್ಮೊಡನೆ ನಮ್ಮ ಪತ್ರಿಕೆಗಾಗಿ ಮಾತನಾಡಬೇಕೆನಿಸಿದೆ.

**ರಂಜನಾ :** ಸಂತೋಷ . ಕೇಳಿ.

**ಹೊಸತು :** ನೀವು ಒಬ್ಬ ಅಕೆಡೆಮಿಷಿಯನ್ ಆಗಿ ಈ ವಿಷಯದ ಅಧ್ಯಯನ ಮಾಡುವಾಗ ಸಾಮಾಜಿಕ ಕಾರ್ಯಕರ್ತೆಯ ಪಾತ್ರವನ್ನೂ ವಹಿಸಿದ್ದೀರ ಅಂತ ನನಗೆ ಅನ್ನಿಸುತ್ತಿದೆ. ಇದನ್ನು ಹೇಗೆ ನಿಭಾಯಿಸಿದಿರಿ?

**ರಂಜನಾ :** ನನ್ನದು ಅಕೆಡೆಮಿಷಿಯನ್ ಕೆಲಸ ಅಂತ ನಾನು ಅಂದು ಕೊಂಡಿಲ್ಲ. ನನ್ನದು ಒಂದು ರೀತಿಯಲ್ಲಿ ವಸ್ತುಸ್ಥಿತಿಯ ಸತ್ಯ ಶೋಧನೆಯ ಕೆಲಸ. ನಂತರ, ಆ ವಾಸ್ತವಾಂಶಗಳನ್ನು ಆಧರಿಸಿ ಹುಟ್ಟಿಕೊಂಡದ್ದು ಅಧ್ಯಯನ. ನನಗೆ ಸೆಕೆಂಡರಿ ಡಾಟಾ ಇಟ್ಟುಕೊಂಡು ಅಧ್ಯಯನ ಮಾಡುವುದರಲ್ಲಿ ವಿಶ್ವಾಸವಿಲ್ಲ. ಇವತ್ತು ವಿಶ್ವವಿದ್ಯಾಲಯಗಳಲ್ಲೂ ಎಂಪೆರಿಕಲ್ ಅಧ್ಯಯನವನ್ನು ಪ್ರೋತ್ಸಾಹಿಸುವವರೇ ಇಲ್ಲ. ಚಳುವಳಿಯು ನಮಗೆ ವಸ್ತುಸ್ಥಿತಿಯ ಹಲವಾರು ಅನುಭವಗಳನ್ನು ಕೊಡುತ್ತದೆ. ನಾನು ನಡೆಸುವ ಕ್ಷೇತ್ರಕಾರ್ಯದ ಮಾಹಿತಿಗಳು ಮತ್ತು ಚಳುವಳಿಯಿಂದ ದಕ್ಕಿಸಿಕೊಂಡ ಅನುಭವದ ಆಧಾರದ ಮೇಲೆ ನನ್ನ ಅಧ್ಯಯನದ ಫಲಿತಗಳು ಇರುತ್ತವೆ.

**ಹೊಸತು :** ಇಂತಹ ಅಧ್ಯಯನಗಳನ್ನು ಕೈಗೊಳ್ಳುವುದಕ್ಕೆ ನಿಮ್ಮನ್ನು ಪ್ರೇರೇಪಿಸಿದ ಹಿನ್ನೆಲೆ ಯಾವುದು?

**ರಂಜನಾ :** ನಾನು ಒರಿಸ್ಸಾದವಳು. ನಮ್ಮ ತಂದೆ ಪ್ರಿಂಟಿಂಗ್ ಕ್ಷೇತ್ರದಲ್ಲಿ ಕೆಲಸ ಮಾಡಿದವರು. ಶಿಕ್ಷಣದ ಮಹತ್ವವನ್ನು ಬಲ್ಲವರು. ಮಕ್ಕಳಿಗೆಲ್ಲಾ ಒಳ್ಳೆಯ ಶಿಕ್ಷಣವನ್ನು ಕೊಟ್ಟರು. ಮಕ್ಕಳೆಲ್ಲಾ ನಮ್ಮ ಅನ್ನ ನಾವೇ ಸಂಪಾದಿಸಿಕೊಳ್ಳಬೇಕೆಂದು ಬೋಧಿಸಿದವರು. ನಾನು ಸ್ನಾತಕೋತ್ತರ ಶಿಕ್ಷಣಕ್ಕೆಂದು ದೆಹಲಿಗೆ ಬಂದು ದೆಹಲಿ ವಿಶ್ವವಿದ್ಯಾಲಯದಲ್ಲಿ ಓದಿದೆ. ನಾನು ದೆಹಲಿಗೆ ಬಂದ ಕಾಲ ಮಹಿಳಾ ಚಳುವಳಿಯು ಉತ್ತುಂಗದಲ್ಲಿದ್ದ ಕಾಲ. ಸಹೇಲಿ, ಮಾನುಷಿಯಂತಹ ಮಹಿಳಾ ಗುಂಪುಗಳು ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸುತ್ತಿದ್ದ ಕಾಲ. ಶಾಬಾನೋ ಪ್ರಕರಣ, ವರದಕ್ಷಿಣೆ–ವಧುದಹನದ ಮತ್ತು ಅತ್ಯಾಚಾರ ಪ್ರಕರಣಗಳ ಸುತ್ತ ಮಹಿಳಾ ಪ್ರಶ್ನೆಯು ಕೇಂದ್ರೀಕೃತವಾಗಿದ್ದ ಕಾಲ. ನಾನು ಸಹೇಲಿಯ ಮೂಲಕ ಈ ಚಳುವಳಿಯಲ್ಲಿ ಭಾಗವಾಗಲು ತೊಡಗಿಕೊಂಡೆ. ಇಲ್ಲಿ ನಾನು ಗಳಿಸಿದ ಅನುಭವ ಅಪಾರ. ಕ್ರಮೇಣ ಇದರಿಂದಲೂ ನಿರಾಸೆಯಾಗಲು ಆರಂಭಿಸಿತು. ಅಕೆಡೆಮಿಕ್ ಚರ್ಚೆಗಳಲ್ಲಿ ಬರೀ ಶಬ್ದಾಡಂಬರ ತುಂಬಿರುತ್ತಿತ್ತು. ಎಲ್ಲವೂ ಪರಿಕಲ್ಪನೆಯ ಚರ್ಚೆಯ ಹಂತದಲ್ಲಿಯೇ ನಿಂತುಹೋಗುತ್ತಿತ್ತು.

ಇದೇ ಸಮಯದಲ್ಲಿ ದೆಹಲಿಯಲ್ಲಿ 'ಕ್ಲೀನ್ ಡೆಲ್ಲಿ' ಚಳುವಳಿ ನಡೆಯುತ್ತಿತ್ತು. ನಗರವನ್ನು ಸುಂದರಗೊಳಿಸಬೇಕೆಂದು ಸ್ಲಂಗಳನ್ನು ಮತ್ತು ಹಾದಿಬೀದಿಗಳಲ್ಲಿ ವಾಸಿಸುತ್ತಿದ್ದವರನ್ನು ಒಕ್ಕಲೆಬ್ಬಿಸುತ್ತಿದ್ದರು. ಸಿರಿವಂತರು ತಮ್ಮ ಶೋಕಿಗಾಗಿ ಬಡವರ ಹೊಟ್ಟೆಯ ಮೇಲೆ ಹೊಡೆಯುವ ಈ ಪರಿಯನ್ನು ಕಂಡು ದಿಗ್ಭ್ರಾಂತಳಾದೆ. ಅದು ನನ್ನ ಕಣ್ಣು ತೆರೆಸಿತು. ಹಲವಾರು ವಾಸ್ತವಗಳನ್ನು ನನ್ನ ಮುಂದೆ ಹರಡಿತು. ಈ ಹಿನ್ನೆಲೆಯಲ್ಲಿ ನನ್ನ ಕೆಲಸ ಮುಂದುವರೆಸಿದೆ.

**ಹೊಸತು :** ನೀವು ಕೃಷಿಯ ಸಂಕಷ್ಟಗಳನ್ನು ಕುರಿತು ಅಧ್ಯಯನ ನಡೆಸಿದ್ದೀರಿ. ನೀವು ರೈತ ಕುಟುಂಬದಿಂದ ಬಂದವರೇ?

**ರಂಜನಾ :** ಇಲ್ಲ ನಾನು ರೈತ ಕುಟುಂಬದಿಂದ ಬಂದವಳಲ್ಲ. ಇಂದು ಅಕ್ಷರಸ್ಥರೆನಿಸಿಕೊಂಡ ಬಹುಮಂದಿ ರೈತ ಕುಟುಂಬದವರಾಗಿರುವುದಿಲ್ಲ. ಕೃಷಿಯನ್ನು ನೆಚ್ಚಿಕೊಂಡು ಬದುಕುತ್ತಿರುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಆದರೆ ಇಡೀ ದೇಶಕ್ಕೆ ಅನ್ನ ಕೊಡುವ ರೈತನ ಸಮಸ್ಯೆಯನ್ನು ಗಂಭೀರವಾಗಿ ತೆಗೆದುಕೊಳ್ಳದಿದ್ದರೆ ಹೇಗೆ? ತಮ್ಮ ಬೆಳೆಯನ್ನು ರಕ್ಷಿಸಲು ಬಳಸುವ ಕೀಟ ನಾಶಕಗಳನ್ನು ಸೇವಿಸಿ ತಮ್ಮ ಬದುಕನ್ನೇ ಕೊನೆಗೊಳಿಸಿಕೊಳ್ಳುತ್ತಿರುವ ರೈತರ ಬದುಕಿನ ದುರಂತತೆ ನನ್ನ ಮನಸ್ಸನ್ನು ಬಹುವಾಗಿ ಕಾಡಿತು. ಕುಟುಂಬದಲ್ಲಿ ಮನೆಯ ಯಜಮಾನನಾದ ರೈತನ ಆತ್ಮಹತ್ಯೆಯಾದ ನಂತರ ಅದು ಕುಟುಂಬದ ಇತರರ ಮೇಲೆ ಮಾಡುವ ಪರಿಣಾಮ ಮತ್ತು ಆ ಸ್ಥಿತಿಯನ್ನು ಕುಟುಂಬದ ಮಹಿಳೆಯರು ಎದುರಿಸುವ ರೀತಿ– ಈ ಎಲ್ಲ ಅಂಶಗಳು ನನ್ನನ್ನು ಚಿಂತನೆಗೆ ಹಚ್ಚಿತು. ಇವತ್ತು ಕೃಷಿಯ ಸಂಕಟದ ಬಗ್ಗೆ ಎಷ್ಟೇ ಅಧ್ಯಯನಗಳು ನಡೆದರೂ ಮಹಿಳೆಯರ ಮೇಲಿನ ಅದರ ಪರಿಣಾಮದ ಬಗ್ಗೆ ಅವು ಮೌನವಾಗಿಯೇ ಇರುತ್ತವೆ. ಈ ಮೌನವನ್ನು ಬೇಧಿಸುವುದೇ ನನ್ನ ಅಧ್ಯಯನದ ಗುರಿಯಾಗಿದೆ.

**ಹೊಸತು :** ಈ ಅಧ್ಯಯನಕ್ಕೆ ಪಂಜಾಬನ್ನೇ ಆರಿಸಿಕೊಂಡದ್ದಕ್ಕೆ ಏನಾದರೂ ವಿಶೇಷ ಕಾರಣವಿತ್ತೇ?

**ರಂಜನಾ :** ಮಹಾರಾಷ್ಟ್ರದ ವಿದರ್ಭದ ರೈತರ ಆತ್ಮಹತ್ಯೆಗಳು ದೊಡ್ಡ ಸುದ್ದಿಯಾಗಿರುತ್ತಿತ್ತು. ಕೇರಳ ದಿಂದ ಪಂಜಾಬಿನವರೆಗೆ ರೈತರ ಆತ್ಮಹತ್ಯೆ ಪ್ರಕರಣಗಳು ವರದಿಯಾಗುತ್ತಿದ್ದವು. ದೆಹಲಿಗೆ ಪಂಜಾಬ್ ಹತ್ತಿರ ವಾಗಿದ್ದುದು ಒಂದು ಮುಖ್ಯ ಕಾರಣವಾಗಿ ನಾನು ನನ್ನ ಅಧ್ಯಯನವನ್ನು ಪಂಜಾಬಿಗೆ ಸೀಮಿತಗೊಳಿಸಿ ಕೊಂಡೆ. ಅಲ್ಲದೆ, ನಮ್ಮ ದೇಶದ 'ಹಸಿರು ಕ್ರಾಂತಿ'ಯ ತೊಟ್ಟಿಲೆಂದೇ ಹೆಸರಾಗಿರುವ ಪಂಜಾಬು ಸಮೃದ್ಧಿಯ ಸಂಕೇತವೆಂಬ ಭ್ರಮೆಯನ್ನು ಇತ್ತೀಚಿನ ಘಟನೆಗಳು ಸುಳ್ಳಾಗಿಸಿವೆ, ಪ್ರಶ್ನಿಸುವಂತೆ ಮಾಡಿವೆ. ೧೯೮೪ರ ಸಿಖ್ ವಿರೋಧಿ ನರಮೇಧದಲ್ಲಿ ಸುಮಾರು ೩೦೦೦ ಜನರ ಕಗ್ಗೊಲೆಯಾಗಿದ್ದು ಅದರ ಭೀಕರ ಪರಿಣಾಮಗಳನ್ನು ನಾವು ದೆಹಲಿಯಲ್ಲಿ ವಿದ್ಯಾರ್ಥಿ ದಿನಗಳಲ್ಲಿ ಓದಿ ತಿಳಿದಿದ್ದೆವು. ಅದರ ನಂತರದ ಪರಿಣಾಮಗಳು, ಆಪರೇಶನ್ ಬ್ಲೂ ಸ್ಟಾರ್ ಮತ್ತು ಜಾಗತೀಕರಣದ ಪರಿಣಾಮಗಳಿಂದ ಪಂಜಾಬಿನ ಜನಸಾಮಾನ್ಯರ ಜೀವನ ಸಂಕಷ್ಟಕ್ಕೆ ಸಿಲುಕಿತ್ತು. ಈ ಹಿನ್ನೆಲೆಯಲ್ಲಿ ನಾನು ಪಂಜಾಬಿಗೆ ಹೋಗಿ ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳನ್ನು ಮಾತನಾಡಿಸಿ, ಅವರನ್ನು ಆವರಿಸಿರುವ ಆರ್ಥಿಕ ಸಂಕಷ್ಟಗಳನ್ನು ಕುರಿತು ಅಧ್ಯಯನ ಮಾಡಬೇಕೆಂದು ನಿರ್ಧರಿಸಿದೆ. ಅಲ್ಲದೆ ಈ ಪ್ರದೇಶದಲ್ಲಿ ಕೆಲಸ ಮಾಡುತ್ತಿರುವ ರೈತ ಸಂಘಟನೆಗಳ ನೆರವಿನೊಂದಿಗೆ ಅವರ ಸಮಸ್ಯೆಯ ವಿವಿಧ ಆಯಾಮಗಳನ್ನು ಅರ್ಥಮಾಡಿಕೊಳ್ಳುವುದು ನನ್ನ ಉದ್ದೇಶವಾಗಿತ್ತು. ಸಾಮಾಜಿಕ ತೊಡಗುವಿಕೆಯಲ್ಲಿ ಬರವಣಿಗೆ ಮತ್ತು ಕ್ರಿಯೆ – ಎರಡೂ ಮುಖ್ಯವಾದರೂ ಇವೆರಡರಲ್ಲಿ ನಾನು ಬರವಣಿಗೆಯನ್ನು ಆಯ್ದುಕೊಂಡಿರುವೆ.

**ಹೊಸತು :** ಪಂಜಾಬಿನ ಕೃಷಿ ಸಂಕಷ್ಟಗಳ ಕುರಿತ ನಿಮ್ಮ ಅಧ್ಯಯನದ ಬಗ್ಗೆ ಹೇಳಿ.

**ರಂಜನಾ :** ಸ್ತ್ರೀವಾದಿಯಾಗಿ, ನಾನು ಕೇಳಬಯಸುವ ಪ್ರಶ್ನೆಯೆಂದರೆ, ಇಂದಿನ ದಿನಗಳಲ್ಲಿ ಮಹಿಳಾ ಹೋರಾಟ ಎತ್ತ ಸಾಗಿದೆ? ಮಹಿಳಾ ಚಳುವಳಿಯ ಕಾಣ್ಕೆ ಎಲ್ಲಿ ಹೋಯಿತು? ಇಲ್ಲಿಯವರೆಗೂ ಮಹಿಳಾ ಚಳುವಳಿ ಗಳಿಸಿದ ಫಲ ಯಾರಿಗೆ ಸಿಕ್ಕಿದೆ? ಈ ಹಿನ್ನೆಲೆಯಲ್ಲಿ ಪಂಜಾಬಿನ ರೈತರ ಆತ್ಮಹತ್ಯೆಯ ಪ್ರಕರಣಗಳನ್ನು ಕುರಿತು ನಾನು ಚಿಂತಿಸಿದ್ದೇನೆ.

ಹಸಿರು ಕ್ರಾಂತಿಯ ಫಲಿತಗಳು ಎಲ್ಲಿ ಹೋದವು, ಅಂತ ಪ್ರಶ್ನಿಸಿಕೊಂಡರೆ ಆಶ್ಚರ್ಯವಾಗುತ್ತದೆ. ಕೆಲವೇ ಮಂದಿ ದೊಡ್ಡ ದೊಡ್ಡ ಜಮೀನುದಾರರು ಅಭಿವೃದ್ಧಿ ಹೊಂದಿದರು. ವಿದ್ಯಾ ಸಂಸ್ಥೆಗಳು ಮತ್ತು ಖಾಸಗಿ ನರ್ಸಿಂಗ್ ಹೋಮ್‌ಗಳು ನಾಯಿಕೊಡೆಗಳಂತೆ ಹುಟ್ಟಿಕೊಂಡವು. ಸಾರ್ವಜನಿಕ ಸೇವೆಯ ಸಂಸ್ಥೆಗಳನ್ನು ಮುರಿದುಹಾಕಿದ್ದು ಕಾರ್ಮಿಕರು ಮತ್ತು ಬಡರೈತರ ಜೀವನಕ್ಕೆ ಭಾರಿ ಪೆಟ್ಟುಕೊಟ್ಟಿತು. ಆತ್ಮಹತ್ಯೆ ಮಾಡಿಕೊಳ್ಳಲು ಹೋಗಿ ಸಫಲರಾಗದೇ ಉಳಿದುಬಿಟ್ಟರೆ, ಚಿಕಿತ್ಸೆಗೆಂದು ೨೦,೦೦೦ ರೂ.ಗಳು ಖರ್ಚಾಗುತ್ತವೆ. ಬಡತನ ಮತ್ತು ರೈತರ ಸಂಕಟದ ಪರಿಸ್ಥಿತಿಯನ್ನು ದುರುಪಯೋಗಪಡಿಸಿಕೊಳ್ಳುವ ರಣಹದ್ದುಗಳು ಇವರು.

ಪಂಜಾಬಿನಲ್ಲಿ ಭಾಟಿಂಡಾ ಮತ್ತು ಸಂಗ್ರೂರ್ ಜಿಲ್ಲೆಯಲ್ಲಿ ೨೮೯೦ ರೈತರ ಆತ್ಮಹತ್ಯೆ ಪ್ರಕರಣಗಳು ನಡೆದಿವೆ. ಇದರಲ್ಲಿ ಶೇಕಡ ೬೧ ಮಂದಿ ರೈತರಾದರೆ, ಶೇಕಡ ೩೯ ಮಂದಿ ಕೃಷಿ ಕೂಲಿಕಾರರು. ಈ ಪ್ರಕರಣಗಳನ್ನು ಕೃಷಿಗೆ ಸಂಬಂಧಪಟ್ಟ ನೀತಿಯ ವೈಫಲ್ಯವನ್ನಾಗಿ ಗುರುತಿಸಲಾಗುತ್ತದೆ. ಆದರೆ ನನಗೆ ಇದನ್ನು ಇನ್ನೂ ಆಳವಾಗಿ ನೋಡಬೇಕೆನ್ನಿಸುತ್ತದೆ. ಆತ್ಮಹತ್ಯೆಗೆ ಮುಖ್ಯ ಕಾರಣ ಇಲ್ಲಿನ ರೈತರು ಸಾಲದ ಕೂಪದಲ್ಲಿ ಸಿಲುಕಿಕೊಂಡಿರುವುದು ಎನ್ನುವುದು ನಿಜವಾದರೂ ಈ ಸಾಲ ಮಾಡಿರುವುದು ಕೃಷಿಯ ಕಾರಣಕ್ಕಾಗಿ ಅಲ್ಲ. ಅಗೋಚರವಾಗಿರುವ ಕುಟುಂಬದ ನಿರೀಕ್ಷೆಗಳು ಮತ್ತು ಒತ್ತಡಗಳು ಇದರ ಹಿಂದಿವೆ. ಪಂಜಾಬಿನ ಸ್ಥಿತಿಯಿಂದ ನನಗೆ ಅನ್ನಿಸಿದ್ದು ಕುಟುಂಬಗಳು ಕೃಷಿಯನ್ನು ಅವಲಂಬಿಸಿರುವುದು ಅವರು ತಿನ್ನುವ ಆಹಾರಕ್ಕಾಗಿಯಲ್ಲದೆ, ಮಕ್ಕಳ ಶಿಕ್ಷಣ, ಕುಟುಂಬದ ಆರೋಗ್ಯ ಮತ್ತು ಹೆಣ್ಣುಮಕ್ಕಳ ಮದುವೆ ಇತ್ಯಾದಿಗಳ ಪೂರೈಕೆಗಾಗಿ. ಈ ಕ್ಷೇತ್ರಗಳೆಲ್ಲಾ ವಾಣಿಜ್ಯೀಕರಣಗೊಂಡು ಸಮಸ್ಯೆ ಬಿಗಡಾಯಿಸಿದೆ.

**ಹೊಸತು :** ನಿಮ್ಮ ಅಧ್ಯಯನದ ಸಂದರ್ಭದಲ್ಲಿ 'ಪಿತೃಪ್ರಾಧಾನ್ಯತೆ'ಯ ಪರಿಕಲ್ಪನೆಗೆ ವಿಸ್ತಾರವನ್ನು ಒದಗಿಸಿದ್ದೀರ. ಅದನ್ನು ಸ್ವಲ್ಪ ವಿವರಿಸುತ್ತೀರ.

**ರಂಜನಾ :** ಪಿತೃಪ್ರಾಧಾನ್ಯತೆಯು ಹೆಣ್ಣಿನ ಶೋಷಣೆಯ ಮೂಲವೆನ್ನುವುದು ನಿಜವಾದರೂ ಹೆಣ್ಣಿನಷ್ಟೇ ಗಂಡಸರಿಗೂ ಅದು ಹೊರೆಯಾಗಿದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಕುಟುಂಬದ ಜವಾಬ್ದಾರಿಯನ್ನು ಹೊರುವುದು ಗಂಡಸುತನದ ಲಕ್ಷಣವೆಂಬ ಭಾವನೆಯನ್ನು ನಮ್ಮ ಸಮಾಜದಲ್ಲಿ ಹುಟ್ಟುಹಾಕಲಾಗಿದೆ. ಮನೆಯ ಯಜಮಾನನೆನಿಸಿಕೊಂಡ ಗಂಡಸು, ತಂದೆಯಾಗಿರಲಿ, ಗಂಡನಾಗಿರಲಿ ಇಲ್ಲವೆ ಅಣ್ಣನಾಗಿರಲಿ ಮನೆಯ ಸಮಸ್ತ ಹೊರೆಯನ್ನು ಹೊರುವುದು ತನ್ನ ಕರ್ತವ್ಯ ಮತ್ತು ಹೆಮ್ಮೆಯೆಂದು ಭಾವಿಸುತ್ತಾನೆ. ಕುಟುಂಬದ ಅಗತ್ಯಗಳಿಗೆ ಸ್ಪಂದಿಸಲು ಸಾಧ್ಯವಾಗದ ಪರಿಸ್ಥಿತಿ ನಿರ್ಮಾಣವಾದಾಗ, ಅವನ 'ಕರ್ಮದಾತ'ನ ಚಿತ್ರಣಕ್ಕೆ ಭಂಗ ಬಂದಾಗ ಅವನಿಗೆ ಬದುಕಿನಲ್ಲಿ ಸೋತೆ ಎಂದೆನಿಸುವುದು, ಜೀವನದ ನಿರರ್ಥಕತೆಯನ್ನು ಅನುಭವಿಸುವುದು ಮತ್ತು ಅವನ ಹೆಮ್ಮೆಯ ಬೆಲೂನು ಚುಚ್ಚಿ ಗಾಯವಾಗಿ ನರಳುವಂತಹ ಸ್ಥಿತಿ ನಿರ್ಮಾಣವಾಗುತ್ತದೆ. ಮನೆಯ ಗಂಡಸರನ್ನು ಆತ್ಮಹತ್ಯೆಗೆ ದೂಡುವ ಸನ್ನಿವೇಶ ನಿರ್ಮಾಣವಾಗುತ್ತದೆ. ಆತ್ಮಹತ್ಯೆಯ ಕಾರಣಗಳು ಸರಳವಾಗಿರುವುದಿಲ್ಲ, ಅದಕ್ಕೆ ಹಲವಾರು ಹೊದಿಕೆಗಳಿರುತ್ತವೆ. ಕೆಲವೊಮ್ಮೆ ಮಾಡಿದ ಸಾಲಕ್ಕಾಗಿ ತಮ್ಮ ಭೂಮಿಯನ್ನು ಮಾರಿಕೊಂಡು ಭೂರಹಿತರಾಗುವ ಸಂದರ್ಭಗಳೂ ಉಂಟು. ಇದು ಕುಟುಂಬದ 'ಇಜ್ಜತ್'ನ ಪ್ರಶ್ನೆಯೂ ಆಗಿಬಿಡುತ್ತದೆ. ಎಷ್ಟೋ ಬಾರಿ ಕುಟುಂಬದ ಹೆಂಗಸರಿಗೆ ಗಂಡಸರ ಸಾಲದ ಹೊರೆಯ ಬಾಹುಳ್ಯ ಅರ್ಥವಾಗುವುದು ಅವರು ಸತ್ತ ನಂತರವೇ. ಪುರುಷರು ತಮ್ಮ ಪುರುಷತ್ವದ ಹೆಮ್ಮೆಯನ್ನು ಕಾಯ್ದುಕೊಳ್ಳಲು ತಮ್ಮ ಹಣಕಾಸು ತಾಪತ್ರಯವನ್ನು ಮನೆಯ ಹೆಣ್ಣುಮಕ್ಕಳಿಂದ ಮುಚ್ಚಿಡುತ್ತಾರೆ.

Those Who Did Not Die
Impact of the Agrarian Crisis on Women in Punjab
Ranjana Padhi

ಪಿತೃಪ್ರಾಧಾನ್ಯತೆಯ ವಿರುದ್ಧದ ಹೋರಾಟವೆಂದರೆ, ಮಹಿಳೆಯರ ಶ್ರಮ ಮತ್ತು ಲೈಂಗಿಕತೆಯೆಲ್ಲದರ ಮೇಲಿನ ನಿಯಂತ್ರಣ ಸಾಧಿಸಿ ಶೋಷಣೆ ಮಾಡುತ್ತಿರುವ ಶಕ್ತಿಗಳ ವಿರುದ್ಧದ ಹೋರಾಟ. ಮಹಿಳಾ ಚಳುವಳಿ ಇದನ್ನು ಅಂತರ್ಗತಗೊಳಿಸಿಕೊಂಡರೆ ಮಾತ್ರ ನಾವು ಅರ್ಥಪೂರ್ಣವಾದುದನ್ನು ಸಾಧಿಸಲು ಸಾಧ್ಯವಾಗುತ್ತದೆ. ಕೃಷಿಕರು ಎಂದರೆ ಇಡೀ ಕುಟುಂಬ ಕೃಷಿಯಲ್ಲಿ ಮುಳುಗಿರುತ್ತದೆ. ಗಂಡು, ಹೆಣ್ಣು ಮತ್ತು ಮಕ್ಕಳು ಎಲ್ಲರು ಕೃಷಿಗೆ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಿರುತ್ತಾರೆ ಮತ್ತು ಅದರ ಆದಾಯದ ಮೇಲೆಯೇ ಜೀವಿಸುತ್ತಿರುತ್ತಾರೆ. ಹೀಗಿರುವಾಗ ಕೃಷಿ ಎಂದಾಗ ಅದು ಪುರುಷರ ಲೋಕ ಎಂದು ಭಾವಿಸುತ್ತಾ, ಅದರ ಸಮಸ್ಯೆಗಳನ್ನು ಏಕಮುಖವಾಗಿ ಚರ್ಚಿಸುವುದೇ ಹಾಸ್ಯಾಸ್ಪದ. ರೈತ ಸಂಘಟನೆಗಳು ವಾಣಿಜ್ಯೀಕರಣಗೊಂಡಿರುವ ಕೃಷಿಯ ವಿರುದ್ಧ ಹೋರಾಟ ನಡೆಸುತ್ತೇವೆಯೇ ಹೊರತು ಮನೆಯ ಒಳಗೆ ಮತ್ತು ಹೊರಗೆ ಆವರಿಸಿರುವ ಒಟ್ಟು ವ್ಯವಸ್ಥೆಯಲ್ಲಿ ಪಿತೃಪ್ರಾಧಾನ್ಯತೆಯ ಸಮಸ್ಯೆಗಳನ್ನು ಯಾಕೆ ಗಂಭೀರವಾಗಿ ತೆಗೆದುಕೊಳ್ಳುತ್ತಿಲ್ಲ ಎಂಬುದು ನನ್ನ ಪ್ರಶ್ನೆ.

**ಹೊಸತು :** ಈ ಸಂಬಂಧವಾಗಿ ನೀವು ನಡೆಸಿದ ಕ್ಷೇತ್ರ ಕಾರ್ಯದ ಬಗ್ಗೆ ಸ್ವಲ್ಪ ವಿವರಿಸುತ್ತೀರ?

**ರಂಜನಾ :** ನಾನು ಸುಮಾರು ಎಂಟು ಜಿಲ್ಲೆಗಳ ನೂರೈವತ್ತು ಕುಟುಂಬ ಗಳನ್ನು ಭೇಟಿಯಾಗಿ ಮಾತನಾಡಿಸಿದೆ. ಪಂಜಾಬಿನಲ್ಲಿ ಇವರನ್ನು 'ಆತ್ಮಹತ್ಯೆ ಕುಟುಂಬ'ಗಳೆಂದೇ ಕರೆಯುತ್ತಾರೆ. ಇವುಗಳಲ್ಲಿ ಬಹುಪಾಲು 'ನ್ಯೂಕ್ಲಿಯರ್' ಕುಟುಂಬಗಳು ಮತ್ತು ಆತ್ಮಹತ್ಯೆ ಮಾಡಿಕೊಂಡವರೆಲ್ಲಾ ಪುರುಷರೇ. ಕೂಡು ಕುಟುಂಬಗಳಾಗಿದ್ದರೆ ಸಾಲಗಾರರ ಒತ್ತಡವನ್ನು ತಡೆಯಲು ಸ್ವಲ್ಪವಾದರೂ ಸಾಧ್ಯವಾಗಿರುತ್ತಿತ್ತೇನೋ! ಶೇಕಡ ೬೭.೬ರಷ್ಟು ಮಹಿಳೆಯರು ಹೆಂಡತಿಯರು, ಶೇಕಡ ೨೦.೬ರಷ್ಟು ಮಂದಿ ತಾಯಿಯರು ಮತ್ತು ಉಳಿದ ಮನೆಗಳಲ್ಲಿ ಇತರ ಹೆಣ್ಣು ಮಕ್ಕಳನ್ನು ಮಾತನಾಡಿಸಿರುವೆ. ನಾನು ಮಾತನಾಡಿಸಿದ ಬಹುಮಂದಿ ಚಿಕ್ಕ ವಯಸ್ಸಿನವರೇ. ಒಟ್ಟು ಸರಾಸರಿ ವಯಸ್ಸು ೪೬ ವರ್ಷಗಳು. ಮನೆಯ ಗಂಡಸಿನ ಸಾವಿನ ನಂತರ ಸಾಲದ ಒತ್ತಡ, ಮಾರುಕಟ್ಟೆಯಲ್ಲಿ ಬೆಲೆ ಏರಿಕೆ ಮತ್ತು ಬಡ್ಡಿ ವ್ಯಾಪಾರಿಗಳ ದುಂಡಾವರ್ತಿ ಇವುಗಳಿಂದ ನೊಂದು ಬೆಂದಿದ್ದರು. ಅವರೊಡನೆ ನಡೆಸಿದ ಸಂದರ್ಶನಗಳು ಹಲವಾರು ಸಂಗತಿಗಳನ್ನು ಬಯಲಿಗೆಳೆಯಿತು. ನನ್ನ ಅಧ್ಯಯನದ ಪ್ರಯತ್ನದಲ್ಲಿ ನಾನು ರೈತ ಸಂಘಟನೆಗಳ ನೆರವನ್ನು ಬಹಳ ಪಡೆದುಕೊಂಡೆ.

ಕೃಷಿಕ ಸಮಾಜದ ಊಳಿಗಮಾನ್ಯ ಮೌಲ್ಯಗಳು, ನವ ವಸಾಹತೀಕರಣ ಹುಟ್ಟುಹಾಕಿರುವ ಬಂಡವಾಳಶಾಹಿಯ ಗಧಾ ಪ್ರಹಾರ, ರಾಜ್ಯ ಮತ್ತು ಕೇಂದ್ರ ಸರ್ಕಾರದ ಜನವಿರೋಧಿ ನೀತಿಗಳು ಮತ್ತು ಕಾರ್ಯಕ್ರಮಗಳು ಒಟ್ಟಾಗಿ ಶೋಷಣೆಯ ಶಕ್ತಿಗಳಾಗಿ ಕೆಲಸ ಮಾಡಿವೆ. ಔದ್ಯೋಗೀಕರಣದ ದಬ್ಬಾಳಿಕೆಯಿಂದ ಕೃಷಿ ಭೂಮಿ, ಗಣಿಗಳು ಮತ್ತು ಕಾಡುಗಳು ಗುಳುಂ ಆಗುತ್ತಿವೆ. ಆದಿವಾಸಿಗಳು, ದಲಿತರು ಮತ್ತು ಹಿಂದುಳಿದ ವರ್ಗದ ಜನರ ಜೀವನೋಪಾಯವಾಗಿದ್ದ ನೆಲ ಮತ್ತು ಪ್ರಾಕೃತಿಕ ಸಂಪತ್ತುಗಳ ಲೂಟಿಯಾಗುತ್ತಿವೆ. ಕೃಷಿ ವ್ಯವಸ್ಥೆಯೇ ಸಂಪೂರ್ಣವಾಗಿ ಮುರಿದು ಬಿದ್ದು ರೈತರ ಆತ್ಮಹತ್ಯೆಯು ಈ ರೋಗದ ಸೂಚಕವಾಗಿದೆ.

ಮತ್ತೊಂದು ಗಮನಿಸಬೇಕಾದ ಅಂಶವೆಂದರೆ, ಸಮರ್ಪಕವಾದ, ಕೈಗೆಟುಕುವ ಆರೋಗ್ಯ ವ್ಯವಸ್ಥೆ ಇಲ್ಲದಿರುವುದು ಸಮಸ್ಯೆಯನ್ನು ಮತ್ತಷ್ಟು ಹೆಚ್ಚಿಸಿದೆ. ಭಾಟಿಂಡಾ ನಿಲ್ದಾಣದಿಂದ ಬಿಕನೇರ್‌ಗೆ ಪ್ರತಿರಾತ್ರಿ ಹೊರಡುವ "ಕ್ಯಾನ್ಸರ್ ಎಕ್ಸ್‌ಪ್ರೆಸ್" ಹಸಿರುಕ್ರಾಂತಿಯ ವಿಕಾರದ ಸೂಚಕ. ಹತ್ತಿ ಹೆಚ್ಚು ಬೆಳೆಯುವ ಭಾಟಿಂಡಾ, ಮಾನ್ಸಾ ಮತ್ತು ಫರೀದ್ ಕೋಟ್‌ನಲ್ಲಿ ಅತ್ಯಂತ ಹೆಚ್ಚು ಸಂಖ್ಯೆಯ ಕ್ಯಾನ್ಸರ್ ರೋಗಿಗಳಿರುವುದು ವರದಿಯಾಗಿದೆ. ಈ ಪ್ರದೇಶಗಳಲ್ಲಿ ಬಳಸಲಾಗುವ ಕ್ರಿಮಿನಾಶಕಗಳ ಪರಿಣಾಮವಾಗಿ ಈ ಪ್ರದೇಶಗಳಲ್ಲಿ ಕ್ಯಾನ್ಸರ್ ರೋಗಿಗಳ ಸಂಖ್ಯೆ ಹೆಚ್ಚಿದೆ. ರಾಜ್ಯ ಸರ್ಕಾರಕ್ಕೆ ನಾಚಿಕೆಯಿಲ್ಲ. ಈ ರಾಜ್ಯದಲ್ಲಿ ಕ್ಯಾನ್ಸರ್ ಆಸ್ಪತ್ರೆಯಿಲ್ಲ. ಇಲ್ಲಿನ ರೋಗಿಗಳು ಭಾಟಿಂಡಾದಲ್ಲಿರುವ ಕ್ಯಾನ್ಸರ್ ಆಸ್ಪತ್ರೆಗೇ ಹೋಗಬೇಕು.

**ಹೊಸತು :** ಈ ಆತ್ಮಹತ್ಯೆಯ ಕುಟುಂಬದಲ್ಲಿ ಬದುಕುಳಿದವರು ಯಾವ ರೀತಿಯಲ್ಲಿ ಜೀವನವನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ? ಸಂಘಟನೆಗಳು ಯಾವ ರೀತಿಯಲ್ಲಿ ಕೆಲಸ ಮಾಡುತ್ತಿವೆ?

**ರಂಜನಾ :** ಕುಟುಂಬದಲ್ಲಿ ಗಂಡಸಿನ ಆತ್ಮಹತ್ಯೆಯ ನಂತರದಲ್ಲಿ ಹೆಂಗಸರು ಯಾರೂ ತಮ್ಮ ಜೀವನವನ್ನು ಕೊನೆಗಾಣಿಸಿಕೊಂಡಿಲ್ಲ. ಆದರೆ ನಂತರದ ಅವರ ಬದುಕು ಕಠಿಣವಾಗಿದೆ. ಮನೆಯ ಗಂಡಸರು ಮಾಡಿದ್ದ ಸಾಲದ ಹೊರೆಯನ್ನು ಬೆನ್ನಲ್ಲಿ ಕಟ್ಟಿಕೊಂಡೇ ದಿನನಿತ್ಯದ ಬದುಕನ್ನು ನಡೆಸಬೇಕಿದೆ. ಜೊತೆಗೆ ರೈತ ಸಂಘಟನೆಗಳು ಮತ್ತು ಎಡ ಸಂಘಟನೆಗಳು ಈ ದಿಕ್ಕಿನಲ್ಲಿ ಕಾರ್ಯಕ್ರಮಗಳನ್ನು ನಡೆಸಿವೆ. ಉದ್ಯೋಗ ಮತ್ತು ತಲೆಯ ಮೇಲೊಂದು ಸೂರಿಗಾಗಿ ಕೃಷಿಕೂಲಿಗಾರರು ಮೇ ೨೦೧೮ರಲ್ಲಿ ಮಾನ್ಸಾ, ಸಂಗ್ರೂರ್ ಮತ್ತು ಭಾಟಿಂಡಾದಲ್ಲಿ ಪ್ರತಿಭಟನೆ ನಡೆಸಿದಾಗ ಪಂಜಾಬ್ ಸರ್ಕಾರವು ೧,೩೦೦ ಕೂಲಿಗಾರರನ್ನು, ೫೧೧ ಮಹಿಳೆಯರನ್ನು ಮತ್ತು ೪೨ ಮಕ್ಕಳನ್ನು ಜೈಲಿಗಟ್ಟಿತ್ತು. ಆ ಸರ್ಕಾರವು ನರೇಗಾ ಯೋಜನೆಯಡಿ ಖರ್ಚು ಮಾಡಬೇಕಿದ್ದ ೩೫೦ ಕೋಟಿ ರೂಪಾಯಿಗಳನ್ನು ಬಳಸಿಕೊಳ್ಳದೆ ಕೇಂದ್ರ ಸರ್ಕಾರಕ್ಕೆ ಹಿಂದಿರುಗಿಸಿದಾಗ ಒಂದು ದೊಡ್ಡ ಮಟ್ಟದ ಪ್ರತಿಭಟನೆಯೇ ನಡೆಯಿತು. ಜಾಗರಣ ಸಾರ್ವಜನಿಕ ಸಭೆಗಳಲ್ಲಿ ಮಹಿಳಾ ಪ್ರತಿಭಟನಾಕಾರರ ಸಂಖ್ಯೆ ಬೃಹತ್ ಸಂಖ್ಯೆಯಲ್ಲಿತ್ತು. ಕುಟುಂಬದ ದೈನಿಕ ಅಗತ್ಯಗಳಿಗೆ ಸ್ಪಂದಿಸುತ್ತಲೇ ಪಂಜಾಬಿನ ಮಹಿಳೆಯರು ಸಾರ್ವಜನಿಕವಾಗಿಯೂ ಕಾಣಿಸಿಕೊಳ್ಳುತ್ತಿರುವುದು ಒಂದು ಆಶಾದಾಯಕವಾದ ಸೂಚನೆಯೇ ಆದರೂ



ಅವರ ಸಮಸ್ಯೆಗಳನ್ನು ಸರಿಯಾಗಿ ಅರ್ಥಮಾಡಿಕೊಂಡು ಹೋರಾಡುವುದಕ್ಕೆ ಮಹಿಳಾ ಚಳುವಳಿಯೂ ಸಮರ್ಥವಾಗಿರಬೇಕು.

**ಹೊಸತು :** ಇವತ್ತಿನ ಮಹಿಳಾ ಚಳುವಳಿಯ ಸವಾಲುಗಳೇನು?

**ರಂಜನಾ :** ಮಹಿಳಾ ಚಳುವಳಿಯಲ್ಲಿ ಎನ್.ಜಿ.ಓ.ಗಳ ಹಾವಳಿ ತುಂಬ. ಇವು ವ್ಯವಸ್ಥೆಯ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳ ಕುರಿತು ಚರ್ಚಿಸುವುದೇ ಇಲ್ಲ. ತತ್‌ಕ್ಷಣದ ಸಮಸ್ಯೆಗಳ ಪರಿಹಾರವನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಂಡಿರುತ್ತವೆ. ಸಮಾನತೆಯ ಸಮಾಜಕ್ಕಾಗಿ ದುಡಿಯುವ ಎಲ್ಲ ಪ್ರಗತಿಪರ ಮತ್ತು ಎಡ ಸಂಘಟನೆಗಳು ತಮ್ಮ ಎಲ್ಲ ಕಾರ್ಯಕ್ರಮಗಳಿಗೆ ಲಿಂಗಸಂಬಂಧಿ ಆಯಾಮ ಕೊಡಲು ಪ್ರಯತ್ನಿಸಬೇಕು. ವರದಕ್ಷಿಣೆಯ ಸಮಸ್ಯೆ, ಜಾತಿಯ ದಬ್ಬಾಳಿಕೆ, ಮನೆಗೆಲಸ ಮತ್ತು ಹೊಲದ ಕೆಲಸದ ದುಪ್ಪಟ್ಟು ಶ್ರಮ, ಹೆಣ್ಣು ಕೃಷಿಗೆ ನೀಡುವ ಶ್ರಮದ ಕೊಡುಗೆಯನ್ನು ಗುರುತಿಸದೇ ಇರುವುದು – ಈ ಎಲ್ಲ ಸಂಗತಿಗಳನ್ನು ರೈತ ಚಳುವಳಿ ಒಳಗೊಳ್ಳುವಂತಾಗ ಬೇಕು. ಇದು ತುರ್ತಾಗಿ ಆಗಬೇಕಾಗಿರುವ ರಾಜಕೀಯ ಸವಾಲು.

ಮೊದಲನೆಯದಾಗಿ, ಮಹಿಳಾ ಚಳುವಳಿಯು ತನ್ನ ಆರಂಭದ ದಿನಗಳಲ್ಲಿ ವರದಕ್ಷಿಣೆ ಸಮಸ್ಯೆಯನ್ನು ತೆಗೆದುಕೊಂಡಿತ್ತಾದರೂ, ಈಗ ಆಸ್ತಿಯಿಲ್ಲದ ದಲಿತ ಕುಟುಂಬಗಳ ಸಮಸ್ಯೆಗಳನ್ನು ತೆಗೆದುಕೊಳ್ಳುತ್ತಿಲ್ಲ. ಎರಡನೆಯದು, ಭೂಮಿ ಹೀನ ಬಡವರ ಪರವಾಗಿರುವ ದಲಿತ ಚಳುವಳಿಯೂ ಪಿತೃಪ್ರಾಧಾನ್ಯತೆಯ ಸಮಸ್ಯೆಗಳನ್ನು ತೆಗೆದುಕೊಳ್ಳುತ್ತಿಲ್ಲ. ಮೂರನೆಯದು, ರೈತ ಚಳುವಳಿಯೂ ಪಿತೃಪ್ರಾಧಾನ್ಯತೆಯ ಸಮಸ್ಯೆಗಳನ್ನು ತೆಗೆದುಕೊಳ್ಳುತ್ತಿಲ್ಲ. ಒಟ್ಟಿನಲ್ಲಿ, ಸಾಂಪ್ರದಾಯಿಕ ಮತ್ತು ಸಾಮಾಜಿಕ ಪದ್ಧತಿಗಳಿಂದಾಗಿ ಬಡ ರೈತಸಮುದಾಯದ ಬಹುಮಂದಿ ದಿವಾಳಿಯೆದ್ದಿದ್ದಾರೆ.

ನನಗೆ ಮಹಿಳೆಯರ ಚರಿತ್ರೆಯೆಂದರೆ ಅದೊಂದು ನಿರಂತರ ಹೋರಾಟದ ಚರಿತ್ರೆಯೇ ಆಗಿದೆ. ಎಡ ಚಳುವಳಿಯು ಮಹಿಳೆಯರ ಸಮಸ್ಯೆ ಮತ್ತು ಚಳುವಳಿಯಲ್ಲಿ ಅವರ ಪಾತ್ರವನ್ನು ಕುರಿತು ಇನ್ನೂ ವಿಶೇಷ ಗಮನ ಹರಿಸ ಬೇಕಾಗಿದೆ. ನಾವು ಮರೆಯದೇ ಇರಬೇಕಾದ ಒಂದು ಬಹುಮುಖ್ಯ ಅಂಶವೆಂದರೆ, ಹೆಣ್ಣಿನ ಮೇಲಿನ ದಾಳಿ ಬಂಡವಾಳಶಾಹಿಯ ಮೂಲದಿಂದಲೇ ಬರಲಿ, ಇಲ್ಲ ಊಳಿಗಮಾನ್ಯ ಸಂಸ್ಕೃತಿಯಿಂದಲೇ ಬರಲಿ ಅಥವಾ ಪಿತೃ ಪ್ರಾಧಾನ್ಯತೆಯ ಹೊಡೆತವೇ ಆಗಿರಲಿ ನಾವು ಆರ್ಥಿಕ ಸಂಗತಿಗಳನ್ನು ಅದರ ಸಾಮಾಜಿಕ ಸ್ವರೂಪದಿಂದ ಬೇರ್ಪಡಿಸುವುದಕ್ಕಾಗುವುದಿಲ್ಲ ಮತ್ತು ಒಂದು ಮತ್ತೊಂದರ ಬದಲಿನ ಆದ್ಯತೆಯ ವಿಷಯವೆಂದು ಪರಿಗಣಿಸುವುದೂ ಸರಿಯಲ್ಲ. ಒಂದಕ್ಕೆ ಬೀಳುವ ಹೊಡೆತ ಮತ್ತೊಂದಕ್ಕೆ ನೋವನ್ನು ಕೊಡುವುದು ಖಂಡಿತ.

**ಹೊಸತು :** ನಿಮ್ಮ ಇತ್ತೀಚಿನ ಚಟುವಟಿಕೆಯೇನು?

**ರಂಜನಾ :** ಒರಿಸ್ಸಾದ ಖಂದಮಾಲ್ ಬೆಟ್ಟಗಳಲ್ಲಿನ ಕಬ್ಬಿಣದ ಅದಿರನ್ನು ಲಪಟಾಯಿಸಿಕೊಳ್ಳಲು ದಕ್ಷಿಣ ಕೊರಿಯಾದ ಕಬ್ಬಿಣ ಕಾರ್ಪೊರೇಷನ್ ಒರಿಸ್ಸಾ ಸರ್ಕಾರದ ಜೊತೆಗೂಡಿ ಒಪ್ಪಂದವನ್ನು ಮಾಡಿಕೊಂಡಿತ್ತು. ಇದಕ್ಕಾಗಿ ಒರಿಸ್ಸಾ ಸರ್ಕಾರವು ೨೨೦೦ ಎಕರೆ ಭೂಮಿಯನ್ನು ಪೋಸ್ಕೋ ಯೋಜನೆಗಾಗಿ ವಶಪಡಿಸಿಕೊಂಡಿತ್ತು. ೨೦೦೫ರಿಂದ ಅಲ್ಲಿನ ಸಣ್ಣ ರೈತರು, ಅರಣ್ಯವಾಸಿಗಳು ಮತ್ತು ಬೆಸ್ತರು ವಿದೇಶಿ ಸಹಯೋಗದ ಈ ಕಬ್ಬಿಣದ ಉತ್ಪಾದನೆಯನ್ನು ವಿರೋಧಿಸಿದ್ದರು. ಜನರ ಪ್ರತಿಭಟನೆಯನ್ನು ಹತ್ತಿಕ್ಕಲು ಸರ್ಕಾರವು ಪ್ರತಿಭಟನಾಕಾರರ ಮೇಲೆ ಕ್ರಿಮಿನಲ್ ದಾವೆಗಳನ್ನು ಹೂಡಿತ್ತು. ಅಂತೂ ಜನರ ಹೋರಾಟಕ್ಕೆ ಜಯ ಸಿಕ್ಕಿದೆ. ಒಡಿಶಾದ ಕೈಗಾರಿಕಾ ಮಂತ್ರಿ ಪೋಸ್ಕೋದ ನಿರ್ಗಮನವನ್ನು ಕುರಿತು ಮಾರ್ಚ್ ೧೮ರಂದು ಪತ್ರಿಕಾ ಸಭೆಯಲ್ಲಿ ಪ್ರಕಟಿಸಿದರು. ಈ ಹೋರಾಟದ ಭಾಗವಾಗಿ ಅದರ ವಿವಿಧ ಆಯಾಮಗಳನ್ನು ಕುರಿತು ಅಧ್ಯಯನ ಮಾಡಿ ಬರೆಯುತ್ತಿರುವೆ.

**ಹೊಸತು :** ನೀವು ನಮ್ಮೊಂದಿಗೆ ಹಲವಾರು ವಿಷಯಗಳನ್ನು ಹಂಚಿಕೊಂಡಿದ್ದೀರ. ಅದಕ್ಕಾಗಿ ವಂದನೆಗಳು. ನಮಸ್ಕಾರ.


**ಡಾ|| ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯


# ಉಸಿರಾಡುವ ಹೆಣಗಳು

ವಜ್ರ ವೈಢೂರ್ಯ ಮಾಯವಾಗಿ
ಚಿನ್ನ ಬೆಳ್ಳಿ ಮಾಯವಾದವು
ಕಂಚು ಹಿತ್ತಾಳೆಯಲಿ ತೃಪ್ತಿಪಡೆದಿದ್ದ
ನೆಮ್ಮದಿಯು ಮಾಯವಾಗಿ
ಕಾಗದಗಳಾಗಿ ಹಾರಾಡತೊಡಗಿದವು.
ಕಾಲಘಟ್ಟದಂತೆ ಎಲ್ಲವೂ ಮಾಯವಾಗಿ
ಇತಿಹಾಸ ಬರೆದವು.

ಉಸುರೆತ್ತಲಿಲ್ಲ ಯಾರು, ಎಂದೂ
ಆ ನಮ್ಮ ಸಂಪತ್ತು ಮಾಯವಾದರೂ ಆಯಿತ್ತೆಲ್ಲಿ ?!
ನುಂಗಿ ಹೆಬ್ಬಾವುಗಳೆಲ್ಲ ಅಡಗಿಕೊಂಡವು ಬಿಲಗಳಲ್ಲಿ
ಚಕ್ರವ್ಯೂಹದಲ್ಲಿ, ನುಸುಳಿಯಾಗಿತ್ತು
ಬಲೆಗಳಲಿ ಬಂಧಿಗಳಾಗಿ ಉಸಿರಾಡುವ ಹೆಣಗಳಂತೆ
ಬದುಕು ಸಾಗಿತ್ತು.



ಕಾಲತಳದಿ ಭುವಿ ಕುಸಿಯುತ್ತಿದ್ದರೂ ಅರಿವಿಲ್ಲದೆ
ಅಸಹಾಯಕರ ರಕ್ತಹೀರುವ ಮಾನವ ರೂಪದಿ ದಾನವರು
ರದ್ದಿಯಾಗಿ ಕೊಳೆತು ನಾರಿದರು, ಅದರೊಳಗೆಯೇ ಮಿಯ್ಯುತ್ತಿರುವರು.

ದಿನಕ್ಕೊಂದು ಹೊಸ ಹೊಸ ಸುದ್ದಿ
ಹೊಸ ಗರಿಗರಿಯ ಕಾಗದಗಳು ಮುಂದೆ
ಮಾಯವಾಗುವುದಂತೆ !
ಬರಿ ಅಂಕಿಗಳಿಂದಲೆ ಇನ್ಮುಂದೆ ವಹಿವಾಟಂತೆ !
ಏಕೆಂದರೆ ಕಳ್ಳಕಾಕರ ಭಯವಿರುವುದಿಲ್ಲವಂತೆ !

ಪಾಪ ಕಳ್ಳಕಾಕರೇಕೆ ಬರುತ್ತಾರೆ
ಸಾಮಾನ್ಯ ಜನರ ಅಸ್ಥಿಪಂಜರ ಕದಿಯಲೆಂದೆ !?
ನರರಾಕ್ಷಸರು ತಿಂದು ನೀರು ಕುಡಿದು ಮುಗಿಸಿದ ಮೇಲೆ
ಉಳಿಯುವುದಾದರು ಏನು ?


**ಸಕೀನಾ ಬೇಗಂ**
ನಂ. ೮೪೮, ೨ನೇ ಮಹಡಿ, ೧ನೇ ಹಂತ, ೨ನೇ ಬ್ಲಾಕ್
೧೯ನೇ ಅಡ್ಡರಸ್ತೆ, ಹೆಚ್. ಬಿ. ಆರ್. ಬಡಾವಣೆ, ಬೆಂಗಳೂರು – ೫೬೦ ೦೪೩

# ಹೊಸ ರಾಮಾಯಣ "ಉತ್ತರಕಾಂಡ"ದ ರಾಮರಾಜ್ಯದಲ್ಲಿ "ಬರ"ವನ್ನು ತಂದ ಭೈರಪ್ಪನವರು!!

ಜನವರಿ ೨೦೧೭ರಲ್ಲಿ ರಾಮಾಯಣ ಆಧಾರಿತ ತಮ್ಮ ಹೊಸ ಕಾದಂಬರಿ "ಉತ್ತರಕಾಂಡ"ವನ್ನು ಭೈರಪ್ಪನವರು ಹೊರತಂದಿದ್ದಾರೆ (ಪ್ರಕಾಶಕರು–ಸಾಹಿತ್ಯ ಭಂಡಾರ, ಬೆಂಗಳೂರು). ವಾಲ್ಮೀಕಿಯು ರಾಮಾಯಣದಲ್ಲಿ ತನಗೇನು ಬೇಕೋ ಅದನ್ನೆಲ್ಲ ಬರೆದುಕೊಂಡ ರೀತಿಯಲ್ಲಿಯೇ ಭೈರಪ್ಪನವರು ತಮ್ಮ ರಾಮಾಯಣದಲ್ಲಿ ಏನು ಬೇಕೋ ಅದನ್ನೆಲ್ಲ ಬರೆದುಕೊಂಡಿದ್ದಾರೆ – ರಾಮರಾಜ್ಯದಲ್ಲಿ ಬರ ಇತ್ತು ಎಂದು ಹೇಳಿದ್ದಾರೆ, ರಾಮನು ವನವಾಸದಲ್ಲಿ ಸಸ್ಯಾಹಾರಿಯಾಗಿದ್ದ ಎಂದಿದ್ದಾರೆ!!! – ಅಂದರೆ ವಾಲ್ಮೀಕಿ ರಾಮಾಯಣದಲ್ಲಿ ಇರುವ ವಿಚಾರಗಳ ವಿರುದ್ಧವಾದ ಅಂಶಗಳನ್ನು ಪ್ರತಿಪಾದಿಸಿರುತ್ತಾರೆ. ("ಇದು ವಾಲ್ಮೀಕಿ ರಾಮಾಯಣವನ್ನವಲಂಬಿಸಿದ ನನ್ನ ನೇರ ಸೃಜನಶೀಲ ಪ್ರತಿಕ್ರಿಯೆ" – ಎಂದು ಭೈರಪ್ಪನವರು ತಮ್ಮ ಕೃತಜ್ಞತೆಯಲ್ಲಿ ಹೇಳಿದ್ದಾರೆ!)

ಆದರೆ ಭೈರಪ್ಪನವರ ಇತರ ಕಾದಂಬರಿಗಳಿಗೆ ಹೋಲಿಸಿದರೆ "ಉತ್ತರಕಾಂಡ"ವು ಯಾವುದೇ ರೀತಿಯ ಅಲೆಗಳನ್ನು ಸಾಹಿತ್ಯವಲಯದಲ್ಲಿ ಹುಟ್ಟುಹಾಕದೇ ಇರುವುದು ಅಚ್ಚರಿಯ ವಿಷಯವೇ ಸರಿ. ಕರ್ನಾಟಕದ ಸಂಘ–ಪರಿವಾರವಾಗಲೀ, ಪುರೋಹಿತಶಾಹಿ ವಲಯವಾಗಲೀ ಭೈರಪ್ಪನವರ ಈ ಹೊಸ ಕೃತಿಯನ್ನು ಕೊಂಡಾಡಿರುವುದನ್ನು ಯಾರೂ ಕಂಡಿಲ್ಲ. ಭೈರಪ್ಪನವರ "ಉತ್ತರಕಾಂಡ"ವನ್ನು ಓದಿದಾಗ ಮಾತ್ರ ಈ ಕುತೂಹಲಕ್ಕೆ ಉತ್ತರ ಸಿಗುವುದು.

ಭೈರಪ್ಪನವರ "ಉತ್ತರಕಾಂಡ"ದಲ್ಲಿ ಸೀತೆಯು ತನ್ನ ಕಥೆಯನ್ನು, ತನ್ನ ಭಾವನೆಗಳನ್ನು ಓದುಗನಲ್ಲಿ ನಿವೇದಿಸಿಕೊಳ್ಳುತ್ತಾಳೆ. ರಾಮನಿಂದ ಪರಿತ್ಯಕ್ತಳಾದ ನಂತರ ವಾಲ್ಮೀಕಿಯ ಆಶ್ರಮದಲ್ಲಿ ಹಳೆಯ ಘಟನೆಗಳನ್ನು ಮೆಲುಕು ಹಾಕುತ್ತ ತನ್ನ ಬದುಕಿಗೊಂದು ಅರ್ಥವನ್ನು ಹೆಣೆಯುವ ಪ್ರಯತ್ನದಲ್ಲಿರುವ ಸೀತೆಯನ್ನು ಭೈರಪ್ಪನವರು ಚಿತ್ರಿಸಿದ್ದಾರೆ. ತನ್ನ ಪತಿ ರಾಮನಿಂದ ಅವಮಾನಕ್ಕೀಡಾದ ಸೀತೆಯು ರಾಮನನ್ನು ಮತ್ತು ಅವನ ಕಾರ್ಯಗಳನ್ನು ವಿಮರ್ಶೆಗೆ ಗುರಿಪಡಿಸುತ್ತ ಒಂದು ಸ್ವತಂತ್ರ ಹಾಗೂ ಸ್ವಾಭಿಮಾನೀ ಬದುಕನ್ನು ಕಟ್ಟುವ ಪ್ರಯತ್ನದಲ್ಲಿರುವ ಸೀತೆಯನ್ನು ಈ ಕಾದಂಬರಿಯಲ್ಲಿ ನೋಡಬಹುದು.

ಸೀತೆಯ ಹೊಸ ಕಾಲ್ಪನಿಕ ಬದುಕನ್ನು ಚಿತ್ರಿಸುವ ಭೈರಪ್ಪನವರು ವಾಲ್ಮೀಕಿ ರಾಮಾಯಣದಲ್ಲಿ ಕಾಣಸಿಗುವ ಅನೇಕ ವಿಚಾರಗಳನ್ನು, ಸಂಗತಿಗಳನ್ನು ಹಾಗೂ ಘಟನೆಗಳನ್ನು ಆಮೂಲಾಗ್ರವಾಗಿ ಬದಲಿಸಿರುವುದನ್ನು ಕಾಣಬಹುದು. ಆದರೆ ಈ ಬದಲಾವಣೆಗಳು ಸೀತೆಯ ಜೀವನದ ಮೇಲೆ ಯಾವುದೇ ರೀತಿಯ ಪರಿಣಾಮವನ್ನು ಬೀರುವಂತಹ ಬದಲಾವಣೆಗಳಾಗಿರುವುದಿಲ್ಲ ಎಂಬುದನ್ನು ಗಮನಿಸಬೇಕು. ರಾಮಾಯಣದಲ್ಲಿ ಇರುವ ಹಾಗೇ ಹೇಳಬಾರದೆಂಬ ಏಕೈಕ ಹಠವು ಈ ಬದಲಾವಣೆಗಳಿಗೆ ಲೇಖಕನನ್ನು ಆತನ ಅಂಕೆ ಮೀರಿ ತಳ್ಳಿದೆ ಎಂಬುದು ಬಹಳ ಸ್ಪಷ್ಟ.

ಉದಾಹರಣೆಗೆ ರಾವಣನಿಂದ ತನ್ನ ಅಪಹರಣ ಹೇಗಾಯಿತೆಂಬುದನ್ನು ಸೀತೆಯು ಈ ರೀತಿ ವಿವರಿಸುತ್ತಾಳೆ (ನೋಡಿ : ಪುಟ ೨೧೯) :

"...ಇದ್ದಕ್ಕಿದ್ದಂತೆ ಕುಟೀರದ ಬಾಗಿಲು ಮುರಿದ ಶಬ್ದ. ಎದೆ ಹೊಡೆದುಕೊಳ್ಳತೊಡಗಿತು. ...ಒಬ್ಬ ದೈತ್ಯ ಒಳಗೆ ನುಗ್ಗಿದ. ನನ್ನನ್ನು ತಬ್ಬಿ ಹೊರಕ್ಕೆ ಎಳೆದ. ಆ್ಹ ಎಂದು ಕಿರುಚಿಕೊಂಡೆ. ತೆರೆದ ಬಾಯಿಗೆ ಒಂದು ಬಟ್ಟೆಯ ಉಂಡೆ ತುರುಕಿ ನನ್ನನ್ನು ಎತ್ತಿ ಹೆಗಲ ಮೇಲೆ ಹಾಕಿಕೊಂಡು ಹೊರಗೆ ನಡೆದ. ಇನ್ನೂ ನಾಲ್ಕು ಜನ ರಾಕ್ಷಸರು ಕಂಡರು. ...ಸಿದ್ಧಪಡಿಸಿಟ್ಟುಕೊಂಡಿದ್ದ, ಹೆಣವನ್ನು ಮಲಗಿಸುವಂತಹ ಚಟ್ಟದಂತಹ ವಾಹನದ ಮೇಲೆ ಮಲಗಿಸಿ ಕೈಕಾಲುಗಳನ್ನು ಅದಕ್ಕೆ ಬಿಗಿದರು. ನಾಲ್ವರು ಎತ್ತಿ ಒಂದೊಂದು ಕಡೆಯನ್ನು ಹೆಗಲಿಗೆ ಏರಿಸಿಕೊಂಡು ದಢ ದಢ ದಢ ಓಡಿದರು."

ಅಂದರೆ ಸೀತೆಯ ಅಪಹರಣವನ್ನು ನೇರವಾಗಿ ಸ್ವತಃ ರಾವಣನು ಮಾಡುವುದಿಲ್ಲ ಹಾಗೂ ಪುಷ್ಪಕ ವಿಮಾನದ ಬಳಕೆಯೂ ಸಹ ಇಲ್ಲಿ ಬರುವುದಿಲ್ಲ. ಈ ಕಥಾನಕಕ್ಕೆ ಎರಡು ವಿವರಣೆಗಳನ್ನು ಮುಂದಿಡಬಹುದು.

೧. ರಾಮಾಯಣದ ಕಾಲದಲ್ಲಿ ವಿಮಾನದ ಅಸ್ತಿತ್ವವನ್ನು ಒಪ್ಪಿಕೊಳ್ಳದ ಭೈರಪ್ಪನವರು ತಾವು ಬರೆದ ಹೊಸ ರಾಮಾಯಣದಲ್ಲಿ ವಿಮಾನದ ಪ್ರಸ್ತಾಪವನ್ನೇ ಎತ್ತಿಲ್ಲ, ಮತ್ತು

೨. ವಿಮಾನವಿಲ್ಲದ್ದರಿಂದ ಸೀತೆಯ ಅಪಹರಣವನ್ನು ರಾವಣನು ತನ್ನ ಅನುಚರರ ಮೂಲಕ ಮಾಡಿಸುತ್ತಾನೆ.

ಸೀತೆಯನ್ನು ರಾವಣನು ಅಪಹರಿಸಿದರೂ ಅಥವಾ ರಾವಣನ ಕಡೆಯವರು ಅಪಹರಿಸಿದರೂ ಸೀತೆಯ ಜೀವನದ ಮೇಲೆ ಬೀರುವ ಪರಿಣಾಮದಲ್ಲಂತೂ ಬದಲಾವಣೆಯಿಲ್ಲ. ವಾಲ್ಮೀಕಿಯ ರಾಮಾಯಣಕ್ಕೆ ಈ ರೀತಿಯ ಅನೇಕ "ತೋರಿಕೆಯ ಬದಲಾವಣೆ"ಗಳನ್ನು ತಂದಿರುವ ಭೈರಪ್ಪನವರು ಯಾವುದೇ ಹೊಸ ಒಳನೋಟವನ್ನು ಕೊಡುವುದರಲ್ಲಿ ಸೋತಿರುತ್ತಾರೆ. ಈ ಮೇಲಿನ ಎರಡು ಅಂಶಗಳನ್ನು ಇನ್ನೂ ಹೆಚ್ಚಿನ ಪರೀಕ್ಷೆಗೆ ಒಳಪಡಿಸುವ ಮುನ್ನ ಮೂಲ ವಾಲ್ಮೀಕಿ ರಾಮಾಯಣದ ಕುರಿತು ಭೈರಪ್ಪನವರಿಗೆ ಯಾವ ಯಾವ ಅಂಶಗಳ ಕುರಿತು ಮುನಿಸಿತ್ತೆಂಬುದನ್ನು ನೋಡೋಣ. ಆದರೆ ಈ ಮುನಿಸು ತೋರಿಕೆಯ ಮುನಿಸಾಗಿದ್ದು ಒಳಗಿನ ಕಾರಣಗಳು ಅಥವಾ ಒತ್ತಡಗಳು ಬೇರೆಯದೇ ಆಗಿತ್ತೆಂಬುದು ಒಳಹೊಕ್ಕು ನೋಡಿದಾಗ ಅರಿವಾಗುತ್ತದೆ. ಇರಲಿ ಮೊದಲಿಗೆ ಭೈರಪ್ಪನವರ ತೋರಿಕೆಯ ಮುನಿಸುಗಳನ್ನು ನೋಡೋಣ.

**ಮೂಲ ರಾಮಾಯಣವ ಕುರಿತು ಭೈರಪ್ಪನವರಿಗಿದ್ದ ತೋರಿಕೆಯ ಮುನಿಸು**

ತಮ್ಮ ಹೊಸ ರಾಮಾಯಣವಾದ "ಉತ್ತರಕಾಂಡ"ದಲ್ಲಿ ಭೈರಪ್ಪನವರು

ಎಮ್. ಸಿ. ಡೋಂಗ್ರೆ

**ಸೀತೆಯ ಹೊಸ ಕಾಲ್ಪನಿಕ ಬದುಕನ್ನು ಚಿತ್ರಿಸುವ ಭೈರಪ್ಪನವರು ವಾಲ್ಮೀಕಿ ರಾಮಾಯಣದಲ್ಲಿ ಕಾಣಸಿಗುವ ಅನೇಕ ವಿಚಾರಗಳನ್ನು, ಸಂಗತಿಗಳನ್ನು ಹಾಗೂ ಘಟನೆಗಳನ್ನು ಆಮೂಲಾಗ್ರವಾಗಿ ಬದಲಿಸಿರುವುದನ್ನು ಕಾಣಬಹುದು. ಆದರೆ ಈ ಬದಲಾವಣೆಗಳು ಸೀತೆಯ ಜೀವನದ ಮೇಲೆ ಯಾವುದೇ ರೀತಿಯ ಪರಿಣಾಮವನ್ನು ಬೀರುವಂತಹ ಬದಲಾವಣೆಗಳಾಗಿರುವುದಿಲ್ಲ ಎಂಬುದನ್ನು ಗಮನಿಸಬೇಕು. ರಾಮಾಯಣದಲ್ಲಿ ಇರುವ ಹಾಗೇ ಹೇಳಬಾರದೆಂಬ ಏಕೈಕ ಹಠವು ಈ ಬದಲಾವಣೆಗಳಿಗೆ ಲೇಖಕನನ್ನು ಆತನ ಅಂಕೆ ಮೀರಿ ತಳ್ಳಿದೆ ಎಂಬುದು ಬಹಳ ಸ್ಪಷ್ಟ.**

ಪರಿಚಯಿಸಿರುವ ಬದಲಾವಣೆಗಳನ್ನು ಗಮನಿಸಿದರೆ ಭೈರಪ್ಪನವರಿಗೆ ವಾಲ್ಮೀಕಿಯ ರಾಮಾಯಣದ ಯಾವ ಅಂಶಗಳ ಕುರಿತು ತೋರಿಕೆಯ ಮುನಿಸಿತ್ತೆಂಬುದನ್ನು ಕೂಡಲೇ ತಿಳಿಯಬಹುದು.

೧. ವಾಲ್ಮೀಕಿ ರಾಮಾಯಣದಲ್ಲಿರುವ ಅತಿಮಾನುಷ ವ್ಯಕ್ತಿಗಳು ಅಥವಾ ಅತಿಮಾನುಷ ಕೃತ್ಯಗಳ ಕುರಿತು ಭೈರಪ್ಪನವರಿಗೆ ಒಪ್ಪಿಗೆಯಿರಲಿಲ್ಲ.

(ಅ) ಪುತ್ರಪ್ರಾಪ್ತಿಗಾಗಿ ದಶರಥನು ನಡೆಸುವ ಅಶ್ವಮೇಧ ಯಾಗದಲ್ಲಿ ಅಗ್ನಿಯು ಪ್ರತ್ಯಕ್ಷನಾಗಿ ದಶರಥನಿಗೆ ಪಾಯಸದ ಪ್ರಸಾದವನ್ನು ನೀಡುವುದು ಅತಿಮಾನುಷ ಕೃತ್ಯ. ಬದಲಿಗೆ ಭೈರಪ್ಪನವರ ರಾಮಾಯಣದಲ್ಲಿ ವೈದ್ಯನೊಬ್ಬನು ಔಷಧಿಗಳ ಮೂಲಕ ಹಾಗೂ ದಶರಥನು ಒಬ್ಬೊಬ್ಬ ಪತ್ನಿಯ ಜೊತೆ ಒಂದೊಂದು ತಿಂಗಳು ಇರುವ ಹಾಗೇ ವಿಧಿಗಳನ್ನು ಹೇಳುವುದರ ಮೂಲಕ ರಾಮ, ಲಕ್ಷ್ಮಣ, ಭರತ ಹಾಗೂ ಶತ್ರುಘ್ನರ ಜನನ ಒಂದು ವೈದ್ಯಕೀಯ ಪ್ರಭಾವದಿಂದ ನೈಸರ್ಗಿಕವಾಗಿ ಸಾಧ್ಯವಾಗುತ್ತದೆ.




(ಆ) ಜನಕ ಮಹಾರಾಜನಿಗೆ ಶಿವಧನುಸ್ಸು ಸಿಕ್ಕಿರುವುದು ಒಂದು ಅತಿಮಾನುಷ ಕೃತ್ಯ. ಹೀಗಾಗಿ ಭೈರಪ್ಪನವರು ಅದನ್ನು ಬದಲಿಸುತ್ತಾರೆ !! (ಶಿವನೆಂಬುವನೇ ಅತಿಮಾನುಷನೋ ತಿಳಿಯದು !!) ಭೈರಪ್ಪನವರ ಪ್ರಕಾರ ಜನಕನ ಬಳಿ ಇದ್ದದ್ದು  ಸಾಮಾನ್ಯ ಬಿಲ್ಲಿಗಿಂತ ಸ್ವಲ್ಪ ದೊಡ್ಡದಾದ ಹಾಗೂ ಮಿಶ್ರಲೋಹದಿಂದ ತಯಾರಿಸಲ್ಪಟ್ಟ ಭಾರವಾದ ಬಿಲ್ಲು ಮಾತ್ರ. ಆದರೂ ಸಹ ಪುಟ ೨೭೨ರಲ್ಲಿ ಲೇಖಕನ ಕಣ್ತಪ್ಪಿಸಿಕೊಂಡು ಸೀತೆಯು ಅದು ಶಿವಧನುಸ್ಸೆಂದು ಒಪ್ಪಿಕೊಳ್ಳುವುದನ್ನು ನೋಡಬಹುದು !! (ಸೀತೆಯ ಮಾತು–"ಬಯಸಿ ಬಯಸಿ ಶಿವಧನುಸ್ಸನ್ನು ಅವನು ಮುರಿಯಲೆಂದು ದೈವವನ್ನು ಪ್ರಾರ್ಥಿಸಿ...")

(ಇ) ರಾಕ್ಷಸರು ಮತ್ತು ವಾನರರು ಮಾಯಾವಿಗಳು, ಅವರು ತಮ್ಮ ರೂಪಗಳನ್ನು ಹೇಗೆ ಬೇಕಾದರೂ ಬದಲಿಸಿಕೊಳ್ಳಬಹುದು ಎಂಬುದು ಅತಿಮಾನುಷ ವಿಚಾರ. ಹೀಗಾಗಿ ಮಾರೀಚನ ಪ್ರಸ್ತಾಪವಾಗಲೀ, ಕಬಂಧ ರಾಕ್ಷಸನ ಪ್ರಸ್ತಾಪವಾಗಲೀ, ಹನುಮಂತನ ಸೀಮೋಲ್ಲಂಘನವಾಗಲೀ ಅಥವಾ ಹನುಮಂತನು ಸಂಜೀವಿನೀ ಪರ್ವತವನ್ನು ಹೊತ್ತು ತರುವುದಾಗಲೀ ಭೈರಪ್ಪನವರ ರಾಮಾಯಣದಲ್ಲಿ ಇಲ್ಲ.

(ಈ) ಪುಷ್ಪಕ ವಿಮಾನವೆಂಬುದು ಒಂದು ಅತಿಮಾನುಷ ವಿಚಾರ. ಹೀಗಾಗಿ ಭೈರಪ್ಪನವರ ಉತ್ತರಕಾಂಡದಲ್ಲಿ ಪುಷ್ಪಕ ವಿಮಾನವೇ ಇಲ್ಲ.

ಭೈರಪ್ಪನವರ ಈ ಮೇಲಿನ ನಿಲುವು ಒಬ್ಬ ವಿಚಾರವಾದಿಯ, ವೈಜ್ಞಾನಿಕವಾಗಿ ವಿಮರ್ಶೆ ಮಾಡುವವನ ನಿಲುವಾಗಿ ಹೊರನೋಟಕ್ಕೆ ಭಾಸವಾದರೂ ಸಹ ಇದರ ಆಂತರ್ಯ ಬೇರೆಯದೇ ಆಗಿರುವುದನ್ನು ನಾವೆಲ್ಲರೂ ಅರಿಯಬೇಕು. ಬ್ರಾಹ್ಮಣಶಾಹಿಗೆ ಅಪಥ್ಯವಾಗಿರುವ ಕೆಲವು ವಿಚಾರಗಳನ್ನು ಮುಚ್ಚಿಟ್ಟು, ಸುಳ್ಳುಗಳನ್ನು ಪ್ರಚುರಪಡಿಸಲು ಹೊರಟ ಭೈರಪ್ಪನವರು ಈ ಹುಸಿ ವೈಚಾರಿಕತೆಯ ನಿಲುವನ್ನು ತಳೆದಿರುವುದು ಸ್ಪಷ್ಟವಾಗುತ್ತದೆ. ಹಾಗಾದರೆ ರಾಮಾಯಣದ ಕುರಿತು ಯಾವ ಸುಳ್ಳುಗಳನ್ನು ಭೈರಪ್ಪನವರು ತಮ್ಮ ರಾಮಾಯಣದ ಮೂಲಕ ಪ್ರಚಾರ ಮಾಡಲು ಹೊರಟಿದ್ದಾರೆ ಎಂಬುದನ್ನು ನೋಡೋಣ.

೨. ರಾಮನು ಮಾಂಸಾಹಾರಿಯಾಗಿದ್ದ ಎಂಬ ವಿಷಯದ ಕುರಿತು ಭೈರಪ್ಪನವರಿಗೆ ಮುನಿಸಿರುವುದನ್ನು ನೋಡಬಹುದು.

ರಾಮನು ವನವಾಸದಲ್ಲಿದ್ದಾಗ ಕೇವಲ ಸಸ್ಯಾಹಾರವನ್ನು ಮಾತ್ರ ಸೇವಿಸುತ್ತಿದ್ದ ಎಂದು ಬಿಂಬಿಸಲು ಭೈರಪ್ಪನವರು ಹೊರಟಿರುವುದು ಸ್ಪಷ್ಟವಾಗುತ್ತದೆ. ಈ ಸುಳ್ಳನ್ನು ತಮ್ಮ ಉತ್ತರಕಾಂಡದಲ್ಲಿ ಭೈರಪ್ಪನವರು ಪದೇ ಪದೇ ಪುನರುಚ್ಚರಿಸಿರುವುದನ್ನು ನೋಡಬಹುದು.

ಉದಾಹರಣೆಗೆ : (ಅ) ಪುಟ ೩೫: ಸೀತೆಯು ಊರ್ಮಿಳೆಗೆ ಹೇಳುವ ಮಾತಿದು : "ಊಟವೆಂದರೆ ಏನು ? ಕಂದಮೂಲಗಳು, ಹಣ್ಣು ಹಂಪಲು. ಹೊಟ್ಟೆಯೂ ತುಂಬುತ್ತಿರಲಿಲ್ಲ, ನಾಲಗೆಯೂ ಸ್ವೀಕರಿಸುತ್ತಿರಲಿಲ್ಲ...

(ಆ) ಪುಟ ೧೪೯ : ರಾಮನು ಗುಹನಲ್ಲಿ ಹೇಳುತ್ತಾನೆ, "ಮಿತ್ರಾ, ನಾವು ವನವಾಸಿಗಳು. ಕಂದಮೂಲಗಳು, ಹಣ್ಣುಹಂಪಲುಗಳನ್ನು ಬಿಟ್ಟು ಏನೂ ತಿನ್ನುವಂತಿಲ್ಲ."

(ಇ) ಪುಟ ೧೩೫ : ನಾವು ಸಿದ್ಧವಾಗುವ ಹೊತ್ತಿಗೆ ಅವನು (ಲಕ್ಷ್ಮಣನು) ಹಲಸಿನ ಬೀಜಗಳನ್ನು ತೆಗೆದು ಬೂದಿಯನ್ನು ಒರೆಸಿ, ಗುಡ್ಡೆ ಹಾಕಿದ್ದ. ಅದರ ಸುತ್ತ ಕುಳಿತೆವು. ... ಎಲ್ಲ ಬೀಜಗಳನ್ನೂ ಮುಗಿಸಿ ನಾಲ್ಕು ಬೊಗಸೆ ನೀರು ಕುಡಿದ ನಂತರ ಹೊಟ್ಟೆ ತುಂಬಿತು (ಪುಟ ೧೨೬).

(ಈ) ಪುಟ ೧೩೮ : ಸೀತೆಯ ಮಾತುಗಳು : ಭಾರದ್ವಾಜ ಋಷಿಗಳ ಆಶ್ರಮದಲ್ಲಿ ರಾತ್ರಿ ತಂಗುವಿಕೆ. ಅಲ್ಲಿ ಫಲಾಹಾರ ಸೇವನೆ. ಹಾಲೂ ಇತ್ತು. ಆದರೆ ರಾಮ ಅದನ್ನು ಮುಟ್ಟಲಿಲ್ಲ. ನಾನೂ ಕುಡಿಯಲಿಲ್ಲ.

(ಉ) ಪುಟ ೨೧೬ : ಸೀತೆಯ ಮಾತುಗಳು : "...ಲಕ್ಷ್ಮಣ ಹಣ್ಣು ಹಂಪಲು ಸಂಗ್ರಹಿಸಿ ಹಿಂದಿರುಗುವ ಸಮಯ ನದಿಯ ಆಚೆ ಬಯಲಿನಲ್ಲಿ ದಿನಸಿ ಬೆಳೆದು ಮಡಕೆಯಲ್ಲಿ ತುಂಬಿದ್ದುದರಿಂದ ಬರೀ ಹಣ್ಣುಹಂಪಲು, ಗೆಡ್ಡೆ ಗೆಣಸುಗಳಲ್ಲಿ ಬದುಕುವ ಅಗತ್ಯವಿರಲಿಲ್ಲ."

ವಾಲ್ಮೀಕಿಯ ರಾಮಾಯಣದಲ್ಲೂ ರಾಮನು ಕೂಡ ಋಷಿ, ಮುನಿಗಳ ಜೊತೆ ಮಾತನಾಡುವಾಗ ತಾನು ಕೇವಲ ಕಂದಮೂಲಗಳನ್ನು ತಿಂದು ಜೀವಿಸುತ್ತೇನೆ ಎಂದು ಸುಳ್ಳು ಹೇಳುತ್ತಿದ್ದು ವಾಸ್ತವವಾಗಿ ಪುಷ್ಕಳ ಮಾಂಸಾಹಾರವನ್ನು ಸದಾ ಭಕ್ಷಿಸುತ್ತಿದ್ದುದನ್ನು ವಾಲ್ಮೀಕಿಯ ರಾಮಾಯಣದಲ್ಲೇ ನೋಡಬಹುದು. ಮೊದಲಿಗೆ ರಾಮನು ಹೇಳಿದ ಸುಳ್ಳನ್ನು ಗಮನಿಸೋಣ : ಭಾರದ್ವಾಜ ಋಷಿಯೊಡನೆ ಮಾತನಾಡುವಾಗ ರಾಮನು ಹೇಳುತ್ತಾನೆ, "ಮುನಿವರ್ಯ, ನಮ್ಮ ತಂದೆಯವರ ಆಜ್ಞೆಯ ಮೇರೆಗೆ ನಾವು ವನವಾಸಕ್ಕೆ ಬಂದಿದ್ದೇವೆ ಹಾಗೂ ಕೇವಲ ಕಂದಮೂಲಗಳನ್ನು, ಹಣ್ಣುಗಳನ್ನು ಆಹಾರವಾಗಿ ಸ್ವೀಕರಿಸುತ್ತೇವೆ (೨-೫೪-೧೬).

ಆದರೆ ಅಯೋಧ್ಯೆಯನ್ನು ಬಿಟ್ಟು ಕಾಡನ್ನು ಪ್ರವೇಶ ಮಾಡಿದೊಡನೆ ರಾಮನು ಮಾಂಸಾಹಾರವನ್ನು ಸೇವಿಸುತ್ತಾನೆ !!

೧. ನೋಡಿ, ಶ್ಲೋಕ ೨-೫೨-೧೦೨ :

*ತೌ ತತ್ರ ಹತ್ವಾ ಚತುರ : ಮಹಾನ್ಮೃಗಾನ್ ।*
*ವರಾಹಂ ಋಷ್ಯಯ ಪ್ರಷತಂ ಮಹಾರುರುಮ್ ।*
*ಆದಾಯ ಮೇಧ್ಯಮ್ ತ್ವರಿತಂ ಭುಭುಕ್ಷಿತೌ ।*
*ವಾಸಾಯ ಕಾಲೇ ಯಯತುರ್ವನಸ್ಪತಿಮ್ ॥*

ವರಾಹ, ಋಷ್ಯ, ಪ್ರಷತ್ ಮತ್ತು ಮಹಾರುರು ಎಂಬ ಹೆಸರಿನ ನಾಲ್ಕು ಜಿಂಕೆಗಳನ್ನು ಕೊಂದು ಅವುಗಳ ಮಾಂಸವನ್ನು ತೆಗೆದುಕೊಂಡು ಬಂದ ರಾಮ ಮತ್ತು ಲಕ್ಷ್ಮಣರು ( ತೌ=ಅವರು), ಹಸಿವಿನಿಂದ ಬಳಲಿದ್ದು ಒಂದು ಮರದ ಆಸರೆಯನ್ನು ತಲುಪಿದರು.

೨. ನೋಡಿ, ಮತ್ತೊಂದು ಶ್ಲೋಕ, ೨-೫೫-೩ :

*ಕ್ರೋಶಮಾತ್ರಂ ತತೋಗತ್ವಾ ಭ್ರಾತರೌ ರಾಮಲಕ್ಷ್ಮಣೌ ।*
*ಬಹೂನ್ ಮೇಧ್ಯಾನ್ ಮೃಗಾನ್ ಹತ್ವಾ ಚೆರತುರ್ಯಮುನಾವನೇ ॥*

ಅಲ್ಲಿಂದ ಕೆಲವೇ ಮೈಲಿಗಳವರೆಗೆ ಹೋದ ರಾಮ ಲಕ್ಷ್ಮಣರು ಅನೇಕ ಜಿಂಕೆಗಳನ್ನು ಕೊಂದು ಅವುಗಳ ಮಾಂಸವನ್ನು ತಿಂದರು.

೩. ನೋಡಿ, ಮಗದೊಂದು ಶ್ಲೋಕ–ಚಿತ್ರಕೂಟಕ್ಕೆ ಆಗಮಿಸಿದ ಸೀತಾ–ರಾಮ–ಲಕ್ಷ್ಮಣರು ಅಲ್ಲಿ ಪರ್ಣಕುಟೀರವೊಂದನ್ನು ಕಟ್ಟುತ್ತಾರೆ. ಅದರೊಳಗೆ ಪ್ರವೇಶ ಮಾಡುವ ಮುನ್ನ ಒಂದು ಜಿಂಕೆಯನ್ನು ಬಲಿಕೊಡಬೇಕೆಂದು ರಾಮನು ಹೇಳುತ್ತಾನೆ. ಆಗ ಲಕ್ಷ್ಮಣನು ಒಂದು ಕೃಷ್ಣಮೃಗವನ್ನು ಕೊಂದು ಅದರ ಮಾಂಸವನ್ನು ಬೆಂಕಿಗೆ ಆಹುತಿಯನ್ನಾಗಿ ನೀಡುತ್ತಾನೆ !!

ಶ್ಲೋಕ ೨-೫೬-೨೬ :

*ಸ ಲಕ್ಷ್ಮಣ : ಕೃಷ್ಣಮೃಗಂ ಹತ್ವಾ ಮೇಧ್ಯಮ್ ಪ್ರತಾಪವಾನ್ ।*
*ಅಥ ಚಿಕ್ಷೇಪ ಸೌಮಿತ್ರಿ : ಸಮಿದ್ಧೇ ಜಾತ ವೇದಸಿ ॥*

೪. ಶ್ಲೋಕ ಸಂಖ್ಯೆ ೩-೪೪-೨೭ :

*ನಿಹತ್ಯ ಪೃಷತಂ ಚಾನ್ಯಂ ಮಾಂಸಮಾದಾಯ ರಾಘವಃ ।*

*ತ್ವರಮಾಣೋ ಜನಸ್ಥಾನಮ್ ಸಸಾರ ಅಭಿಮುಖಸ್ತದಾ ॥*

ಯಾವಾಗ ಮಾಯಾಮೃಗವು ರಾಮನ ಬಾಣಕ್ಕೆ ಸಿಲುಕಿ ರಾಕ್ಷಸ ಮಾರೀಚನ ರೂಪವನ್ನು ಹೊಂದಿ ಸತ್ತು ಬೀಳುತ್ತದೆಯೋ, ಆಗ ರಾಮನು ಇನ್ನೊಂದು ಜಿಂಕೆಯನ್ನು ಕೊಂದು, ಅದರ ಮಾಂಸವನ್ನು ಸಂಗ್ರಹಿಸಿ, ತನ್ನ ಕುಟೀರದ ಕಡೆಗೆ ಶೀಘ್ರವಾಗಿ ಹೊರಡುತ್ತಾನೆ.

೫. ಶ್ಲೋಕ ಸಂಖ್ಯೆ ೩-೪೭-೨೨ಬಿ, ೨೩ :

*ಸಮಾಶ್ವಸ ಮುಹುರ್ತಂತು ಶಕ್ಯಂ ವಸ್ತುಮಿಹ ತ್ವಯಾ ॥*

*ಆಗಮಿಷ್ಯತಿ ಮೇ ಭರ್ತಾ ವನ್ಯಮಾದಾಯ ಪುಷ್ಕಳಂ ।*

*ರುರೂನ್ ಗೋಧಾನ್ ವರಾಹಾನ್ ಚ್ ಹತ್ವಾ ಆದಾಯ ಅಮಿಷಾನ್ ಬಹು॥*

ಈ ಮೇಲಿನ ಶ್ಲೋಕವು ಸೀತೆಯು ರಾವಣನಿಗೆ ಹೇಳುವ ಮಾತಾಗಿರುತ್ತದೆ. ರಾವಣನು ಸನ್ಯಾಸೀ ವೇಶದಲ್ಲಿ ಸೀತೆಯನ್ನು ಸಮೀಪಿಸುತ್ತಾನೆ ಎಂದು ವಾಲ್ಮೀಕಿ ಹೇಳುತ್ತಾನೆ. ಆದರೆ ಸೀತೆಯು ಅವನನ್ನು "ಬ್ರಾಹ್ಮಣ"ನೆಂದೇ ಸಂಬೋಧಿಸುತ್ತಾಳೆ. ಸೀತೆಯು ರಾವಣನಿಗೆ ವಿಶ್ರಮಿಸಲು ವಿನಂತಿ ಮಾಡುತ್ತಾಳೆ. ಕೆಲವೇ ಹೊತ್ತಿನಲ್ಲಿ ನನ್ನ ಪತಿಯು ಕಾಡಿನಿಂದ ಬರುವವನಿದ್ದಾನೆ. ಬರುವಾಗ ಜೊತೆಯಲ್ಲಿ ರುರು ಜಿಂಕೆ, ಕಾಡುಹಂದಿ ಹಾಗೂ ಒಂದು ಜಾತಿಯ ಮುಂಗುಸಿ(ಗೋಧ)ಯ ಮಾಂಸವನ್ನೆಲ್ಲ ತರುತ್ತಾನೆ ಎಂದು ಹೇಳುತ್ತಾಳೆ. ಈ ಅಂಶವನ್ನು ಮುಚ್ಚಿಡಲೆಂದೇ ರಾವಣನು ಸೀತಾಪಹರಣಕ್ಕೆ ಬರಲೇ ಇಲ್ಲವೆಂಬಂತೆ ಉತ್ತರಕಾಂಡದಲ್ಲಿ ಭೈರಪ್ಪನವರಿಂದ ಚಿತ್ರಿಸಲಾಗಿದೆ.

ಈ ರೀತಿ ರಾಮನು ಮಾಂಸವನ್ನು ತಿನ್ನುತ್ತಿದ್ದನೆಂಬುದನ್ನು ವಾಲ್ಮೀಕಿಯು ಬಹಳ ಸ್ಪಷ್ಟವಾಗಿ ಹೇಳಿರುವಾಗಲೂ ಕೂಡ ಇದನ್ನು ಮರೆಮಾಚಲು ಭೈರಪ್ಪನವರು ತಮ್ಮ ರಾಮಾಯಣದಲ್ಲಿ ಪ್ರಯತ್ನಿಸಿರುವುದು ಸಂದೇಹಕ್ಕೆ ಎಡೆಮಾಡಿಕೊಡುತ್ತದೆ. ರಾಮಾಯಣದ ರಾಮನನ್ನು ಬ್ರಾಹ್ಮಣೀಕರಣಕ್ಕೆ ಒಳಗಾಗಿಸುವ ಒಂದು ಸಂಚು ಇದಾಗಿದೆ ಎನಿಸುತ್ತದೆ. ಶ್ರೀ ರಾಮನವಮಿಯ ದಿನದಂದು ಕರ್ನಾಟಕ ಸರ್ಕಾರವು ದಡ್ಡತನದಿಂದ "ಮಾಂಸನಿಷೇಧ"ದ ದಿನವನ್ನಾಗಿಸಿರುವುದು ಈ ಒಂದು ಸಂಚಿನ ಪರಿಣಾಮ ಎನಿಸುತ್ತದೆ.

೩. ಬ್ರಾಹ್ಮಣರನ್ನಾಗಲೀ, ಋಷಿಗಳನ್ನಾಗಲೀ, ದೇವತೆಗಳನ್ನಾಗಲೀ ಅಥವಾ ದೇವರುಗಳನ್ನಾಗಲೀ ಕುಕೃತ್ಯಗಳಲ್ಲಿ ತೊಡಗಿರುವಂತೇ ವಾಲ್ಮೀಕಿಯು ಚಿತ್ರಿಸಿರುವುದು ಭೈರಪ್ಪನವರ ಮೂರನೇ ಮುನಿಸಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಭೈರಪ್ಪನವರು ತಮ್ಮ ರಾಮಾಯಣದಲ್ಲಿ ಹಲಕೆಲವು ಬದಲಾವಣೆಗಳನ್ನು ತಂದಿದ್ದಾರೆ. ದೇವಾನುದೇವತೆಗಳ, ಬ್ರಾಹ್ಮಣರ ಹಾಗೂ ಋಷಿಗಳ ಕುಕೃತ್ಯಗಳನ್ನು ಮರೆಸಲು ಭೈರಪ್ಪನವರು ಯತ್ನಿಸಿದ್ದಾರೆ. ಕೆಲವು ಉದಾಹರಣೆಗಳನ್ನು ನೋಡೋಣ :

(ಅ) ಗೌತಮ ಋಷಿಯ ಪತ್ನಿ ಅಹಲ್ಯೆಯನ್ನು ಇಂದ್ರನು ಗೌತಮನ ವೇಶದಲ್ಲಿ ಬಂದು ಅವಳನ್ನು ಕೆಡಿಸಿರುವ ಕಥೆ ಬಹಳ ಪ್ರಸಿದ್ಧವಾದದ್ದು. ಆದರೆ ಇಂದ್ರನಿಗಾಗಲೀ, ಯಾವುದೇ ಋಷಿಗಾಗಲೀ ಕೆಟ್ಟ ಹೆಸರು ಬರಬಾರದೆಂಬ ನಿಟ್ಟಿನಲ್ಲಿ ಭೈರಪ್ಪನವರು ತಮ್ಮ ರಾಮಾಯಣದಲ್ಲಿ ಅಹಲ್ಯೆಯನ್ನು ಒಬ್ಬ ಸಾಮಂತ ರಾಜನು ಮರುಳು ಮಾಡಿ ಅವಳನ್ನು ಸುಖಿಸುತ್ತಾನೆ ಎಂದು ಬದಲಾಯಿಸಿದ್ದಾರೆ. ಈ ರೀತಿ ಸಾಮಂತ ರಾಜನೊಬ್ಬನನ್ನು ಹೊಣೆಗಾರನಾಗಿಸುವಲ್ಲಿ ಯಾವ ಪುರಾವೆಯೂ ಭೈರಪ್ಪನವರಲ್ಲಿ ಇಲ್ಲ.

ಆಶ್ಚರ್ಯವೆಂದರೆ ವಾಲ್ಮೀಕಿಯ ಪ್ರಕಾರ ಅಹಲ್ಯೆಗೆ ಇಂದ್ರನ ಈ ಸಂಚು ತಿಳಿದಿತ್ತು. ಇಂದ್ರನೊಡನೆ ರತಿಕ್ರೀಡೆ ಹೇಗಿರಬಹುದೆಂಬ ಕುತೂಹಲದಿಂದ ಅಹಲ್ಯೆಯು ಇಂದ್ರನೊಡನೆ ಕೂಡುತ್ತಾಳೆ (ದೇವರಾಜ ಕುತೂಹಲಾತ್ ಎಂಬ ಅದ್ಭುತ ಪದಪ್ರಯೋಗವನ್ನು ವಾಲ್ಮೀಕಿಯು ಮಾಡಿರುತ್ತಾನೆ), ಅಂದರೆ ವಾಲ್ಮೀಕಿಯ ರಾಮಾಯಣದಲ್ಲಿ ಅಹಲ್ಯೆಯು ಏನೂ ಅರಿಯದ ಮುಗ್ಧೆಯಂತೂ ಅಲ್ಲ !!

(ಆ) ಪುತ್ರಸಂತಾನಾಪೇಕ್ಷೆಯಿಂದ ದಶರಥನು ಅಶ್ವಮೇಧಯಾಗವನ್ನು ಮಾಡುತ್ತಾನೆ. ಇದರಲ್ಲಿ ಅಶ್ವವನ್ನು ಕೌಸಲ್ಯೆ, ಸುಮಿತ್ರೆ ಹಾಗೂ ಕೈಕೇಯಿಯರು ಕೊಲ್ಲುತ್ತಾರೆ. ಇದನ್ನು ಒಪ್ಪಲು ತಯಾರಿಲ್ಲದ ಭೈರಪ್ಪನವರು ಒಬ್ಬ ಪಂಡಿತನನ್ನು ತನ್ನ ಕಥೆಯಲ್ಲಿ ಬಳಸುತ್ತಾರೆ. ಅವನು ನೀಡುವ ಔಷಧಿಯಿಂದ ದಶರಥನಿಗೆ ಪುತ್ರಸಂತಾನ ಪ್ರಾಪ್ತಿಯಾಗುತ್ತದೆ ಎಂದು ಬಣ್ಣಿಸುತ್ತಾರೆ. ವಾಲ್ಮೀಕಿಯು ದಶರಥನ ಅಶ್ವಮೇಧದಲ್ಲಿ "ಋಷ್ಯಶೃಂಗ"ನೆಂಬ ಋಷಿಯನ್ನು ಯಾಕೆ ವಿಶೇಷವಾಗಿ ಪರಿಚಯಿಸಿದ್ದಾರೆ ಎಂಬ ಅಂಶವನ್ನು ಅರ್ಥಮಾಡಿಕೊಳ್ಳುವಲ್ಲಿ ಭೈರಪ್ಪನವರು ಸೋತಿರುವುದು ಸ್ಪಷ್ಟವಾಗುತ್ತದೆ ಅಥವಾ ಋಷ್ಯಶೃಂಗನ ಬಗ್ಗೆ ಹೇಳುವ ಮನಸ್ಸಿಲ್ಲದೇ ಒಬ್ಬ ಪಂಡಿತನನ್ನು ಉತ್ತರಕಾಂಡದಲ್ಲಿ ತರಲಾಗಿದೆಯೋ ಏನೋ ?!!

(ಇ) ರಾವಣನು ಸ್ವತಃ ಸೀತೆಯ ಅಪಹರಣವನ್ನು ಮಾಡಿಲ್ಲವೆಂಬಂತೆ ತಮ್ಮ ರಾಮಾಯಣದಲ್ಲಿ ಭೈರಪ್ಪನವರು ಚಿತ್ರಿಸಿರುವುದಕ್ಕೂ ಸಹ ಇದೇ ಕಾರಣವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಪುಷ್ಪಕ ವಿಮಾನವನ್ನೇ ಭೈರಪ್ಪನವರು ನಿರಾಕರಿಸಿರುತ್ತಾರೆ.

(ಈ) ರಾಮಾಯಣದ ಹನುಮಂತನಿಗೆ ಅಣಿಮಾದಿ ಸಿದ್ಧಿಗಳಿದ್ದವು ಎಂದು ಒಪ್ಪಲು ತಯಾರಿರದ ಭೈರಪ್ಪನವರು ವಾನರರ ಯಾವ ಸಾಹಸಗಳನ್ನೂ ಸಹ ತಮ್ಮ ರಾಮಾಯಣದಲ್ಲಿ ತಿಳಿಸಿಲ್ಲ. ಭೈರಪ್ಪನವರ ರಾಮಾಯಣದ ವಾನರರೆಂದರೆ ಮಾನವ ಜನಾಂಗದ ಒಂದು ಗುಂಪು ಅಷ್ಟೆ.

ಉತ್ತರಕಾಂಡದಲ್ಲಿ ತಂದಿರುವ ಇನ್ನೂ ಹಲ ಕೆಲವು ಬದಲಾವಣೆಗಳು ಎಷ್ಟೇ ರಾಮಾಯಣಗಳು ಬಂದರೂ ಸಹ ಅವೆಲ್ಲವನ್ನು ಮೂಲ ವಾಲ್ಮೀಕಿ ರಾಮಾಯಣಕ್ಕೆ ಹೋಲಿಸಿ ನೋಡುವುದು ಸಹಜವಾದ ಕ್ರಿಯೆಯಾಗಿರುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಹೇಳಲ್ಪಟ್ಟಿರುವ ಅನೇಕ ವಿಚಾರಗಳಿಗೆ ವಿರುದ್ಧವಾದ ಅಭಿಪ್ರಾಯಗಳನ್ನು ಮತ್ತು ಸನ್ನಿವೇಶಗಳನ್ನು ಭೈರಪ್ಪನವರು ತಮ್ಮ ರಾಮಾಯಣದಲ್ಲಿ ಚಿತ್ರಿಸಿದ್ದಾರೆ. ಲೇಖಕನ ಸೃಜನಶೀಲತೆಯ ಪರಿಧಿಯಲ್ಲಿ ಇವೆಲ್ಲವು ಬರುತ್ತದೋ ತಿಳಿಯದು.

ಮತ್ತೊಂದು ಪ್ರಮುಖ ವಿಚಾರವನ್ನು ಈ ಹಿನ್ನೆಲೆಯಲ್ಲಿ ಹೇಳಬೇಕಾಗುತ್ತದೆ. ಸೀತೆಯ ಅನಿಸಿಕೆಗಳು, ಸೀತೆಗೆ ರಾಮನ ಮೇಲೆ ನಿಧಾನವಾಗಿ ಬೆಳೆಯುವ ಉದಾಸೀನತೆಯು ಭೈರಪ್ಪನವರ ಊಹೆ ಅಷ್ಟೇ. ಭೈರಪ್ಪನವರು ತಮ್ಮ ರಾಮಾಯಣದಲ್ಲಿ ತಂದಿರುವ ಬದಲಾವಣೆಗಳ ಮೇಲೆ ಸೀತೆಯ ಭಾವನೆಗಳು ಅವಲಂಬಿತವಾಗಿಲ್ಲ ಬದಲಿಗೆ ರಾಮನ ವ್ಯಕ್ತಿಕೇಂದ್ರಿತ ನಿಲುವುಗಳ ಹಾಗೂ ಕಾರ್ಯಗಳ ಪರಿಣಾಮವಾಗಿರುತ್ತದೆ ಎಂಬುದನ್ನು ಮರೆಯಬಾರದು. ಈ ಹಿನ್ನೆಲೆಯಲ್ಲಿ ಭೈರಪ್ಪನವರು ವಾಲ್ಮೀಕಿ ರಾಮಾಯಣಕ್ಕೆ ಪ್ರತಿಯಾಗಿ ಮಾಡಿರುವ ಬದಲಾವಣೆಗಳು ಅರ್ಥವಿಹೀನವಾಗುತ್ತವೆ.

ಈ ಮೇಲಿನ ಮಾತುಗಳನ್ನು ಗಮನದಲ್ಲಿಟ್ಟುಕೊಂಡು ಈಗ ಭೈರಪ್ಪನವರು ತಮ್ಮ ರಾಮಾಯಣದಲ್ಲಿ ಹೇಳಿರುವ ಸುಳ್ಳುಗಳನ್ನು ಗಮನಿಸೋಣ.

**೧. ರಾಮನ ಹಾಗೂ ಭರತನ ಆಡಳಿತವನ್ನು ಕುರಿತಾದ ಸುಳ್ಳುಗಳು**

(ಅ) ಪುಟ ೨೩, ಸೀತೆ ಸುಕೇಶಿಗೆ ಹೇಳುವ ಮಾತು : "ಕೋಸಲ ರಾಜ್ಯದ ಎಷ್ಟೋ ಕಡೇ ಬರ ಅಂತ ಕೇಳಿದ್ದೆ. ಅಯೋಧ್ಯೆಯಲ್ಲೂ ಅನ್ನಕ್ಕೆ ಅಭಾವವಿತ್ತು."

(ಆ) ಪುಟ ೧೩೪, ಸೀತೆಯು ಗಂಗಾ ನದಿಗೆ ಹೇಳುವುದು, "ಆದರೆ ಅಯೋಧ್ಯೆಯನ್ನು ತಲುಪುವ ಮೊದಲೇ ದೇಶದ ಅರಾಜಕತೆ, ಬರ, ರೋಗರುಜಿನ, ಧರ್ಮಪಲ್ಲಟಗಳ ಅಶಾಂತಿ ಎದುರಾಗಿ ನಿನ್ನ ಹರಕೆಯನ್ನು ತೀರಿಸಿಲ್ಲ, ತೀರಿಸಲಾಗಿಲ್ಲ. ಮುನಿಯಬೇಡ."

(ಇ) ಪುಟ ೨೭೫, ವನವಾಸ ಮುಗಿಸಿ ರಾಮ-ಲಕ್ಷ್ಮಣ-ಸೀತೆಯರು ಅಯೋಧ್ಯೆಗೆ ಬರುವಾಗಿನ ದೃಶ್ಯ : "ಅಯೋಧ್ಯೆಯ ರಾಜಬೀದಿಗಳಲ್ಲಿ ಕಸಕಡ್ಡಿ ಚೆಲ್ಲಿದ್ದವು; ನಗರವು ಹಾಳು ಹಾಳು ಸುರಿಯುತ್ತಿತ್ತು : ರಾಮನು ವನವಾಸ ಮುಗಿಸಿ ಹಿಂದಿರುಗುವುದು ಜನರಿಗೆ



ಮಗ, ಸೊಸೆ, ಮಾವ, ಅಣ್ಣನ ಮಗ ಇವ್ರೆಲ್ಲರಿಗೆ ಕೊಟ್ಟು ಉಳಿದರೆ ನಿನಗೆ ಖಂಡಿತ ಟಿಕೇಟ್ ಇದೆ

ಗೊತ್ತಿಲ್ಲವೇ ? ಅಥವಾ ಅವನನ್ನು ಮರೆತುಬಿಟ್ಟರೇ ?"

(ಈ) ಪುಟ ೩೮೯, ರಾಮನು ವಶಿಷ್ಠರಲ್ಲಿ ಹೇಳುವ ಮಾತು : "ಭರತನು ನಾನಿಲ್ಲದೆಯೇ ಅಯೋಧ್ಯೆಯನ್ನು ಪ್ರವೇಶಿಸುವುದಿಲ್ಲವೆಂದ. ಪರಿಣಾಮವೇನಾಯ್ತು ? ಪ್ರಜೆಗಳಲ್ಲಿ ಅಂಜಿಕೆ ಇಲ್ಲವಾಯಿತು. ...ರಸ್ತೆಗಳ ನಿರ್ಮಾಣವಿಲ್ಲ. ದುರಸ್ತಿಯಿಲ್ಲ. ಕಳ್ಳಕಾಕರಿಂದ ಪ್ರಜೆಗಳಿಗೆ ರಕ್ಷಣೆ ಇಲ್ಲ..."

ಇವೆಲ್ಲ ಮಾತುಗಳೂ ಅಪ್ಪಟ ಸುಳ್ಳುಗಳು. ವಾಲ್ಮೀಕಿ ರಾಮಾಯಣದ ಪ್ರಕಾರ ಭರತನು ರಾಮನಿಲ್ಲದ ಸಮಯದಲ್ಲಿ ರಾಮ ಪಾದುಕೆಗಳನ್ನೇ ಸಿಂಹಾಸನದ ಮೇಲಿಟ್ಟು ಅತ್ಯುತ್ತಮ ಆಡಳಿತವನ್ನು ನೀಡುತ್ತಾನೆ ಹಾಗೂ ದೇಶದ ಸಂಪತ್ತನ್ನು ಹತ್ತು ಪಟ್ಟು ವೃದ್ಧಿಸುತ್ತಾನೆ. ಸೀತೆಯ ಬಾಯಿಂದ ಭೈರಪ್ಪನವರು ರಾಮನ ಆಡಳಿತದಲ್ಲಿ ಬರವಿತ್ತು ಎಂಬ ಸುಳ್ಳನ್ನು ಹೊರಡಿಸುತ್ತಾರೆ.

ಬಹಳ ಮುಖ್ಯವಾದ ವಿಚಾರವೆಂದರೆ ಈ ಅಂಶವು ರಾಮನ ಬಗ್ಗೆ ಸೀತೆಗೆ ಉದಾಸೀನತೆ ಬೆಳೆಸುವಲ್ಲಿ ಯಾವುದೇ ರೀತಿಯಲ್ಲಿ ಪರಿಣಾಮಗಳನ್ನು ಬೀರುವ ಅಂಶವಾಗಿರುವುದಿಲ್ಲ. ಬದಲಿಗೆ ರಾಮನ ಸ್ವಕೇಂದ್ರಿತ ಬುದ್ಧಿಯು ಸೀತೆಗೆ ಅವನಲ್ಲಿ ತಿರಸ್ಕಾರ ಬೆಳೆಯಲು ಕಾರಣವಾಗಿರುತ್ತದೆ ಎಂಬುದನ್ನು ಮರೆಯಬಾರದು.

**೨. ಪಾದುಕಾ ಪ್ರಕರಣದ ಬಗ್ಗೆ ಹೇಳಿರುವ ಸುಳ್ಳುಗಳು**

ಭೈರಪ್ಪನವರ ರಾಮಾಯಣದಲ್ಲಿ ಭರತನು ರಾಮನು ತೊಟ್ಟ ಪಾದುಕೆಗಳನ್ನೇ ತೆಗೆದುಕೊಂಡು ಹೋಗುತ್ತಾನೆ. ಹೀಗಾಗಿ ರಾಮನಿಗೆ ಚಪ್ಪಲಿಗಳೇ ಇಲ್ಲವಾಗುತ್ತವೆ. ಇದರಿಂದ ಮನನೊಂದ ಲಕ್ಷ್ಮಣ ಮತ್ತು ಸೀತೆಯರಿಬ್ಬರೂ ತಮ್ಮ ತಮ್ಮ ಪಾದುಕೆಗಳನ್ನು ತ್ಯಜಿಸುತ್ತಾರೆ ಹಾಗೂ ಮೂವರೂ ಬರಿಗಾಲಲ್ಲಿ ನಡೆಯುತ್ತಾರೆ.

ಆದರೆ ವಾಲ್ಮೀಕಿ ರಾಮಾಯಣದ ಪ್ರಕಾರ ಭರತನು ತನ್ನೊಡನೆ ಮೊದಲೇ ಬಂಗಾರದ ಪಾದುಕೆಗಳನ್ನು ತಂದಿರುತ್ತಾನೆ. ರಾಮನು ಅಯೋಧ್ಯೆಗೆ ಹಿಂದಿರುಗುವುದಿಲ್ಲವೆಂದು ಖಡಾಖಡಿಯಾಗಿ ಹೇಳಿದಾಗ ಬಂಗಾರದ ಪಾದುಕೆಗಳಿಗೆ ರಾಮನ ಆಶೀರ್ವಾದವನ್ನು ಪಡೆದು ಭರತನು ಅಯೋಧ್ಯೆಗೆ ಹಿಂದಿರುಗುತ್ತಾನೆ !!

ಬಹಳ ಮುಖ್ಯವಾದ ವಿಚಾರವೆಂದರೆ ಈ ಅಂಶವೂ ಸಹ ರಾಮನ ಬಗ್ಗೆ ಸೀತೆಗೆ ಉದಾಸೀನತೆ ಬೆಳೆಸುವಲ್ಲಿ ಯಾವುದೇ ರೀತಿಯಲ್ಲಿ ಪರಿಣಾಮಗಳನ್ನು ಬೀರುವ ಅಂಶವಾಗಿರುವುದಿಲ್ಲ. ಬದಲಿಗೆ ರಾಮನ ಸ್ವಕೇಂದ್ರಿತ ಬುದ್ಧಿಯು ಸೀತೆಗೆ ಅವನಲ್ಲಿ ತಿರಸ್ಕಾರ ಬೆಳೆಯಲು ಕಾರಣವಾಗಿರುತ್ತದೆ ಎಂಬುದನ್ನು ಮರೆಯಬಾರದು.

**೩. ಸೀತೆಯ ಮದುವೆ ಕುರಿತು ಹೇಳಿರುವ ಸುಳ್ಳುಗಳು**

ಪುಟ ೬೧ : (ರಾಮನು ಧನುಸ್ಸನ್ನು ಮುರಿದಾಗಿದೆ. ಸೀತೆ ಮತ್ತು ರಾಮರ ಮದುವೆಗೆ ಅಯೋಧ್ಯೆಯಿಂದ ದಶರಥನ ಸಮೇತ ಎಲ್ಲ ಕುಟುಂಬ ವರ್ಗವು ತಮ್ಮ ಎಲ್ಲ ವೈಭೋಗಗಳ ಸಮೇತ ಮಿಥಿಲೆಗೆ ಬಂದಿದ್ದಾರೆ.) ಭೈರಪ್ಪನವರ ರಾಮಾಯಣದಲ್ಲಿ ಆಗ ದಶರಥನು ಸೀತೆಯ ಜಾತಿ ಬಗ್ಗೆ, ಅವಳ ಹುಟ್ಟಿನ ಬಗ್ಗೆ ಕ್ಯಾತೆ ತೆಗೆದು ಈ ಮದುವೆ ಆಗಕೂಡದು ಎಂದು ಹಠ ಹಿಡಿಯುತ್ತಾನಂತೆ !! ದಶರಥನನ್ನು ಸುಳ್ಳು ಸುಳ್ಳೇ ಸಂಕುಚಿತಗೊಳಿಸುವ ಈ ಘಟನೆ ಒಂದು ಅನವಶ್ಯಕವಾದ ಹೇರಿಕೆಯಾಗಿರುತ್ತದೆ.

ಈ ಅಂಶವೂ ಸಹ ರಾಮನ ಬಗ್ಗೆ ಸೀತೆಗೆ ಉದಾಸೀನತೆ ಬೆಳೆಸುವಲ್ಲಿ ಯಾವುದೇ ರೀತಿಯಲ್ಲಿ ಪರಿಣಾಮಗಳನ್ನು ಬೀರುವ ಅಂಶವಾಗಿರುವುದಿಲ್ಲ. ಬದಲಿಗೆ ರಾಮನ ಸ್ವಕೇಂದ್ರಿತ ಬುದ್ಧಿಯು ಸೀತೆಗೆ ಅವನಲ್ಲಿ ತಿರಸ್ಕಾರ ಬೆಳೆಯಲು ಕಾರಣವಾಗಿರುತ್ತದೆ ಎಂಬುದನ್ನು ಮರೆಯಬಾರದು.

**೪. ಕೌಸಲ್ಯೆ ಹಾಗೂ ಸುಮಿತ್ರೆಯರ ಬಗ್ಗೆ ಹೇಳಿರುವ ಸುಳ್ಳು**

ಭೈರಪ್ಪನವರು ತಮ್ಮ ರಾಮಾಯಣದಲ್ಲಿ ರಾಮನು ವನವಾಸ ಮುಗಿಸಿ ಅಯೋಧ್ಯೆಗೆ ಹಿಂದಿರುಗುವ ಮೊದಲೇ ಕೌಸಲ್ಯೆ ಹಾಗೂ ಸುಮಿತ್ರೆಯರು ದೈವಾಧೀನರಾಗಿರುತ್ತಾರೆಂದು ಚಿತ್ರಿಸಿದ್ದಾರೆ. (ಪುಟ ೨೮೪, ಭರತನು ರಾಮನಿಗೆ ಹೇಳುವ ಮಾತು : "ಅಣ್ಣಾ, ನಿನಗೆ ತಿಳಿದಿದೆಯೋ ಇಲ್ಲವೋ, ಅಯೋಧ್ಯಾ ಪ್ರವೇಶ ಮಾಡುವ ಮುನ್ನ ನೀನು ಎರಡು ತರ್ಪಣ ನೀಡಬೇಕು. ... ನನ್ನ ಇಬ್ಬರೂ ದೊಡ್ಡಮ್ಮಂದಿರೂ, ಚಿತ್ರಕೂಟದಿಂದ ನಾವು ಹಿಂದಿರುಗಿದೆವಲ್ಲ, ಒಂದು ವರ್ಷದಲ್ಲಿ ಹೋಗಿ ಬಿಟ್ಟರು...")

ಆದರೆ ವಾಲ್ಮೀಕಿಯ ರಾಮಾಯಣದಲ್ಲಿ ಕೌಸಲ್ಯೆ, ಸುಮಿತ್ರೆ, ಕೈಕೇಯಿಯು ರಾಮ ಪಟ್ಟಾಭಿಷೇಕದ ಸಮಯದಲ್ಲಿ ಆತ್ಮೀಯತೆಯಿಂದ ಸೀತೆಯನ್ನು ಹಾಗೂ ವಾನರ ಸ್ತ್ರೀಯರನ್ನೂ ಸಿಂಗರಿಸುತ್ತಾರೆ.

ಈ ಅಂಶವೂ ಸಹ ರಾಮನ ಬಗ್ಗೆ ಸೀತೆಗೆ ಉದಾಸೀನತೆ ಬೆಳೆಸುವಲ್ಲಿ ಯಾವುದೇ ರೀತಿಯಲ್ಲಿ ಪರಿಣಾಮಗಳನ್ನು ಬೀರುವ ಅಂಶವಾಗಿರುವುದಿಲ್ಲ. ಬದಲಿಗೆ ರಾಮನ ಸ್ವಕೇಂದ್ರಿತ ಬುದ್ಧಿಯು ಸೀತೆಗೆ ಅವನಲ್ಲಿ ತಿರಸ್ಕಾರ ಬೆಳೆಯಲು ಕಾರಣವಾಗಿರುತ್ತದೆ ಎಂಬುದನ್ನು ಮರೆಯಬಾರದು.

**ಉತ್ತರಕಾಂಡದಲ್ಲಿರುವ ಕೆಲವು ಐತಿಹಾಸಿಕ ತಪ್ಪುಗಳು**

ಪುರಾಣಾಧಾರಿತ ಕಾದಂಬರಿಗಳನ್ನು ಪುನರ್ರಚಿಸುವಾಗ ಅದರ ಕರ್ತೃವು ಬಹಳ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ. ಕಾದಂಬರಿಯಲ್ಲಿ ಹೇಳಲ್ಪಡುವ ವಿಚಾರಗಳು ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದವೇ ಎಂಬುದನ್ನು ಗಮನಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಭೈರಪ್ಪನವರ ಉತ್ತರಕಾಂಡ ಕಾದಂಬರಿಯನ್ನು ಅಭ್ಯಸಿಸಿದಾಗ ಎರಡು ದೊಡ್ಡ ತಪ್ಪುಗಳು ನಮ್ಮ ಗಮನಕ್ಕೆ ಬರುತ್ತವೆ. ಇದು ಕೃತಿಕಾರನ ಅಜಾಗರೂಕತೆಯಿಂದ ಆಗಿರುವ ತಪ್ಪುಗಳು.

**ಮೊದಲನೇ ಐತಿಹಾಸಿಕ ತಪ್ಪು**

ಪುಟ ೨೯, ವೈದ್ಯಮಹಾರಾಜನೊಬ್ಬ ದಶರಥನಿಗೆ ಪುತ್ರಸಂತಾನ ಆಗುವ ಹಾಗೆ ಮಾಡುತ್ತೇನೆಂದು ಜವಾಬ್ದಾರಿ ತೆಗೆದುಕೊಳ್ಳುತ್ತಾನೆ. ಹಾಗೂ ದಶರಥನಿಗೂ ಮತ್ತು ಅವನ ಮೂವರು ರಾಣಿಯರಿಗೂ ಹೀಗೆಂದು ಆಜ್ಞಾಪಿಸುತ್ತಾನೆ, "ದಿನಾ ಬೆಳಿಗ್ಗೆ ನೀವು ನಾಲ್ವರೂ ಅಶ್ವತ್ಥಕ್ಕೆ ಒಂದು ಪ್ರದಕ್ಷಿಣೆ, ಅದು ಮುಗಿದ ತಕ್ಷಣ ಒಂದು ಷಟ್ ದಶಾಂಗದ ಸೂರ್ಯ ನಮಸ್ಕಾರ, ಹೀಗೆ ನೂರೆಂಟು ಬಾರಿ ಮಾಡಬೇಕು..."

ಸೂರ್ಯ ನಮಸ್ಕಾರ ಎನ್ನುವುದು ರಾಮಾಯಣದ ಕಾಲದಲ್ಲಿ ಇರಲಿಲ್ಲ. ಇದೊಂದು ೧೯ನೇ ಶತಮಾನದಲ್ಲಿ ಭಾರತದಲ್ಲಿ ನಾನಾ ಮೂಲಗಳಿಂದ ವಿಕಸಿತಗೊಂಡ ವಿದ್ಯಮಾನ. ಸೂರ್ಯನಿಗೆ ನಮಿಸುವ ಪದ್ಧತಿಯಿತ್ತೋ ಏನೋ. ಆದರೆ ಷಟ್ ದಶಾಂಗದ ಸೂರ್ಯ ನಮಸ್ಕಾರವೆನ್ನುವುದು ಬಹಳ ಇತ್ತೀಚಿನ ಬೆಳವಣಿಗೆ. ರಾಮಾಯಣದ ಕಾಲದಲ್ಲಿ ಅದು ಇರಲಿಲ್ಲ.

(ಒಬ್ಬ ಪಳಗಿದ ಯೋಗಪಟು ಮಾತ್ರ ಒಂದು ಸಲಕ್ಕೆ ನೂರೆಂಟು ಸೂರ್ಯ ನಮಸ್ಕಾರಗಳನ್ನು ಮಾಡಲು ಸಾಧ್ಯ. ಕೌಸಲ್ಯೆ, ಸುಮಿತ್ರೆ ಮತ್ತು ಕೈಕೇಯಿಯವರಿಂದ ಇದು ಸಾಧ್ಯವೇ !?)

**ಎರಡನೇ ಐತಿಹಾಸಿಕ ತಪ್ಪು**

ಪುಟ ೧೨೪, "... ರಾಮನಿಗೆ ಎಚ್ಚರವಾಯಿತು. ಧಡಕ್ಕನೆ ಎದ್ದುಕುಳಿತು ಕೈಗಳನ್ನು ಉಜ್ಜಿ ಕಣ್ಣಿಗೆ ಒತ್ತಿಕೊಂಡು "ಕರಾಗ್ರೇ ವಸತೇ ಲಕ್ಷ್ಮೀ ಕರಮಧ್ಯೇ ಸರಸ್ವತಿ" ಹೇಳಿಕೊಂಡ !! ಇದಂತೂ ರಾಮಾಯಣದ ಕಾಲದಲ್ಲಿ ಅಸ್ತಿತ್ವದಲ್ಲೇ ಇಲ್ಲದ ವಿಚಾರವಾಗಿರುತ್ತದೆ. ಲಕ್ಷ್ಮೀ, ಸರಸ್ವತಿ ಇತ್ಯಾದಿ ದೇವಿಗಳ ಸ್ತುತಿಯು ಆರಂಭಗೊಂಡಿದ್ದು ಕ್ರಿಸ್ತಶಕದ ನಂತರದ ಕಾಲದಲ್ಲಿ.

ಒಟ್ಟಿನಲ್ಲಿ "ಉತ್ತರಕಾಂಡ"ವೆಂಬ ಭೈರಪ್ಪನವರ ರಾಮಾಯಣವು ಸೀತೆಯ ಆಂತರಿಕ ತೊಳಲಾಟಗಳನ್ನು ಸಮರ್ಥವಾಗಿ ಹಾಗೂ ಪರಿಣಾಮಕಾರಿಯಾಗಿ ಬಿಚ್ಚಿಡುವುದರಲ್ಲಿ ಸೋತಿದೆ. ಸ್ತ್ರೀಯ ಮಾನಸಿಕ ವ್ಯಾಕುಲತೆ, ಅವಳ ಆಶೆ, ಆಕಾಂಕ್ಷೆಗಳನ್ನು ತಿಳಿಯಪಡಿಸುವ ಅನೇಕ ಸಮರ್ಥ ಕಥಾನಕಗಳು, ಅನುಭವಗಳು ಸಾಹಿತ್ಯಲೋಕದಲ್ಲಿ ಈಗಾಗಲೇ ವಿಸ್ತೃತವಾಗಿ ಬಂದಿರುವ ಹಿನ್ನೆಲೆಯಲ್ಲಿ ಮಾನ್ಯ ಭೈರಪ್ಪನವರ "ಉತ್ತರಕಾಂಡ" ಒಂದು ಪೇಲವ ಕೃತಿಯಾಗಿ ಹೊರಹೊಮ್ಮಿದೆ.

**ಎಮ್. ಸಿ. ಡೋಂಗ್ರೆ**
"ಆಶೀರ್ವಾದ", ೩ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಆದರ್ಶನಗರ, ಹಾಸನ – ೫೭೩ ೨೦೧

**ಕತ್ತಲು ಮತ್ತು ದೀಪ**

"ಕತ್ತಲ ಮಗ್ಗಲುಗಳನ್ನು ಕತ್ತರಿಸಲು
ದೀಪದ ಚೂರಿ ಇಟ್ಟೆ
ಗಾಳಿಯ ಬೆಂಬಲ ಪಡೆದು
ಎಷ್ಟು ಝುಳಪಿಸಿದರೂ
ಕತ್ತಲು ಹರಿಹರಿದು ಮತ್ತೆ
ಕೂಡಿತು."

**ಮಹಾಲಿಂಗ ಪೋಳ**
ಜಮಖಂಡಿ



◆

**ಗೌರಿತನಯ**

◆




# ಉನ್ನತ ಶಿಕ್ಷಣ ಹಾಗೂ ಖಾಸಗೀಕರಣದ ಸವಾಲುಗಳು

ಅಚ್ಛೇದಿನದ ಕನಸು ಕಂಡು ಬೆಳೆಯುತ್ತಿರುವ ಪದವೀಧರ ನಿರುದ್ಯೋಗಿಗಳು ಮತ್ತು ಅರೆ ಉದ್ಯೋಗಿಗಳಿಂದ ಕಂಗೆಟ್ಟಿರುವ ಕೇಂದ್ರ ಸರಕಾರವು ಉನ್ನತ ಶಿಕ್ಷಣವು ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿಲ್ಲವೆಂದು ವಾದಿಸುತ್ತಿದೆ. ಆದ್ದರಿಂದ ಉನ್ನತ ಶಿಕ್ಷಣದಲ್ಲಿ ಗುಣಾತ್ಮಕ ಮತ್ತು ಸಂಖ್ಯಾತ್ಮಕ ಬದಲಾವಣೆಗೆ ಹಲವಾರು ಸಲಹೆಗಳನ್ನು ಕೊಡಲಾಗುತ್ತಿದೆ. ಇದು ಉನ್ನತ ಶಿಕ್ಷಣಕ್ಕೆ ನಿರ್ಬಂಧಗಳನ್ನು ವಿಧಿಸುವುದಲ್ಲದೆ ಮಾರುಕಟ್ಟೆಯ ಅಗತ್ಯಗಳಿಗನುಗುಣವಾಗಿ ಬದಲಾವಣೆ ಮಾಡಲು ಪ್ರಯತ್ನಿಸುತ್ತಿದ್ದಾರೆ. ಈ ರೀತಿ ನಿರ್ಬಂಧಗಳ ಮೂಲಕ ಉನ್ನತ ಶಿಕ್ಷಣವನ್ನು ನೀತಿ ನಿಯಮಗಳ ಮೂಲಕ ಕೇವಲ ಆಯ್ದ ವರ್ಗಗಳಿಗೆ ಮಾತ್ರ ಮೀಸಲಿರಿಸುವ ಪ್ರಕ್ರಿಯೆ ಆರಂಭವಾಗಿದೆ. ವಿದ್ಯಾರ್ಥಿ ವೇತನಗಳ ಕಡಿತ ಮತ್ತು ವಿದ್ಯಾರ್ಥಿ ವೇತನಗಳನ್ನು ಸಾಲಗಳಾಗಿ ಪರಿವರ್ತಿಸುವುದು ನೈಜ ಫೀಜುಗಳನ್ನು ವಿಧಿಸುವುದು ಶಿಕ್ಷಣದ ಖಾಸಗೀಕರಣ ಮುಂತಾದ ಕ್ರಮಗಳ ಮೂಲಕ ಉನ್ನತ ಶಿಕ್ಷಣಕ್ಕೆ ನಿರ್ಬಂಧ ವಿಧಿಸಲಾಗುತ್ತಿದೆ. ಸಂಶೋಧನೆಯ ಹಣ ಕಡಿತ ಮಾಡಿ ಮಾನವ ಸಂಪನ್ಮೂಲದ ಬಾಬಿಗಾಗಿ ಹಣವನ್ನು ಕಡಿಮೆ ಮಾಡಲಾಗಿದೆ.

ಇತ್ತೀಚೆಗೆ ಯು.ಜಿ.ಸಿ.ಯು ದೇಶದ ವಿಶ್ವವಿದ್ಯಾಲಯಗಳನ್ನು ಎ.ಬಿ.ಸಿ. ಎಂದು ವರ್ಗೀಕರಣ ಮಾಡಿ ಕರಡು ಅಧಿಸೂಚನೆ ಹೊರಡಿಸಿದೆ. ಇದನ್ನು ಅವುಗಳ ಸಾಧನೆಯ ಮೇಲೆ ಶ್ರೇಣೀಕರಣ ಮಾಡಲಾಗಿದೆ. ಇವುಗಳಿಗೆ ಹಲವಾರು ಸ್ವಾಯತ್ತತೆಗಳನ್ನು ನೀಡಿ ಪ್ರವೇಶ, ಹೊಸ ಕೋರ್ಸ್‌ಗಳ ಪ್ರಾರಂಭ, ಶುಲ್ಕ ನಿಗದಿ, ಸಂಪನ್ಮೂಲಗಳ ಕ್ರೋಢೀಕರಣ ಇತ್ಯಾದಿ ವಿಷಯಗಳಲ್ಲಿ ಸ್ವತಂತ್ರ ನೀಡಲಾಗುವುದೆಂದು ಘೋಷಿಸಲಾಗಿದೆ. ಇದು ಕಳೆದ ೩ ವರ್ಷಗಳಿಂದ ಬಿಜೆಪಿ ಸರಕಾರದ ಉನ್ನತ ಶಿಕ್ಷಣದ ಬಗ್ಗೆ ಇರುವ ಧೋರಣೆಗಳನ್ನು ಗಮನಿಸಿದವರಿಗೆ ಮೇಲಿನ ಸೂಚನೆಗಳು ಅನುಮಾನಗಳನ್ನು ಹುಟ್ಟಿಸಿದೆ.

ಅಚ್ಛೇದಿನದ ಕನಸು ಕಂಡು ಬೆಳೆಯುತ್ತಿರುವ ಪದವೀಧರ ನಿರುದ್ಯೋಗಿಗಳು ಮತ್ತು ಅರೆ ಉದ್ಯೋಗಿಗಳಿಂದ ಕಂಗೆಟ್ಟಿರುವ ಕೇಂದ್ರ ಸರಕಾರವು ಉನ್ನತ ಶಿಕ್ಷಣವು ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿಲ್ಲವೆಂದು ವಾದಿಸುತ್ತಿದೆ. ಆದ್ದರಿಂದ ಉನ್ನತ ಶಿಕ್ಷಣದಲ್ಲಿ ಗುಣಾತ್ಮಕ ಮತ್ತು ಸಂಖ್ಯಾತ್ಮಕ ಬದಲಾವಣೆಗೆ ಹಲವಾರು ಸಲಹೆಗಳನ್ನು ಕೊಡಲಾಗುತ್ತಿದೆ. ಇದು ಉನ್ನತ ಶಿಕ್ಷಣಕ್ಕೆ ನಿರ್ಬಂಧಗಳನ್ನು ವಿಧಿಸುವುದಲ್ಲದೆ ಮಾರುಕಟ್ಟೆಯ ಅಗತ್ಯಗಳಿಗನುಗುಣವಾಗಿ ಬದಲಾವಣೆ ಮಾಡಲು ಪ್ರಯತ್ನಿಸುತ್ತಿದ್ದಾರೆ. ಈ ರೀತಿ ನಿರ್ಬಂಧಗಳ ಮೂಲಕ ಉನ್ನತ ಶಿಕ್ಷಣವನ್ನು ನೀತಿ ನಿಯಮಗಳ ಮೂಲಕ ಕೇವಲ ಆಯ್ದ ವರ್ಗಗಳಿಗೆ ಮಾತ್ರ ಮೀಸಲಿರಿಸುವ ಪ್ರಕ್ರಿಯೆ ಆರಂಭವಾಗಿದೆ. ವಿದ್ಯಾರ್ಥಿ ವೇತನಗಳ ಕಡಿತ ಮತ್ತು ವಿದ್ಯಾರ್ಥಿ ವೇತನಗಳನ್ನು ಸಾಲಗಳಾಗಿ ಪರಿವರ್ತಿಸುವುದು ನೈಜ ಫೀಜುಗಳನ್ನು ವಿಧಿಸುವುದು ಶಿಕ್ಷಣದ ಖಾಸಗೀಕರಣ ಮುಂತಾದ ಕ್ರಮಗಳ ಮೂಲಕ ಉನ್ನತ ಶಿಕ್ಷಣಕ್ಕೆ ನಿರ್ಬಂಧ ವಿಧಿಸಲಾಗುತ್ತಿದೆ. ಸಂಶೋಧನೆಯ ಹಣ ಕಡಿತ ಮಾಡಿ ಮಾನವ ಸಂಪನ್ಮೂಲದ ಬಾಬಿಗಾಗಿ ಹಣವನ್ನು ಕಡಿಮೆ ಮಾಡಲಾಗಿದೆ.

ಇಲ್ಲಿಯವರೆಗೆ ಕೇಂದ್ರ ಸರ್ಕಾರ ಉನ್ನತ ಶಿಕ್ಷಣದ ಅಭಿವೃದ್ಧಿಗೆ ಕೈಗೊಂಡ ಕ್ರಮಗಳು ನಿರಾಶಾದಾಯಕ. ಉನ್ನತ ಶಿಕ್ಷಣ ಸಂಸ್ಥೆಗಳು, ಅವುಗಳಿಗೆ ಇದ್ದ ಸ್ವಾಯತ್ತತೆ, ಶಿಕ್ಷಣದ ಪ್ರಜಾಸತ್ತೀಕರಣದಂತಹ ಅಂಶಗಳನ್ನು ತಿರಸ್ಕಾರದಿಂದ ನೋಡುತ್ತಿದೆ. ಉನ್ನತ ಶಿಕ್ಷಣಕ್ಕೆ ಕೊಟ್ಟಿರುವ ಆದ್ಯತೆ ಗಣನೀಯವಾದುದಲ್ಲ. ಈ ದೇಶ ಕಳೆದ ಮೂರು ವರ್ಷಗಳಲ್ಲಿ ಇಬ್ಬರು ಶಿಕ್ಷಣ ಸಚಿವರನ್ನು ನೋಡಿದೆ. ಮೊದಲು ಶಿಕ್ಷಣ ಸಚಿವರಾಗಿದ್ದವರು ಇಡೀ ಶಿಕ್ಷಣ ಇಲಾಖೆಯನ್ನು ಉಡಾಫೆ ದುರಹಂಕಾರ ಹಾಗೂ ಶಿಕ್ಷಣ ಕ್ಷೇತ್ರದ ಎಲ್ಲರನ್ನು (ಸಂಘಪರಿವಾರವನ್ನು ಹೊರತುಪಡಿಸಿ) ತಿರಸ್ಕಾರದಿಂದ ನೋಡುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದಾರೆ. ದೇಶದ ಪ್ರಮುಖ ನೀತಿ ನಿರ್ಣಾಯಕ ಸಂಸ್ಥೆಗಳಲ್ಲಿ ಸಂಘಪರಿವಾರದವರನ್ನು ನೇಮಕ ಮಾಡಲಾಯಿತು, ಉದಾಹರಣೆಗೆ ಐಸಿಎಚ್‌ಆರ್, ಯುಜಿಸಿ, ಎಐಸಿಟಿಇ, ಎನ್‌ಸಿಇಆರ್‌ಟಿ ಮುಂತಾದವುಗಳಿಗೆ ಸಂಘಪರಿವಾರದ ವ್ಯಕ್ತಿಗಳನ್ನೇ ನೇಮಕ ಮಾಡಲಾಗಿದೆ.

ಕಳೆದ ೦೩ ಬಜೆಟ್‌ಗಳಲ್ಲಿ ಉನ್ನತ ಶಿಕ್ಷಣಕ್ಕೆ ಒದಗಿಸಲಾದ ಅನುದಾನ ಸಮರ್ಪಕವಾಗಿಲ್ಲ. ವಿಶ್ವವಿದ್ಯಾನಿಲಯ, ಕಾಲೇಜು ಹಾಗೂ ಇತರೆ ಶಿಕ್ಷಣ ಸಂಸ್ಥೆಗಳಿಗೆ ಒದಗಿಸಲಾದ ಅನುದಾನವನ್ನು ಕಡಿಮೆ ಮಾಡಲಾಗುತ್ತಾ ಬಂದಿದೆ. ಉನ್ನತ ಶಿಕ್ಷಣದ ಅಭಿವೃದ್ಧಿಗೆ ತರಲಾದ ರೂಸಾ ಯೋಜನೆಯ ಹಣಕಾಸಿನ ನೆರವನ್ನು

ಭಾರೀ ಪ್ರಮಾಣದಲ್ಲಿ ಕಡಿಮೆ ಮಾಡಲಾಗಿದೆ. ಇದೇ ರೀತಿ ಮಾಧ್ಯಮಿಕ ಶಿಕ್ಷಾ ಅಭಿಯಾನ ಹಾಗೂ ರಾಜ್ಯ, ಕೇಂದ್ರ ವಿಶ್ವವಿದ್ಯಾಲಯಗಳಿಗೆ ಒದಗಿಸುವ ಅನುದಾನಗಳಲ್ಲಿ ವ್ಯತ್ಯಯ ಮಾಡಲಾಗಿದೆ.



ಬಿಜೆಪಿ ಸರಕಾರದ ಶಿಕ್ಷಣ ವ್ಯವಸ್ಥೆ, ದಬ್ಬಾಳಿಕೆಯ ಸಂಸ್ಕೃತಿಯ ಹಾಗೂ ಅಬ್ಬರದ ಸಂಸ್ಕೃತಿಯ ಎಲ್ಲಾ ವೈಪರೀತ್ಯ ಮತ್ತು ವೈರುಧ್ಯಗಳ ಪ್ರತಿರೂಪವಾಗಿದೆ. ಅಸಮಾನತೆಯ ಜಾಡ್ಯದಿಂದ ಬಳಲುತ್ತಿರುವ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಪ್ರಜಾಸತ್ತಾತ್ಮಕ ಚೌಕಟ್ಟಿನಲ್ಲಿರಬೇಕಾದ ಕನಿಷ್ಠ ಸಂವಾದಗಳು ಕೂಡ ಇಲ್ಲವಾಗಿವೆ. ಇಲ್ಲಿ ಪ್ರಜಾಸತ್ತೆಯ ಗೋರಿ ಕಟ್ಟಿ ಚರ್ಚೆ, ಸಂವಾದಗಳ ಬಗ್ಗೆ ಇರುವ ಕುತೂಹಲವನ್ನು ಅಪಾಯಕಾರಿ ಶತ್ರುವೆಂಬಂತೆ ದಮನಮಾಡಲಾಗುತ್ತದೆ. ಇಂದು ಭಾರತದ ಕ್ಷೀಣತೆಗೆ ಧಾರ್ಮಿಕ ತಿರಸ್ಕಾರವೇ ಕಾರಣ ಎಂದು ತಿಳಿದು ಹಿಂದೂಗಳನ್ನು ಸಂಘಟಿಸುವ ಮೂಲಕ ಮತ್ತು ಹಿಂದೂ ಪುನರುತ್ಥಾನದ ಮೂಲಕ ಭಾರತೀಯತೆಯನ್ನು ಸಾಧಿಸಲು ಸಾಧ್ಯವೆಂದು ಆರ್.ಎಸ್.ಎಸ್. ತಿಳಿದಿದೆ. ಇದು ಶಿಕ್ಷಣವನ್ನು ಸಾಂಪ್ರದಾಯಿಕ ರಾಷ್ಟ್ರೀಯ ಸಂಸ್ಕೃತಿ ಮತ್ತು ಮೌಲ್ಯಗಳನ್ನು ಎತ್ತಿ ಹಿಡಿಯುವುದರ ಮೂಲಕ ಸಾಧಿಸಬಹುದೆಂದು ವಾದಿಸುತ್ತಿದೆ. ದೇಶವನ್ನು ಬಲಗೊಳಿಸಲು ಭಾರತ ರಾಷ್ಟ್ರೀಯತೆಯನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆಸಬೇಕೆಂದು ವಾದಿಸುತ್ತದೆ. ಈ ಚಿಂತನೆಗಳನ್ನು ಅದು ವಿದ್ಯಾರ್ಥಿಗಳ ನಡುವೆ ಸಹ ಪ್ರಚಾರ ಮಾಡಲು ಸತತವಾಗಿ ಪ್ರಯತ್ನಿಸುತ್ತಿದೆ.

ಈ ದಿಸೆಯಲ್ಲಿ ನೂತನ ಶಿಕ್ಷಣ ನೀತಿಯನ್ನು ಜಾರಿಗೊಳಿಸುವ ಅಂಗವಾಗಿ ೨೦೧೬ರಲ್ಲಿ ಕರಡನ್ನು ಪ್ರಚುರಪಡಿಸಲಾಗಿದೆ. ಈ ಕರಡು ತಯಾರಿಸುವಲ್ಲಿ ಉನ್ನತ ಶಿಕ್ಷಣದ ಎಲ್ಲಾ ಪಾಲುದಾರರನ್ನು ಒಳಗೊಂಡಿರಲಿಲ್ಲ. ಸಂಘ ಪರಿವಾರದ ಹಾಗೂ ಕೆಲವು ಬಲಪಂಥೀಯ ನೌಕರಶಾಹಿಯನ್ನು ಒಳಗೊಂಡ ವ್ಯಕ್ತಿಗಳು ಈ ಕರಡನ್ನು ತಯಾರಿಸಿದರು. ಇವರುಗಳು ವಿದ್ಯಾರ್ಥಿಗಳ ಅಧ್ಯಾಪಕರ ಜೊತೆ ಸಂವಾದ ನಡೆಸಲು ಸಿದ್ಧರಿಲ್ಲ. ಇಡೀ ಉನ್ನತ ಶಿಕ್ಷಣವನ್ನು ಖಾಸಗೀಕರಣ ಮತ್ತು ವ್ಯಾಪಾರೀಕರಣ ಮಾಡುವುದರ ಜೊತೆಗೆ ಎಲ್ಲಾ ಶೋಷಿತ ಸಮುದಾಯಗಳನ್ನು ಉನ್ನತ ಶಿಕ್ಷಣದ ಸೌಲಭ್ಯ ವಂಚಿತರನ್ನಾಗಿ ಮಾಡುವ ಎಲ್ಲಾ ಲಕ್ಷಣಗಳು ಈ ಕರಡಿನಲ್ಲಿ ಪ್ರಕಾಶಮಾನವಾಗಿವೆ.

ಅನುದಾನಗಳ ಕೊರತೆಯ ಜೊತೆಗೆ ಕೇಂದ್ರ ಸರ್ಕಾರ ಶಿಕ್ಷಣದ ಸ್ವಾಯತ್ತತೆ, ಕ್ರಿಯಾಶೀಲತೆ ವೈವಿಧ್ಯತೆಯ ಮೇಲೆ ಗಧಾ ಪ್ರಹಾರ ಮಾಡತೊಡಗಿದೆ. ಶಿಕ್ಷಣದ ಸಂಸ್ಥೆಗಳ ಚಟುವಟಿಕೆಗಳ ಮೇಲೆ ಅನಗತ್ಯ ಹಸ್ತಕ್ಷೇಪ ನಡೆಸಲಾಗುತ್ತಿದೆ. ಕಳೆದ ೦೩ ವರ್ಷಗಳ ಅವಧಿಯಲ್ಲಿ ನಡೆದ ಜೆಎನ್‌ಯು, ಹೈದರಾಬಾದ್ ವಿಶ್ವವಿದ್ಯಾಲಯಗಳ ಘಟನೆಗಳು ಈ ಹಸ್ತಕ್ಷೇಪವನ್ನು ಪುಷ್ಠೀಕರಿಸುತ್ತವೆ. ಈ ದೇಶದ ಎಲ್ಲಾ ಶಿಕ್ಷಣ ಸಂಸ್ಥೆಗಳ ಆಡಳಿತವನ್ನು ಕೇಂದ್ರೀಕರಿಸಿ ನಿರಂಕುಶ ಪ್ರಭುತ್ವ ಸ್ಥಾಪಿಸುವ ಹುನ್ನಾರ ಇದರಲ್ಲಿದೆ. ಯು.ಜಿ.ಸಿ.ಯಂತಹ ಸಂಸ್ಥೆಗಳನ್ನು ಮುಚ್ಚಿ ಅದರ ಬದಲಿಗೆ ತನಗಿಷ್ಟವಾದ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಕೈಗೊಂಬೆ ಸಂಸ್ಥೆಗಳನ್ನು ರಚಿಸುವ ಪ್ರಯತ್ನ ನಡೆಯುತ್ತಿದೆ. ಯೋಜನಾ ಆಯೋಗ ರದ್ದುಮಾಡಿರುವುದರಿಂದ ಯು.ಜಿ.ಸಿ. ತನ್ನ ಯೋಜನಾ ಕಾರ್ಯಕ್ರಮಗಳನ್ನು ಕೈಬಿಟ್ಟಿದೆ. ಈ ಸಂಸ್ಥೆಯನ್ನು ದುರ್ಬಲಗೊಳಿಸುವ ಎಲ್ಲಾ ಪ್ರಯತ್ನಗಳನ್ನು ಕೇಂದ್ರ ಸರ್ಕಾರ ಮಾಡುತ್ತಿದೆ.

ಭಾರತದಲ್ಲಿ ಕಳೆದ ಎರಡು ದಶಕಗಳಲ್ಲಿ ಉನ್ನತ ಶಿಕ್ಷಣದಲ್ಲಿ ಭಾರೀ ಬೆಳವಣಿಗೆಯಾಗಿದೆ. ಉನ್ನತ ಶಿಕ್ಷಣಕ್ಕೆ ವಿದ್ಯಾರ್ಥಿಗಳ ದಾಖಲಾತಿಯೂ ಹೆಚ್ಚುತ್ತಿದ್ದು ಮತ್ತು ಹೆಚ್ಚಿನ ಶಿಕ್ಷಣ ಪಡೆದ ಮಾನವ ಸಂಪನ್ಮೂಲದ ಬೇಡಿಕೆಯೂ ಸಹ ಇದಕ್ಕೆ ಕಾರಣವಾಗಿದೆ. ಈ ಸಂಖ್ಯಾತ್ಮಕ ಬೆಳವಣಿಗೆಯೂ ಶಿಕ್ಷಣದ ಗುಣಾತ್ಮಕ ಆಯಾಮದ ಬಗ್ಗೆ ಹೆಚ್ಚು ಹೇಳುವುದಿಲ್ಲ. ಶಿಕ್ಷಣಕ್ಕೆ ವಂಚಿತರಾದ ಜನ ಉನ್ನತ ಶಿಕ್ಷಣಕ್ಕೆ ಸೇರಿದ್ದರಿಂದ ಈ ಸಂಖ್ಯಾತ್ಮಕ ಬದಲಾವಣೆಯಾಗಿದೆ. ಕಳೆದ ೨೫ ವರ್ಷಗಳ ಅವಧಿಯಲ್ಲಿ ಕೆಳಸ್ತರಕ್ಕೆ ಸೇರಿದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿದ್ದರೂ ಸಹ ಸಮಾಜದ ಸವಲತ್ತುಳ್ಳ ವರ್ಗ ಉನ್ನತ ಶಿಕ್ಷಣ ಪಡೆದವರಲ್ಲಿ ಬಹುಸಂಖ್ಯಾತವಾಗಿದೆ. ಶಿಕ್ಷಣಕ್ಕಾಗಿ ಸರಕಾರಗಳು ವಿವಿಧ ಯೋಜನೆಗಳನ್ನು ಕೆಳಸ್ತರದ ವಿದ್ಯಾರ್ಥಿಗಳಿಗಾಗಿ ಕೈಗೊಂಡಿದೆ. ಆದರೆ ಹೆಚ್ಚಳ ಮತ್ತು ಉಪಕ್ರಮಗಳು ಸಾಮಾಜಿಕ ಅಸಮಾನತೆಯನ್ನು ತೊಡೆದುಹಾಕುವಲ್ಲಿ ಸಫಲವಾಗಿಲ್ಲ. ಆದ್ದರಿಂದ ಸರಕಾರದ ಯೋಜನೆಗಳು ಎಷ್ಟರ ಮಟ್ಟಿಗೆ ಉನ್ನತ ಶಿಕ್ಷಣಕ್ಕೆ ಅನುಕೂಲಕರವಾಗಿತ್ತು ಎಂಬುದು ಚರ್ಚಾ ವಿಷಯವಾಗಿದೆ.

ಉನ್ನತ ಶಿಕ್ಷಣದ ಖಾಸಗೀಕರಣ ಮಾಡಿ, ಸರಕಾರದ ವೆಚ್ಚವನ್ನು ಕಡಿತಮಾಡಿದಲ್ಲಿ ಉನ್ನತ ಶಿಕ್ಷಣದ ಸಮಸ್ಯೆಗಳು ಬಿಗಡಾಯಿಸಲಿವೆ. ಸ್ಥಾನಗಳ ಕೊರತೆ ಕಿಕ್ಕಿರಿದು ತುಂಬಿರುವ ಉಪನ್ಯಾಸ ಕೊಠಡಿಗಳು, ಹೆಚ್ಚಿನ ಪ್ರಮಾಣದ ವಿದ್ಯಾರ್ಥಿ ಉಪನ್ಯಾಸಕರ ಅನುಪಾತ, ಗ್ರಂಥಾಲಯ ಮತ್ತು ಅಧ್ಯಯನದ ಸಾಮಗ್ರಿಗಳ ಕೊರತೆ ಉನ್ನತ ಶಿಕ್ಷಣದ ಮೇಲೆ ಕೆಟ್ಟ ಪ್ರಭಾವ ಬೀರಿದೆ. ಹೆಚ್ಚಿನ ಪ್ರಮಾಣದ ಅನುತ್ತೀರ್ಣತೆ, ಪದೇ ಪದೇ ಪರೀಕ್ಷೆ ಬರೆಯುವುದು ಮತ್ತು ಹೆಚ್ಚಿನ ಪ್ರಮಾಣದಲ್ಲಿ ಕಾಲೇಜನ್ನು ಬಿಡುವುದು (Drop outs) ಸಹ ವಿದ್ಯಾರ್ಥಿಗಳ ಸಮಸ್ಯೆಗಳಾಗಿವೆ. ಈ ಕಾರಣಗಳಿಂದಾಗಿ ಕಲಿಯುವಿಕೆಗೆ ಹೆಚ್ಚು ಅವಕಾಶಗಳಿಲ್ಲದೆ ವಿದ್ಯಾರ್ಥಿಗಳ ಹಕ್ಕುಗಳನ್ನು ಸಂರಕ್ಷಿಸಿಕೊಳ್ಳಲು ವಿಫಲರಾಗುತ್ತಿದ್ದೇವೆ..

ಈ ಸಂದರ್ಭದಲ್ಲಿ ವಿದ್ಯಾರ್ಥಿಗಳ ಸರ್ವತೋಮುಖ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಹಾಗೂ ಗುಣಮಟ್ಟ ಶಿಕ್ಷಣವನ್ನು ಪರಿಣಾಮಕಾರಿಯಾಗಿಸುವಲ್ಲಿ ಶಕ್ತರಾಗಬೇಕಾಗಿದೆ. ಈ ಸಂದರ್ಭದಲ್ಲಿ ಕಾಲೇಜು ಮಟ್ಟದಲ್ಲಿ ಪಠ್ಯಕ್ರಮದಲ್ಲಿ ಅಗತ್ಯ ಮಾರ್ಪಾಡುಗಳನ್ನು ಮಾಡಬೇಕಾಗಿದೆ. ಶಿಕ್ಷಣವು ಮನಸ್ಸು, ಹೃದಯ ಹಾಗೂ ಕೌಶಲ್ಯಗಳನ್ನು ವೃದ್ಧಿಸುವ ಮಹತ್ತರ ಶಕ್ತಿಯನ್ನು ಹೊಂದಿದೆ. ಮಾನವಿಕ, ವಿಜ್ಞಾನ, ಭಾಷೆ ಹಾಗೂ ವಾಣಿಜ್ಯ ಕ್ಷೇತ್ರಗಳಲ್ಲಾಗಿರುವ ಆಮೂಲಾಗ್ರ ಬದಲಾವಣೆಗಳು ನಮ್ಮ ಪಠ್ಯಕ್ರಮದಲ್ಲಿ ಬಿಂಬಿತವಾಗಬೇಕಾಗಿದೆ.

ಉನ್ನತ ಶಿಕ್ಷಣ ಸಮಾಜದ ಮೇಲೆ ಪರಿಣಾಮಕಾರಿಯಾದ ಪ್ರಭಾವವನ್ನು ಉಂಟುಮಾಡುತ್ತದೆ. ಇದು ಯುವ ಜನರು ಸರ್ವತೋಮುಖವಾಗಿ ಬೆಳವಣಿಗೆಯಾಗಲು ಸಹಕಾರಿಯಾಗುತ್ತದೆ. ಇಡೀ ವಿಶ್ವ ಒಂದು ಸಮಾನ ಅರ್ಥ ವ್ಯವಸ್ಥೆಗೆ ರೂಪುತಳೆದು ಕಾಲು ಶತಮಾನ ಕಳೆದಿದೆ. ವಿಶ್ವ ಆರ್ಥಿಕ ವ್ಯವಸ್ಥೆಗೆ ರಾಷ್ಟ್ರೀಯ ಆರ್ಥಿಕ ವ್ಯವಸ್ಥೆ ಅಧೀನವಾಗಿದೆ. ಇದರಿಂದ ಅಭಿವೃದ್ಧಿ ಹಾಗೂ ಪ್ರಗತಿಗಳು ಶಿಕ್ಷಣದ ಗುಣಮಟ್ಟ ಹಾಗೂ ಮಾನವ ಸಂಪನ್ಮೂಲದ ಗುಣಮಟ್ಟದೊಂದಿಗೆ ಅಂತರ ಸಂಬಂಧ ಏರ್ಪಡಿಸಿದೆ. ಕೇಂದ್ರ ಸರಕಾರದ ಹೊಸ ನೀತಿಗಳು ವಿದ್ಯಾರ್ಥಿಗಳ ಸಂಖ್ಯಾಬಲವನ್ನಾಗಲಿ ಶಿಕ್ಷಣದ ಗುಣಮಟ್ಟವನ್ನು ಎತ್ತರಿಸಲು ಸಾಧ್ಯವಿಲ್ಲ.

*(ಮುಂದುವರಿಯುವುದು)*

**ಗೌರಿತನಯ**
'ಪ್ರಣವ', ನಂ. ೩೬೦, ೧೧ನೇ 'ಬಿ' ಕ್ರಾಸ್
೧ನೇ 'ಸಿ' ಮುಖ್ಯರಸ್ತೆ, ವಿನಾಯಕ ಲೇಔಟ್
ನಾಗರಭಾವಿ, ೨ನೇ ಹಂತ, ೯ನೇ ಬ್ಲಾಕ್
ಬೆಂಗಳೂರು – ೫೬೦ ೦೭೨

**ಡಾ॥ ರಹಮತ್ ತರೀಕೆರೆ**

ನಾನು ಕಳೆದ ಎರಡು ವರ್ಷಗಳ ಕಾಲ ಕರ್ನಾಟಕದ ತತ್ವಪದ ಸಾಹಿತ್ಯವನ್ನು ಸಂಪಾದಿಸುವ ವಿದ್ವಾಂಸರ ತಂಡದಲ್ಲಿದ್ದು ಕೆಲಸ ಮಾಡ ಬೇಕಾಯಿತು. ಅದೊಂದು ಅಪೂರ್ವ ಅನುಭವ. ಈ ಅನುಭವ ಹಂಚಿಕೊಳ್ಳುವುದು, ಈ ಸಾಹಿತ್ಯದ ಸಾಂಸ್ಕೃತಿಕ ಮಹತ್ವವನ್ನು ನಿರೂಪಿಸುವುದು ಈ ಟಿಪ್ಪಣಿಯ ಉದ್ದೇಶ.

ಕರ್ನಾಟಕದ ಸಂಸ್ಕೃತಿಯನ್ನು ರೂಪಿಸಿದ ಭಕ್ತಿ / ಅಧ್ಯಾತ್ಮ / ಅನುಭಾವ ಎನ್ನಲಾಗುವ ಸಾಹಿತ್ಯದ ನಾಲ್ಕು ಧಾರೆಗಳಿವೆ. ಅವೆಂದರೆ ವಚನಸಾಹಿತ್ಯ, ದಾಸಸಾಹಿತ್ಯ, ಸೂಫಿ ಸಾಹಿತ್ಯ ಹಾಗೂ ತತ್ವಪದ ಸಾಹಿತ್ಯ. ಇವಕ್ಕೆ ಕೆಲವು ಸಮಾನವಾದ ಚಹರೆಗಳಿವೆ. ಇವು ಪಂಪ ರನ್ನರಂತೆ ಕವಿಗಳು ಬರೆದ ಓದು ಸಾಹಿತ್ಯವಲ್ಲ. ಇವಕ್ಕೆ ಬರೆಹದ ಜತೆ ಇರುವುದಕ್ಕಿಂತ ಹೆಚ್ಚಿನ ಪ್ರಸರಣ ಮೌಖಿಕ ಪರಂಪರೆಯಲ್ಲಿದೆ. ಇವು ಹಾಡಿಕೆ ರೂಪದಲ್ಲಿಯೂ ಸಮುದಾಯಗಳಿಗೆ ಸಂವಹನವಾಗುತ್ತ ಬಂದಿವೆ. ಈ ನಾಲ್ಕೂ ಧಾರೆಗಳು ಗುರು-ಶಿಷ್ಯ ಪರಂಪರೆಗೆ ಸೇರಿದವು. ರಚಿಸಿದ ವ್ಯಕ್ತಿಯ ಮತ್ತು ಅವನ್ನು ಅನುಸಂಧಾನ ಮಾಡುವ ಸಮುದಾಯದ ಆಧ್ಯಾತ್ಮಿಕ ಉನ್ನತಿಗಾಗಿ ಬಳಕೆಯಾದಂತಹವು. ಸಮುದಾಯದ ಮಡಿಲಿಗೆ ಬಿದ್ದು ಜನಪದ ಸಾಹಿತ್ಯದಂತೆ ಸಾಕಷ್ಟು ರೂಪ ಬದಲಾವಣೆ ಸಹ ಪಡೆದಂತಹವು. ಜಾತ್ರೆ, ಉರುಸು, ಪುಣ್ಯತಿಥಿ ಇತ್ಯಾದಿ ಆಚರಣಲೋಕದ ಭಾಗವಾಗಿರು ವಂತಹವು. ಸಾಂಸ್ಥಿಕ ಧರ್ಮ, ಸಂಪ್ರದಾಯವಾದಿ ಸಮಾಜವನ್ನು ವಿಮರ್ಶೆ ಮಾಡುವಂತಹವು. ಎಂತಲೇ ಇವನ್ನು 'ಜನತೆಯ ಸಾಹಿತ್ಯ' ಎಂದು ಕರೆಯಬಹುದು.

ಈ ನಾಲ್ಕರಲ್ಲಿ ಮೊದಲೆರಡು ಧಾರೆಗಳ ಸಂಪಾದನೆಯ ಕೆಲಸ ೧೯ನೇ ಶತಮಾನದ ಕೊನೆಯ ಘಟ್ಟದಿಂದಲೇ ಆರಂಭವಾಯಿತು. ಮುಂದೆ ಈ ಎರಡು ಧಾರೆಗಳಿಗೆ ನಿರ್ದಿಷ್ಟ ಸಮುದಾಯದ ಧಾರ್ಮಿಕ ಸಾಹಿತ್ಯ ಎಂಬ ಚೌಕಟ್ಟು ದೊರಕಿದ ಬಳಿಕ, ಅಕ್ಷರಲೋಕದ ಚರ್ಚೆಗಳಲ್ಲಿ ದೊಡ್ಡ ಪ್ರಸರಣೆ ಸಿಕ್ಕಿತು. ಇವು ಪಠ್ಯಪುಸ್ತಕಗಳಲ್ಲಿ ಸೇರಿ ಶಿಕ್ಷಣಕ್ರಮದ ಭಾಗವೂ ಆದವು. ಇವುಗಳ ಮೇಲೆ ಅಧ್ಯಯನಗಳು ನಡೆದವು. ಇವು ಬೇರೆಬೇರೆ ಬಗೆಯಲ್ಲಿ ಸಂಪಾದನೆ ಗೊಂಡು ಓದುಗರಿಗೆ ಲಭ್ಯವಾಗುತ್ತ ಹೋದವು. ಕರ್ನಾಟಕ ಸಂಗೀತ ಪದ್ಧತಿಯಲ್ಲಿ ದಾಸಸಾಹಿತ್ಯವೂ ಹಿಂದೂಸ್ತಾನಿಯಲ್ಲಿ ವಚನಸಾಹಿತ್ಯವೂ ನಾದರೂಪದಲ್ಲಿ ಮುಟ್ಟತೊಡಗಿತು.

ಆದರೆ ಕೊನೆಯ ಎರಡು ಧಾರೆಗಳಾದ ತತ್ವಪದ ಮತ್ತು ಸೂಫಿ ಸಾಹಿತ್ಯಗಳು ಸಮುದಾಯಗಳ ನೆಲೆಯಲ್ಲಿ ಬೇರುಬಿಟ್ಟಿದ್ದರೂ, ತಮ್ಮದೇ ಹಾಡು ಪರಂಪರೆಯನ್ನು ರೂಢಿಸಿಕೊಂಡಿದ್ದರೂ, ಅಕೆಡೆಮಿಕ್ ಲೋಕದಲ್ಲಿ ಚರ್ಚೆಗೊಳ್ಳುವ ಅವಕಾಶವನ್ನು ಅಷ್ಟಾಗಿ ಪಡೆದುಕೊಳ್ಳಲಿಲ್ಲ. ಬಹುತೇಕ ಸೂಫಿಗಳು ಬಹುಮಟ್ಟಿಗೆ ದಖನಿ ಉರ್ದುವಿನಲ್ಲಿ ಸಾಹಿತ್ಯ ರಚನೆ ಮಾಡಿದ್ದರಿಂದಲೂ, ಅದು ಕನ್ನಡಕ್ಕೆ ಅನುವಾದ ಗೊಂಡು ಲಭ್ಯವಾಗದೆ ಹೋದುದರಿಂದಲೂ, ಅದಕ್ಕೆ ಕರ್ನಾಟಕ ಸಂಸ್ಕೃತಿಯ ಅಕ್ಷರಸ್ಥ ಶೈಕ್ಷಣಿಕ ವಲಯದಲ್ಲಿ ಸೇರುವ ಅವಕಾಶ ಕಡಿಮೆ ಸಿಕ್ಕಿತು. ಇದನ್ನು ಅರ್ಥಮಾಡಿಕೊಳ್ಳಬಹುದು. ಆದರೆ ತತ್ವಪದ ಸಾಹಿತ್ಯದ ಪ್ರಸರಣೆಯ ವಿಷಯದಲ್ಲಿ ಈ ಕಾರಣ ಕೊಡುವಂತಿಲ್ಲ. ಕಾರಣ, ಕರ್ನಾಟಕದಲ್ಲಿ ೨೦೦ ಜನಕ್ಕೂ ಹೆಚ್ಚು ತತ್ವಪದಕಾರರು ೧೮-೧೯-೨೦ನೇ ಶತಮಾನಗಳಲ್ಲಿ ಆಗಿಹೋಗಿದ್ದಾರೆ. ತತ್ವಪದ ಗಳನ್ನು ಹಾಡುವ ತಂಡಗಳು ಮತ್ತು ಗಾಯಕರು ಸಹ ಸಾವಿರಾರು. ಈ ಸಾಹಿತ್ಯದ ಭಾಗವಾಗಿ ಸಾವಿರಾರು ಜನ ಗುರುದೀಕ್ಷೆ ತೆಗೆದುಕೊಂಡಿರುವರು. ಇಂತಹ ಜೀವಂತ ಪರಂಪರೆಯ ಸಾಹಿತ್ಯದ ಸಂಪಾದನೆ ಮತ್ತು ಪ್ರಕಟಣೆಯು ಶರಣ ಮತ್ತು ದಾಸಸಾಹಿತ್ಯದ ಪ್ರಮಾಣದಲ್ಲಿ ನಡೆಯದಿರಲು

# ತತ್ವಪದ ಸಂಪಾದನೆಯ ಅನುಭವಗಳು

ಕೆಲವು ಹಾಡಿಕೆಯ ಪ್ರಸಂಗಗಳು ಯಾಕೊ ಮನಸ್ಸಿನಲ್ಲಿ ಕಾಡುವಂತೆ ಉಳಿದಿವೆ. ಅವುಗಳಲ್ಲಿ ಬಿಜಾಪುರದಲ್ಲಿ ಕೇಳಿದ ಜಮಖಂಡಿ ಕಡೆಯ ಗಾಯಕಿಯರದು. ವಯಸ್ಸಾಗಿದ್ದ ಅವರು ಶಿಶುನಾಳ ಶರೀಫರ 'ನನ್ನೊಳಗೆ ನಾ ತಿಳಕೊಂಡೆ ನನಗೆ ಬೇಕಾದ್ದ ಗಂಡನ ಮಾಡಿಕೊಂಡೆ' ಎಂದು ಹಾಡಿದರು. ಪಲ್ಲವಿಯ ಕೊನೆಯ ಸಾಲನ್ನು ಹಾಡುವಾಗ ಗಾಳಿಯಲ್ಲಿ ಕೈಯನ್ನು ಎತ್ತಿಚೆಲ್ಲುತ್ತ ಮಾಡುತ್ತಿದ್ದ ಅಂಗಭಂಗಿ, ನಿಜಜೀವನದಲ್ಲಿಯೂ ತಮ್ಮಿಚ್ಛೆಯಂತೆ ಬದುಕಿದ ಧೀಮಂತಿಕೆಯನ್ನೇ ಪ್ರಕಟಿಸುತ್ತಿದ್ದಾರೆ ಅನಿಸುತ್ತಿತ್ತು. ಈ ಹಾಡಿಕೆಯು ಗಾಯಕರು ಪ್ರೇಕ್ಷಕರಿಗಾಗಿ ಮಾತ್ರ ಹಾಡುತ್ತಿಲ್ಲ, ತಮಗೂ ಹಾಡಿಕೊಳ್ಳುತ್ತಿದ್ದಾರೆ ಎಂದು ತಿಳಿಯಿತು. ತತ್ವಪದ ಸಾಹಿತ್ಯದ ಮುಖ್ಯ ಉದ್ದೇಶವೇ ತನ್ನೊಳಗಿನ ಚೈತನ್ಯವನ್ನು ಕಂಡುಕೊಳ್ಳುವುದು.



ಒಬ್ಬ ಸಾಧಕ

ಅನೇಕ ಸಾಂಸ್ಕೃತಿಕ ರಾಜಕಾರಣದ ಕಾರಣಗಳಿವೆ. ಅಕ್ಷರಲೋಕದ ಚರ್ಚೆಗೆ ನಿಜಗುಣ ಶಿವಯೋಗಿ, ಶಿಶುನಾಳ ಶರೀಫ ಮುಂತಾದ ಕೆಲವರು ಬಂದರು. ಆದರೆ ನೂರಾರು ತತ್ವಪದಕಾರರು ಅಜ್ಞಾತರಾಗಿಯೇ ಉಳಿದರು. ಕೆಲವು ತತ್ವಪದಕಾರರನ್ನು ಬಿಟ್ಟರೆ ಬಹುತೇಕರ ಸಾಹಿತ್ಯ ಬಿಡಿಬಿಡಿಯಾಗಿ ಸಂಪಾದನೆಗೊಂಡು ಪ್ರಕಟವಾಗಿತ್ತು. ಆದರೆ ಒಟ್ಟಾಗಿ ಪ್ರಕಟಗೊಂಡು ಓದುಗರಿಗೆ ಲಭ್ಯವಿರಲಿಲ್ಲ. ಅದನ್ನು ಒಟ್ಟಾಗಿ ದೊರಕಿಸುವುದು ನಮ್ಮ ಉದ್ದೇಶವಾಗಿತ್ತು.

ವಿಶೇಷವೆಂದರೆ, ಈ ಸಾಹಿತ್ಯ ಸಂಪುಟವನ್ನು ಸಿದ್ಧಪಡಿಸುವುದಕ್ಕೆ ನಾವು ಕೇವಲ ಹಸ್ತಪ್ರತಿಗಳ ಮೊರೆ ಹೋಗಲಿಲ್ಲ. ಮುದ್ರಣರೂಪಕ್ಕೆ ಬಾರದೆ ಮೌಖಿಕ ನೆಲೆಯಲ್ಲಿಯೇ ಉಳಿದಿರುವ ಹಾಡುಗಳನ್ನು ಹುಡುಕುವ ಕೆಲಸ ಮಾಡಿದೆವು. ಈ ಸಾಹಿತ್ಯ ಕೇವಲ ಶಬ್ದರೂಪಿ ಮತ್ತು ನಾದರೂಪಿ ಅಲ್ಲ. ಇದಕ್ಕೆ ಆಚರಣ ಲೋಕದ ಜತೆ ಸಂಬಂಧವಿದೆ. ಹೀಗಾಗಿ ತತ್ವಪದಕಾರರ ಜಾತ್ರೆಗಳಿಗೂ ಅವರ ಸಮಾಧಿ ಸ್ಥಳಗಳಿಗೂ ಭೇಟಿ ಕೊಡಬೇಕಾಯಿತು. ಅಲ್ಲಿನ ಗಾಯಕರ ಹಾಗೂ ಕೇಳುಗರ ಜತೆ ಚರ್ಚೆ ಮಾಡಬೇಕಾಯಿತು. ಈ ಹಾಡಿಕೆಗೆ ಬಳಸುವ ಹಲವಾರು ವಾದ್ಯಗಳ ನಾದವನ್ನು ಆಲಿಸಬೇಕಾಯಿತು. ಸಾಮಾನ್ಯವಾಗಿ ತತ್ವಪದ ಸಾಹಿತ್ಯ ಅಭಿವ್ಯಕ್ತಿ ಯಾಗುವುದೇ ರಾತ್ರಿಯಲ್ಲಿ. ಊಟವಾದ ಮೇಲೆ ಊರಹೊರಗಿನ ಪಾಳುಗುಡಿಯಲ್ಲೊ ಸಂತನ ಸಮಾಧಿಯ ಎದುರಲ್ಲೊ ದುಂಡಗೆ ಕುಳಿತು ಹಾಡುವರು. ನಿದ್ದೆಗೆಡದೆ ಈ ಹಾಡುಗಳನ್ನು ಕೇಳುವುದಕ್ಕೆ ಸಾಧ್ಯವಿಲ್ಲ. ಅನೇಕ ನಾದಮಯ ರಾತ್ರಿಗಳನ್ನು ಹೀಗಾಗಿ ಅಲೆಯುತ್ತ ಕಳೆಯಬೇಕಾಯಿತು. ನಮ್ಮ ಪಾಲಿಗೆ ಅಮಾವಾಸ್ಯೆ ಮತ್ತು ಹುಣ್ಣಿಮೆಗಳು ಪವಿತ್ರವಾಗಿದ್ದವು. ಯಾಕೆಂದರೆ ಆ ದಿನಗಳಲ್ಲಿ ತತ್ವಪದ ಹಾಡಿಕೆ ಜಾಗೃತಗೊಳ್ಳುತ್ತದೆ. ಕರ್ನಾಟಕದಲ್ಲಿ ನಮ್ಮ ಗಮನಕ್ಕೆ ಬಾರದ, ಆದರೆ ಜನತೆಯ ಅರಿವಿನಲ್ಲಿರುವ ಸಾವಿರಾರು ಗಾಯಕರು ಇದ್ದಾರೆ; ನೂರಾರು ತಂಡಗಳು ಎಂದು ಗೊತ್ತಾಗುತ್ತ ಹೋಯಿತು.

ಕೆರಗೋಡಿನ ಪುಟ್ಟಮ್ಮ, ಲಕ್ಷ್ಮಮ್ಮ, ವಸಂತ, ಶಿವಮ್ಮ, ಸುಲೇನೂರಿನ ಕದಿರಮ್ಮ, ಗಂಗನಘಟ್ಟದ ಲಿಂಗರಾಜಪ್ಪ, ಅಲ್ಲಿಪುರದ ಹಂಪಕ್ಕ, ಸುಶೀಲಮ್ಮ, ಏಕಾಂತಮ್ಮ, ಶಾಂತಮ್ಮ, ಚಿಕ್ಕೇನಹಳ್ಳಿಯ ನಿಂಗಸ್ವಾಮಿ, ಬಲ್ಲಟಗುಡ್ಡದ ಲಕ್ಷಮ್ಮ, ಮಂಗಳಮ್ಮ, ತಂಬೂರಿ ಜವರಯ್ಯ ಮತ್ತು ತಂಬೂರಿ ರಾಜಮ್ಮ, ಹೊಸಪೇಟೆಯ ದುಷ್ಯಂತ, ಕೌಜಲಗಿಯ ಉದ್ದಪ್ಪನವರ, ಕುಳಲಿಯ ರಾಮಚಂದ್ರ ದಾಸನವರ ಪುಣಜೂರು, ಬೋವಿಹಟ್ಟಿಯ ಚಂದ್ರಪ್ಪ, ಕಾನಾಪುರದ ಉಪ್ಪಾರ ವೆಂಕಪ್ಪ, ಕಡಕೋಳದ ಬಂದೇನವಾಜ್ ಗವಾಯಿ, ಕಣಮೇಶ್ವರದ ಚಂದ್ರಾಮ ದೊಡಮನಿ, ಸಿಂದಗಿಯ ಕುಂಟಪ್ಪ ಬಳೂತಿ, ಮುನಿಸ್ವಾಮಿ ಕೋಲಾರ, ಬೆಜ್ಜಿಹಳ್ಳಿಯ ಪುಟ್ಟಣ್ಣಯ್ಯಸ್ವಾಮಿ, ನತಿಗೇನಹಟ್ಟಿಯ ಚಿಕ್ಕಬೋರಯ್ಯ, ಖೈನೂರಿನ ಭೀಮಣ್ಣ ಅಯ್ಯಾಳ್, ಪಿಚ್ಚಳ್ಳಿಯ ಶ್ರೀನಿವಾಸ, ಗೌಡಗಾಂವದ ರಾಮಲಿಂಗಯ್ಯ, ಹನೀಫಾ ಶೇಕ್,



ತತ್ವಪದ ಸಾಧಕಿ ಸುಲೇನೂರು ಕದಿರವ್ವ

ಭೈರಾಮಡಗಿಯ ಭೀಮಾಶಂಕರ, ಹಡಲಗೇರಿಯ ಹಣಮಕ್ಕ ಮತ್ತು ಹುಲಿಗೆಮ್ಮ, ಗವಿಮಠದ ಬಸಪ್ಪ ಕೋರನಹಳ್ಳಿ ಮತ್ತು ಮಹಲಿಂಗಪ್ಪ ಯಲಬುರ್ಗದ ಮಾರೆಪ್ಪ ದಾಸರ–ಅದೊಂದು ದೊಡ್ಡ ಲೋಕ. ನಾವು ಎದುರುಗೊಳ್ಳದ ಇನ್ನೂ ನೂರಾರು ಹಾಡುಗಾರರಿರುವರು. ಒಂದೇ ಹಾಡು ಬೇರೆಬೇರೆ ಪ್ರದೇಶದಲ್ಲಿ ಹಾಡಿಕೆಗೊಳ್ಳುವ ವಿಧಾನವೂ ನಮಗೆ ತಿಳಿಯುತ್ತ ಹೋಯಿತು.

ಕೆಲವು ಹಾಡಿಕೆಯ ಪ್ರಸಂಗಗಳು ಯಾಕೊ ಮನಸ್ಸಿನಲ್ಲಿ ಕಾಡುವಂತೆ ಉಳಿದಿವೆ. ಅವುಗಳಲ್ಲಿ ಬಿಜಾಪುರದಲ್ಲಿ ಕೇಳಿದ ಜಮಖಂಡಿ ಕಡೆಯ ಗಾಯಕಿಯರದು. ವಯಸ್ಸಾಗಿದ್ದ ಅವರು ಶಿಶುನಾಳ ಶರೀಫರ 'ನನ್ನೊಳಗೆ ನಾ ತಿಳಕೊಂಡೆ ನನಗೆ ಬೇಕಾದ್ದ ಗಂಡನ ಮಾಡಿಕೊಂಡೆ' ಎಂದು ಹಾಡಿದರು. ಪಲ್ಲವಿಯ ಕೊನೆಯ ಸಾಲನ್ನು ಹಾಡುವಾಗ ಗಾಳಿಯಲ್ಲಿ ಕೈಯನ್ನು ಎತ್ತಿಚೆಲ್ಲುತ್ತ ಮಾಡುತ್ತಿದ್ದ ಅಂಗಭಂಗಿ, ನಿಜಜೀವನದಲ್ಲಿಯೂ ತಮ್ಮಿಚ್ಛೆಯಂತೆ ಬದುಕಿದ ಧೀಮಂತಿಕೆಯನ್ನೇ ಪ್ರಕಟಿಸುತ್ತಿದ್ದಾರೆ ಅನಿಸುತ್ತಿತ್ತು. ಈ ಹಾಡಿಕೆಯು ಗಾಯಕರು ಪ್ರೇಕ್ಷಕರಿಗಾಗಿ ಮಾತ್ರ ಹಾಡುತ್ತಿಲ್ಲ, ತಮಗೂ ಹಾಡಿಕೊಳ್ಳುತ್ತಿದ್ದಾರೆ ಎಂದು ತಿಳಿಯಿತು. ತತ್ವಪದ ಸಾಹಿತ್ಯದ ಮುಖ್ಯ ಉದ್ದೇಶವೇ ತನ್ನೊಳಗಿನ ಚೈತನ್ಯವನ್ನು ಕಂಡುಕೊಳ್ಳುವುದು. ಹೀಗಾಗಿ ಅದಕ್ಕೆ ಸಾರ್ವಜನಿಕ ಆಯಾಮ ಇರುವಂತೆ ಸ್ವಸಂಧಾನದ ಮುಖವೂ ಇದೆ. ಕೆರೆಗೋಡಿನ ಪುಟ್ಟಮ್ಮ ತಂಡದವರು, ನಡುರಾತ್ರಿ ಕುಣಿಗಲ್ ತಾಲೂಕಿನ ಹೊನ್ನಮಾಚನಹಳ್ಳಿ ಬಳಿಯ ಕಾಡಿನಲ್ಲಿರುವ ಸಂತನ ಗದ್ದುಗೆಯೆದುರು ಹಾಡುವಾಗ, ಈ ಭಾಗದ ಎಲ್ಲ ಕೋಗಿಲೆಗಳು ಇವರಿಗೆ ತಮ್ಮ ಕಂಠವನ್ನು ಕೊಟ್ಟಿವೆಯೇನೊ ಅನಿಸಿತು. ಮುಧೋಳ ಸೀಮೆಯ ದಲಿತ ಸಮುದಾಯದ ಚಿಕ್ಕಹುಡುಗಿಯರಾದ ಹಡಲಗೇರಿಯ ಹಣಮಕ್ಕ ಮತ್ತು ಹುಲಿಗೆಮ್ಮ, ಪಾರಿಜಾತದ ಕಾಲುಪೇಟಿ ಮತ್ತು ಚಳ್ಳಂ ತಾಳದ ಹಿನ್ನೆಲೆಯಲ್ಲಿ ಎಳೆಯ ತೀಕ್ಷ್ಣ ಕಂಠದಿಂದ ಹಾಡುವಾಗ, ತತ್ವಪದಗಳ ಇನ್ನೊಂದು ಆಯಾಮವೇ ತೆರೆದುಕೊಳ್ಳುತ್ತಿತ್ತು. ಅದು ರಂಗಭೂಮಿಯೂ ಆಗಿರುವುದು ಅನುಭವಕ್ಕೆ ಬರುತ್ತಿತ್ತು. ತತ್ವಪದ ಲೋಕದಲ್ಲಿ ದಲಿತರು ದೊಡ್ಡ ಪ್ರಮಾಣದಲ್ಲಿದ್ದಾರೆ. ದಲಿತ ಸಂಸ್ಕೃತಿಯೊಳಗೆ ಹೇಗೆ ಆರೂಢ ಪರಂಪರೆ ಕಸಿಗೊಂಡಿದೆ ಎಂಬುದನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಬೇಕಿದೆ. ಆಧುನಿಕ ವೈಚಾರಿಕ ಸಂಘಟನೆಗಳು ಅವರ ವಿಮೋಚನೆಗೆ ತೊಡಗುವ ಮೊದಲು, ನಮ್ಮ ದೇಶೀ ಪರಂಪರೆಯಲ್ಲೇ ಇರುವ ಯಾವೆಲ್ಲ ತತ್ವಗಳು, ಅವರನ್ನು ಅಸ್ಪೃಶ್ಯತೆಯ ಅಪಮಾನದಿಂದ ಪಾರುಮಾಡಿ ಸ್ವಾಭಿಮಾನ ತುಂಬಿದವು ಎಂಬುದನ್ನು ಶೋಧಿಸಬೇಕಿದೆ.

ಕರ್ನಾಟಕದ ತತ್ವಪದಕಾರರಲ್ಲಿ ಶಿಶುನಾಳ ಶರೀಫ, ನಿಜಗುಣ ಶಿವಯೋಗಿ, ಕಡಕೋಳ ಮಡಿವಾಳಪ್ಪ, ಕೈವಾರ ನಾರೇಯಣಪ್ಪ, ಬಾಲಲೀಲಾ ಮಹಾಂತ, ಶಿಲವೇರಿ ಶಿವಪ್ಪ, ಹೊಳಗುಂದಿ ಸಾಹಿಬಣ್ಣ, ಚೆನ್ನೂರ ಜಲಾಲಸಾಬ, ಸಾಲಗುಂದಿ ಗುರುಪೀರಾ ಖಾದ್ರಿ, ಶಂಕರಾನಂದ ಶಿವಯೋಗಿ, ಖೈನೂರು ಕೃಷ್ಣಪ್ಪ, ನಿಡುವಂಚಿ ಭದ್ರೇಶ್ವರ ಮುಂತಾದ ೫೦ಕ್ಕೂ ಹೆಚ್ಚು ತತ್ವಪದಕಾರರಿದ್ದಾರೆ. ಮಹಿಳಾ ತತ್ವಪದಕಾರರೂ ಇದ್ದಾರೆ. ಮುಸ್ಲಿಂ ಸಮುದಾಯದಿಂದ ಬಂದ ತತ್ವಪದಕಾರರಿದ್ದಾರೆ. ಮುಸ್ಲಿಮರು ಎಂದರೆ ಸೂಫಿಗಳಲ್ಲ. ಆರೂಢ ಪರಂಪರೆಯವರೇ. ಶಿಶುನಾಳ ಹಾಗೆ ಶಾಕ್ತಹಿನ್ನೆಲೆಯಿಂದ ಬಂದ ಆರೂಢ. ಸೂಫಿ ಹಿನ್ನೆಲೆಯಿಂದ ಬಂದ ತತ್ವಪದಕಾರನೆಂದರೆ ಗುರುಪೀರಾ ಖಾದ್ರಿ. ಗುರುಪೀರಾ ಕನ್ನಡದಲ್ಲಿ ಹಾಡುಬರೆದ ಕೆಲವೇ ಸೂಫಿಗಳಲ್ಲಿ ಒಬ್ಬ. ಬಸವಣ್ಣ, ಬಗ್ದಾದಿನ ಅನಲ್ ಹಖ್ ದಾರ್ಶನಿಕ ಮನ್ಸೂರ್ ಅಲ್ ಹಲ್ಲಾಜ್ ಹಾಗೂ ಆರೂಢಪರಂಪರೆಯನ್ನು ಅದ್ಭುತವಾಗಿ ಸಂಗಮಿಸುವ ಸೂಫಿ ಕವಿಯೀತ.

ವಿಶೇಷವೆಂದರೆ, ಕರ್ನಾಟಕದಲ್ಲಿ ಅತಿಹೆಚ್ಚು ತತ್ವಪದಕಾರರು ಸಿಗುವುದು ಹೈದರಾಬಾದ್ ಕರ್ನಾಟಕದಲ್ಲಿ, ಅದರಲ್ಲೂ ತುಂಗಭದ್ರೆ, ಕೃಷ್ಣಾ ಹೊಳೆಗಳ ನಡುವಣ ದೋಆಬ್ ಸೀಮೆಯಲ್ಲಿ. ಅದು ಬಿಟ್ಟರೆ ಕೋಲಾರ ಸೀಮೆಯಲ್ಲಿ. ಬಳಿಕ ಚಿತ್ರದುರ್ಗ ತುಮಕೂರು ಭಾಗ. ನಂತರ ಹಾಸನ, ಮಂಡ್ಯ, ಮೈಸೂರು. ಆದರೆ ಕರಾವಳಿ ಮತ್ತು ಪಶ್ಚಿಮಘಟ್ಟಗಳಲ್ಲಿ ತತ್ವಪದಕಾರರು ಜಾಲಾಡಿದರೂ ಕಾಣಲಿಲ್ಲ. ಇದು ತತ್ವಪದಗಳಿಗೂ ಬಯಲುಸೀಮೆ ಮತ್ತು ಬಿಸಿಲಿಗೂ ಸಂಬಂಧವಿದೆ ಎಂದು ಸೂಚಿಸುತ್ತದೆ. ಆದರೆ ಭೌಗೋಳಿಕತೆಗೂ ಚಾರಿತ್ರಿಕ ಹಿನ್ನೆಲೆಗೂ ತತ್ವಪದಗಳು ಚಾಲ್ತಿಯಿರುವುದಕ್ಕೂ ಇರುವ ಸಂಬಂಧ ಯಾವುದು? ಈ ಸಾಂಸ್ಕೃತಿಕ ಗೂಢವನ್ನು ಬಿಡಿಸಬೇಕಿದೆ. ಇಂತಹ ಇನ್ನೂ ಅನೇಕ ಪ್ರಶ್ನೆಗಳನ್ನು ಎತ್ತಿ ಚರ್ಚಿಸುವ ಕೆಲಸ ಬಾಕಿ ಇದೆ. ಈ ಕೆಲಸಕ್ಕೆ ಈಗ ಪ್ರಕಟವಾಗುತ್ತಿರುವ ಸಂಪುಟಗಳು ಪ್ರೇರಣೆ ಕೊಡಬಹುದು.

ಈ ಸಂಪುಟಗಳು ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತ ನಮ್ಮ ಗ್ರಹಿಕೆಯನ್ನು ಒಡೆಯಬಹುದು ಮತ್ತು ಮರುರಚನೆ ಮಾಡಲು ಒತ್ತಾಯಿಸಬಹುದು. ಕನ್ನಡ ಸಾಹಿತ್ಯದ ಪರಿಕಲ್ಪನೆ ಬಹುರೂಪಿಯಾದುದು. ಅದನ್ನು ನಾವು ಏಕರೂಪಿಯಾಗಿ ಗ್ರಹಿಸುತ್ತ ಬಂದಿದ್ದೇವೆ. ಇದಕ್ಕೆ ಕಾರಣ, ಅಕ್ಷರದ ಮೂಲಕ ಅಭಿವ್ಯಕ್ತವಾದುದೇ ಸಾಹಿತ್ಯವೆಂಬ ನಮ್ಮ ಸೀಮಿತ ಗ್ರಹಿಕೆ. ಹೀಗಾಗಿಯೇ ಸಾಹಿತ್ಯ ಚರಿತ್ರೆಕಾರರು, ತಾಳೆಗರಿಯ ಗ್ರಂಥಗಳು ಸೃಷ್ಟಿಯಾಗದ ೧೮–೧೯ನೇ ಶತಮಾನವನ್ನು ಕತ್ತಲೆಯ ಯುಗ ಎಂಬಂತೆ ಗ್ರಹಿಸಿದರು. ಆದರೆ ಆ ಕಾಲಘಟ್ಟದಲ್ಲಿ ನೂರಾರು ಜನಪದ ಕವಿಗಳು, ತತ್ವಪದಕಾರರು ಹಾಡು ಕಟ್ಟುತ್ತಿದ್ದರು. ಸಾವಿರಾರು ಜನ ಹಾಡುತ್ತಿದ್ದರು. ಲಕ್ಷಾಂತರ ಜನ ಕೇಳುತ್ತಿದ್ದರು. ಬಹಳ ಸಲ ಹಾಡುವವರೂ ಹಾಡುಕಟ್ಟುವವರೂ ಒಬ್ಬರೇ ಆಗಿದ್ದರು. ಇದನ್ನು ನಮ್ಮ ಮೊದಲ ಘಟ್ಟದ ವಿದ್ವಾಂಸರು ಗಂಭೀರವಾಗಿ ಪರಿಗಣಿಸಲಿಲ್ಲ. ಇದೊಂದು ಬಗೆಯಲ್ಲಿ ಅಮ್ನೀಸಿಯಾ. ಸಾಂಸ್ಕೃತಿಕ ಮರೆವು. ಈ ಮರೆವನ್ನು ೨೦ನೇ ಶತಮಾನದ ಮೊದಲ ಘಟ್ಟದಲ್ಲಿ ಶುರುವಾದ ಜನಪದ ಕವಿಗಳ ಹಾಗೂ ತತ್ವಪದಕಾರರ ಸಾಹಿತ್ಯದ ಪ್ರಕಟಣೆ ತುಸುತುಸುವೇ ಸರಿಸುತ್ತ ಬಂದಿತು. ಈಗ ಈ ಮರೆವನ್ನು ಮತ್ತಷ್ಟು ತೊಲಗಿಸುವಂತೆ ಈ ಸಂಪುಟಗಳು ಪ್ರೇರಿಸಲಿವೆ.



ಮೌಖಿಕವಾಗಿದ್ದ ಸಾಹಿತ್ಯ ಮುದ್ರಿತರೂಪಕ್ಕೆ ಬರುವಾಗ, ತನ್ನ ನಾದಮಯತೆಯನ್ನು ಹಾಡಿಕೆಯ ಹೊತ್ತಲ್ಲಿರುವ ಆಚರಣ ಲೋಕದ ಕೋಲಾಹಲಗಳನ್ನು ಕಳೆದುಕೊಳ್ಳಬಹುದು. ಆದರೆ ಓದಿನ ಮೂಲಕವೇ ತಮ್ಮ ತಿಳಿವನ್ನು ಕಟ್ಟಿಕೊಳ್ಳುವ ಲೋಕಕ್ಕೆ ಈ ಅಕ್ಷರರೂಪಿ ಮೌಖಿಕ ಸಾಹಿತ್ಯ ಅನಿವಾರ್ಯ. ಆದರೆ ತತ್ವಪದದ ಓದು, ಅದರ ಮೌಖಿಕ ಲೋಕಗಳನ್ನು ಹುಡುಕಿಕೊಂಡು ಹೋಗಲು ಪರೋಕ್ಷವಾಗಿ ಪ್ರೇರಿಸುತ್ತದೆ ಎನ್ನುವುದನ್ನು ಸಹ ಮರೆಯುವಂತಿಲ್ಲ.

ಹಿರಿಯ ವಿದ್ವಾಂಸರಾದ ಕೆ. ಎಂ. ಮರುಳಸಿದ್ದಪ್ಪನವರ ನಾಯಕತ್ವದಲ್ಲಿ, ದಾರ್ಶನಿಕ ಪಂಥಗಳ ಮೇಲೆ ವಿಶಿಷ್ಟವಾದ ವಿದ್ವತ್ತುಳ್ಳ ನಟರಾಜ್ ಬೂದಾಳು ಅವರ ಪ್ರಧಾನ ಸಂಪಾದಕತ್ವದಲ್ಲಿ ಈ ಸಂಪುಟಗಳು ಸಿದ್ಧಗೊಂಡಿವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಭಾಗವಾಗಿರುವ ರಾಷ್ಟ್ರಕವಿ ಕನಕದಾಸ ಸಂಶೋಧನ ಸಂಸ್ಥೆಯಿಂದ ಸಿದ್ಧವಾಗಿರುವ ೩೨ ತತ್ವಪದ ಸಂಪುಟಗಳು ಜುಲೈ ೧೧ರಂದು ಬಿಡುಗಡೆಗೊಂಡು ಓದುಗರಿಗೆ ಲಭ್ಯವಾಗಲಿವೆ. ಇವು ಯಾವೆಲ್ಲ ಬಗೆಯ ಚರ್ಚೆಗಳನ್ನು ಎಬ್ಬಿಸಲಿವೆಯೊ, ಕಾದು ನೋಡಬೇಕು.

**ಡಾ॥ ರಹಮತ್ ತರೀಕೆರೆ**
'ಸೂಫಿ', ಎಂ. ಪಿ. ಪ್ರಕಾಶ ನಗರ, ಹೊಸಪೇಟೆ
ಬಳ್ಳಾರಿ ಜಿಲ್ಲೆ – ೫೮೩ ೨೦೧

# ಕಿತ್ತಳೆಯ 'ಅಚ್ಛೇ ದಿನ್'



ಕಾವ್ಯಲೋಕ

**ನ**ನ್ನ ಪ್ರೀತಿಯ ದೇಶವಾಸಿಗಳೇ
ಕೇಳಿ : ಈ ಕ್ಷಣದಿಂದ –

ನಿಮ್ಮಿಚ್ಛೆಯಂತೆ
ಸುಲಿಯುವಂತಿಲ್ಲ ಕಿತ್ತಳೆಹಣ್ಣನ್ನು !
ಅದಕ್ಕೂ ವಿಧಿಸಲಾಗುವುದು
ಹೊಸ ಕಾನೂನು !

ಸಿಪ್ಪೆ ಕೀಳಲು ಉಗುರು ಬಳಸಿದರೆ–
ಕೈಗೆ ಬೇಡಿ ! ಎಚ್ಚರ !
ಚೂರಿ ಗೀರಿಯಿಂದ
ಗಾಯಗೊಳಿಸಿದರಂತೂ
ಹರಿಸಬೇಕಾದೀತು ನೆತ್ತರ !

ಸುಲಿಯಲೇ ಬೇಕಾದ್ದಲ್ಲಿ ಕಿತ್ತಳೆಯನ್ನು –

ಭಕ್ತಿಯಿಂದ ಮಂತ್ರವನುಚ್ಚರಿಸಿ
ಮಡಿವಂತ ಬೆರಳುಗಳಿಂದ
ಮೆಲ್ಲನೆ ಸವರಿ...
ಆಮೇಲೆ ನೋಡಿ –
ದಳದಳದಂತೆ ಸಿಪ್ಪೆ ಬಿರಿದು
ಕಮಲದಂತೆಯೇ ಹಣ್ಣು
ಅರಳುವ ಪರಿ !
ದೈವವಿತ್ತ ಬಣ್ಣವೀ ಕಿತ್ತಳೆಗೆ !

ಜಗಿಯಲು ನಿಷೇಧಿಸಿದೆ ಹಣ್ಣೆಸಳನ್ನು
ಚೀಪಿಯೇ ಹೀರಬೇಕು ರಸ !
ಸಿಪ್ಪೆ, ಬೀಜವನ್ನು ಎಲ್ಲೆಂದರಲ್ಲಿ
ಬಿಸಾಡಬಾರದು
ಕರೆಯಬಾರದದನ್ನು– 'ಕಸ' !
ಪರಿಗಣಿಸಬೇಕು ? 'ಪವಿತ್ರ ಶೇಷ' !

ಅವನ್ನು
ಬೆಳದಿಂಗಳಲ್ಲಿ ಒಣಗಿಸಿ
ಕುಟ್ಟಿ , ಹುಡಿ ಮಾಡಿ
ಗೋಮೂತ್ರದೊಂದಿಗೆ ಇಷ್ಟಿಷ್ಟೇ ಸೇವಿಸಿದರೆ
ಹೊಟ್ಟೆ ನಿರ್ಮಲ !
ಶ್ರದ್ಧಾಫಲವಿದು ಕಿತ್ತಳೆ !

ಸಪ್ಪೆಯಿರಲಿ, ಹುಳಿಯಿರಲಿ
ಸಿಹಿಯೆಂದೇ ಹೊಗಳಬೇಕು ಸದಾಕಾಲ
ರುಚಿಯನ್ನು ಟೀಕಿಸಲು
ಯಾರಿಗೂ ಇಲ್ಲ ಅಧಿಕಾರ !

ಹಣ್ಣುಗಳ ಹಕ್ಕಿನ ರಕ್ಷಣೆಗೆಂದು
ಬೀದಿಗೆ ಬಿಡಲಾಗಿದೆ
ಕಪಿಗಳ ಪಡೆಯೊಂದನ್ನು !

ನನ್ನ ಪ್ರೀತಿಯ ದೇಶವಾಸಿಗಳೇ
ಈ ಮೂಲಕ
ಕಿತ್ತಳೆಯನ್ನು ನಾನು
'ರಾಷ್ಟ್ರೀಯ ಫಲ'ವೆಂದು ಘೋಷಿಸುವೆನು !

**ವಿಲ್ಸನ್ ಕಟೀಲ್**
ಮಂಗಳೂರು



# ‘ಮಿನಿ’ ಗ್ರಹಣ – ಆಚ್ಛಾದನೆ

ಗ್ರಹಣ ಎಂದರೆ ಸಾಧಾರಣವಾಗಿ ಸೂರ್ಯ ಗ್ರಹಣ, ಚಂದ್ರ ಗ್ರಹಣ ಇವೆರಡೇ ನೆನಪಾಗುತ್ತವೆ. ಚಂದ್ರ ಸೂರ್ಯನಿಗೆ ಅಡ್ಡವಾಗಿ ಹಾದು ಹೋಗುವ ಹಾಗೆ ಯಾವುದೇ ನಕ್ಷತ್ರವನ್ನೂ ಹಾದುಹೋಗಬಹುದು. ಇದು ಪ್ರತಿದಿನವೂ ನಡೆಯುತ್ತಲೇ ಇರುತ್ತದೆ. ಆದರೆ, ಎಲ್ಲರ ಗಮನಕ್ಕೆ ಬರುವುದಿಲ್ಲ. ಹೀಗೆ ನಕ್ಷತ್ರ ಅಥವಾ ಗ್ರಹವನ್ನು ಚಂದ್ರ ಮರೆಮಾಡುವ ಘಟನೆಯನ್ನು ಆಚ್ಛಾದನೆ ಎಂದು ಕರೆಯಲಾಗುತ್ತದೆ. ಇಂತಹ ಘಟನೆಗಳನ್ನು ಪ್ರತಿ ತಿಂಗಳ ನಭಾವಲೋಕನದಲ್ಲಿ ಸೂಚಿಸಿದ್ದರೂ ಅವೆಲ್ಲವೂ ವೀಕ್ಷಿಸಲು ಅನುಕೂಲವಾಗಿರಬೇಕೆಂದಿಲ್ಲ. ಈ ತಿಂಗಳಲ್ಲಿ ಕೆಲವು ಆಸಕ್ತಿಪೂರ್ಣ ಆಚ್ಛಾದನೆಗಳಿವೆ. ೧೪ರಂದು ಮುಂಜಾವು ಚಂದ್ರ ರೋಹಿಣಿ ನಕ್ಷತ್ರವನ್ನು ಆಚ್ಛಾದಿಸುವುದು. ಸುಮಾರು ೦೩:೧೫ಕ್ಕೆ ಅವೆರಡೂ ಪಕ್ಕ ಪಕ್ಕದಲ್ಲೇ ಇರುವುದನ್ನು ಕಾಣಬಹುದು. ೩ : ೨೭ಕ್ಕೆ ರೋಹಿಣಿ ಮರೆಯಾಗಿ ೪ : ೧೮ಕ್ಕೆ ಇನ್ನೊಂದು ಅಂಚಿನಿಂದ ಹೊರಬರುವುದು. ೪:೩೦ರ ಹೊತ್ತಿಗೆ ನೋಡಿದಿರಾದರೆ ಆ ಚುಕ್ಕೆ ಬೇರ್ಪಟ್ಟಿರುವುದು ಸ್ಪಷ್ಟವಾಗಿ ತಿಳಿಯುವುದು. ಇದರಿಂದ ಚಂದ್ರನ ಚಲನೆಯ ವಿವರವನ್ನು ತಿಳಿದುಕೊಂಡಂತೆ ಆಗುವುದು. ಇದೇ ರೀತಿ ೧೩ರಂದು ನೆಪ್ಚ್ಯೂನ್ ಗ್ರಹದ ಆಚ್ಛಾದನೆಯೂ ನಡೆಯುತ್ತದೆ. ಆದರೆ ಈ ಗ್ರಹ ಬರಿಗಣ್ಣಿಗೆ ಕಾಣದಿರುವುದರಿಂದ ದೂರದರ್ಶಕ ಬೇಕೇ ಬೇಕು. ೨೫ರಂದು ಸಂಜೆ ಆಕಾಶವನ್ನು ಗಮನಿಸಿದರೆ ಚಂದ್ರನ ಪಕ್ಕದಲ್ಲಿ ಎರಡು ಚುಕ್ಕೆಗಳು ಕಾಣುವುವು. ಒಂದು ಬುಧ, ಇನ್ನೊಂದು ಮಘ ನಕ್ಷತ್ರ. ಆ ದಿನ ನಮ್ಮ ಹಗಲಿನಲ್ಲಿ ಸುಮಾರು ೨:೩೦ ಗಂಟೆಗೆ ಚಂದ್ರ ಬುಧ ಗ್ರಹವನ್ನು ಮರೆಮಾಡುತ್ತದೆ. ಅದಾದ ಒಂದು ಗಂಟೆಯ ನಂತರ ಮಘ ನಕ್ಷತ್ರದ ಆಚ್ಛಾದನೆಯೂ ನಡೆಯುತ್ತದೆ. ಸಂಜೆ ನಾವು ನೋಡುವ ಹೊತ್ತಿಗೆ ಚಂದ್ರ ಇವೆರಡನ್ನೂ ಹಾದು ಮುಂದೆ ಬಂದಿರುತ್ತದೆ.




ಪ್ರತಿ ತಿಂಗಳ ನಭಾವಲೋಕನದಲ್ಲಿ ಚಂದ್ರ–ಗುರು ಜೋಡಿ ಎಂಬಂತಹ ಘಟನೆಗಳನ್ನು ಗುರುತಿಸಲಾಗುತ್ತದೆ. ಇವುಗಳ ಉದ್ದೇಶ ಆಯಾ ಗ್ರಹಗಳನ್ನು ಗುರುತಿಸುವ ಮಾರ್ಗದರ್ಶಿಯಾಗಿ ಚಂದ್ರನನ್ನು ಬಳಸಿಕೊಳ್ಳುವುದು. ಈ ಘಟನೆಗಳೆಲ್ಲ ಆಚ್ಛಾದನೆಗಳಲ್ಲ. ಅವೆರಡರ ನಡುವೆ ಕನಿಷ್ಠ ಕೋನ ಇದೆ ಎಂಬುದನ್ನು ಸೂಚಿಸುವ ಚಂದ್ರಶಾಖಾನ್ಯಾಯ ಅಷ್ಟೇ.


*ಜುಲೈ ೨೫ರ ಸಂಜೆ ಬುಧ, ಮಘ, ಚಂದ್ರ*

ಸಂಜೆಯ ಆಕಾಶದಲ್ಲಿ ಗುರು ಸುಮಾರು ನೆತ್ತಿಯ ಮೇಲೆಯೇ ಕಾಣುತ್ತದೆ. ಅದು ಸಿಂಹರಾಶಿಯಲ್ಲಿಯೇ ಇರುವುದಾದರೂ ಸಿಂಹರಾಶಿಯ ಪ್ರಕಾಶಮಾನವಾದ ನಕ್ಷತ್ರ ಮಘದಿಂದ ದೂರವಿದೆ. ಆದ್ದರಿಂದ ೨೫ರ ಸಂಜೆ ಮಘ ನಕ್ಷತ್ರದ ಬಳಿ ಕಾಣುವ ಚಂದ್ರ ಎರಡು ರಾತ್ರಿಗಳ ನಂತರ ಗುರುಗ್ರಹದ ಸಮೀಪ ಕಾಣಿಸಿಕೊಳ್ಳುತ್ತದೆ. ಇನ್ನೊಂದು ಗ್ರಹ ಶನಿ ಪೂರ್ವದಂಚಿನಲ್ಲಿ ಕಾಣಿಸುತ್ತದೆ. ೭ರಂದು ಚಂದ್ರ ಅದರ ಸಮೀಪ ಹಾದುಹೋಗುತ್ತದೆ.

ಪ್ರಕಾಶಮಾನವಾದ ಶುಕ್ರ ಗ್ರಹ ಮುಂಜಾವಿನಲ್ಲಿ ಕಾಣುತ್ತದೆ. ೧೪ರಂದು ರೋಹಿಣಿಯ ಪಕ್ಕದಲ್ಲಿ ಕಾಣುವ ಅದು ೨೦ರಂದು ಸಾಕಷ್ಟು ದೂರ ಸರಿದಿರುತ್ತದೆ. ರೋಹಿಣಿಯ ಆಚ್ಛಾದನೆಯಲ್ಲಿ ಜೊತೆಗೂಡುವುದಿಲ್ಲ. ಮರುದಿನ ಅಂದರೆ ೨೧ರಂದು ಚಂದ್ರನ ಜೊತೆಗೂಡುತ್ತದೆ.

ಐದನೆಯ ಗ್ರಹ ಮಂಗಳ ಈ ತಿಂಗಳಲ್ಲಿ ಕಾಣುವುದಿಲ್ಲ. ೨೭ರಂದು ಯುತಿ ಅಂದರೆ ಸೂರ್ಯನ ಜೊತೆಗೆ ಉದಯಿಸಿ ಅಸ್ತಮಿಸುವುದು.

ಈ ತಿಂಗಳ ನಾಲ್ಕರಂದು ಭೂಮಿ–ಸೂರ್ಯರ ನಡುವೆ ಗರಿಷ್ಠ ದೂರವಿರುತ್ತದೆ. ಭೂ ಕಕ್ಷೆಯ ಈ ಬಿಂದುವಿಗೆ ಅಪರವಿ ಎಂದು ಹೆಸರು.

ಡೆಲ್ಟಾ ಅಕ್ವಾರಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿ ೩೦ರಂದು ಗರಿಷ್ಠ ಮುಟ್ಟುತ್ತದೆ. ಅಂದರೆ ಗಂಟೆಗೆ ಸುಮಾರು ೨೦ ಉಲ್ಕೆಗಳನ್ನು ಮುಂಜಾವಿನಲ್ಲಿ ನೋಡಬಹುದು.

**ಖಗೋಳ ದಿನಚರಿ**

ಜುಲೈ ೧ ಚಾಂದ್ರಮಾಸದ ಮೊದಲ ಪಾದ
ಚಂದ್ರಾಸ್ತ ನಡುರಾತ್ರಿಗೆ
ಗುರು–ಚಂದ್ರ ಜೋಡಿ (ಸಂಜೆ)
೪ ಭೂಮಿ ಅಪರವಿ ಬಿಂದುವಿನಲ್ಲಿ (ಭೂಮಿ–ಸೂರ್ಯ ನಡುವೆ ಗರಿಷ್ಠ ದೂರ)
೬ ಚಂದ್ರ–ಭೂಮಿ ನಡುವೆ ಗರಿಷ್ಠ ದೂರ
೭ ಶನಿ–ಚಂದ್ರ ಜೋಡಿ (ಸಂಜೆ)
೯ ಹುಣ್ಣಿಮೆ ೯:೩೦ಕ್ಕೆ
೧೪ ಶುಕ್ರ–ರೋಹಿಣಿ ಜೋಡಿ (ಮುಂಜಾನೆ )
೧೬ ಚಾಂದ್ರಮಾಸದ ಕೊನೆಯ ಪಾದ. ಚಂದ್ರೋದಯ ನಡುರಾತ್ರಿಗೆ
೨೦ ರೋಹಿಣಿ ಆಚ್ಛಾದನೆ (ಮುಂಜಾನೆ ೩:೨೭ರಿಂದ ೪:೧೮ರವರೆಗೆ)
೨೧ ಚಂದ್ರ–ಭೂಮಿ ನಡುವೆ ಕನಿಷ್ಠ ದೂರ
ಚಂದ್ರ–ಶುಕ್ರ ಜೋಡಿ
೨೩ ಅಮಾವಾಸ್ಯೆ ೧೪:೦೦ಕ್ಕೆ
೨೫ ಬುಧ, ಮಘ, ಚಂದ್ರ ಪುಟ್ಟ ಗುಂಪು (ಸಂಜೆ)
೨೭ ಮಂಗಳ ಗ್ರಹದ ಯುತಿ
೨೮ ಗುರು–ಚಂದ್ರ ಜೋಡಿ (ಸಂಜೆ)
೩೦ ಬುಧ ಗ್ರಹದ ಗರಿಷ್ಠ ಕೋನೋನ್ನತಿ (ಸಂಜೆ)
ಡೆಲ್ಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿ (ಮುಂಜಾನೆ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಬೆಂಗಳೂರು – ೫೬೦ ೦೦೧

# ಚೀಣಾದ ಮಹದಾಕಾಂಕ್ಷೆಯ ರಸ್ತೆ ನಿರ್ಮಾಣ ಯೋಜನೆ

ಬೃಹತ್ ಯೋಜನೆಗಳ ಬೆನ್ನಹತ್ತಿ ಹೋಗುವುದು ಮನುಕುಲದ ಜಾಯಮಾನ. ಅದರಲ್ಲೂ ಉದಯೋನ್ಮುಖ ದೇಶಗಳ ಮಟ್ಟಿಗೆ ಇದು ಸಹಜ. ಮಾರುಕಟ್ಟೆಗಾಗಿ ಐರೋಪ್ಯ ದೇಶಗಳು ಒಂದು ಕಾಲದಲ್ಲಿ ಹಿಡಿದ ಮಾರ್ಗ ವಸಾಹತೀಕರಣ. ಬದಲಾಗಿರುವ ಇಪ್ಪತ್ತೊಂದನೇ ಶತಮಾನದಲ್ಲೀಗ ಜಾಗತೀಕರಣ, ವ್ಯಾಪಾರೀಕರಣ, ಇತ್ಯಾದಿಗಳ ಪರ್ವ. ಅತ್ಯಂತ ವೇಗವಾಗಿ ಕೈಗಾರಿಕೀಕರಣಗೊಂಡು ಬಲಿಷ್ಠ ರಾಷ್ಟ್ರವಾಗಿ ಹೊಮ್ಮುತ್ತಿರುವ ಏಷಿಯದ ರಾಷ್ಟ್ರ ಚೀಣಾ. ಅರವತ್ತೇಳು ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದ ಚೀಣಾ ಜನತಾ ಗಣರಾಜ್ಯ ವಿವಿಧ ಹಂತಗಳನ್ನು ದಾಟಿ ಬೆಳೆದಿರುವ, ಬೆಳೆಯುತ್ತಿರುವ ದೇಶ ಮಹದಾಕಾಂಕ್ಷೆ ಹೊಂದಿದೆ. ಅದೇ 'ಒಂದು ವಲಯ ಒಂದು ರಸ್ತೆ' ನಿರ್ಮಾಣದ ಬೃಹತ್ ಯೋಜನೆ.

'ಶತಮಾನದ ಯೋಜನೆ' ಎಂಬುದಾಗಿ ಬಣ್ಣಿಸಿರುವ ಚೀಣಿ ನಾಯಕರ ಪ್ರಕಾರ ಈ ಯೋಜನೆ ಪ್ರಪಂಚದ ಜನಸಂಖ್ಯೆಯಲ್ಲಿ ಮೂರನೇ ಎರಡು ಭಾಗ ಜನಸಂಖ್ಯೆಯನ್ನು ಹೊಂದಿರುವ ಅರವತ್ತು ದೇಶಗಳನ್ನು ಸಂಪರ್ಕಿಸಲಿದೆ. ಏಷಿಯಾ, ಯೂರೋಪು ಮತ್ತು ಆಫ್ರಿಕ ಖಂಡಗಳ ದೇಶಗಳೊಂದಿಗೆ ಹಾಗೂ ಅದರ ಆಸುಪಾಸಿನ ಸಾಗರಗಳ ಮಧ್ಯೆ ಸಂಪರ್ಕ ಏರ್ಪಡಿಸುವುದೇ ಚೀಣಿಯರ ಗುರಿ. ಕಳೆದ ನಾಲ್ಕು ವರ್ಷಗಳಿಂದ ಚೀಣಾದ ನಾಯಕರು ಈ ಯೋಜನೆಯ ಕುರಿತು ಮಾತನಾಡುತ್ತ ಬಂದಿದ್ದಾರೆ. ಈ ಬೃಹತ್ ಯೋಜನೆ ನಾನಾ ಬಗೆಯ ಗುರಿಗಳನ್ನು ಹೊಂದಿದೆ. 'ವಲಯ' ರಸ್ತೆ ನಿರ್ಮಾಣ ಮತ್ತು ಸರಕು ಸಾಗಣೆಗೆ ಅನುಕೂಲ ಕಲ್ಪಿಸುವುದಾಗಿದ್ದರೆ, 'ರಸ್ತೆ' ಎನ್ನುವುದು ಸಮುದ್ರಮಾರ್ಗಗಳನ್ನು ಸಂಪರ್ಕಿಸುವುದಾಗಿದೆ. ೨೧ನೇ ಶತಮಾನದ 'ಮ್ಯಾರಿಟೈಮ್ ಸಿಲ್ಕ್ ರೋಡ್' ಎಂಬುದಾಗಿ ಬಣ್ಣಿಸಿರುವ ಈ ಮಾರ್ಗ ಚೀಣಾ ಹಾಗೂ ಯೂರೋಪಿಯನ್ ದೇಶಗಳ ಜೊತೆ ಸಂಪರ್ಕ ಏರ್ಪಡಿಸುವ ಉದ್ದೇಶ ಹೊಂದಿದೆ. ದಕ್ಷಿಣ ಚೀಣಾ ಸಮುದ್ರ ಮತ್ತು ಹಿಂದೂ ಮಹಾಸಾಗರದ ದೇಶಗಳು, ಪೆಸಿಫಿಕ್ ಸಾಗರದ ದೇಶಗಳ ಜೊತೆ ಮುಕ್ತ ಸಂಚಾರ ಏರ್ಪಡಿಸುವ ಹೆಬ್ಬಯಕೆಯನ್ನು ಹೊಂದಿದೆ ಚೀಣಾದ ಈ ಯೋಜನೆ.

## ಸೀಯಾರ್ಕೆ

ಚೀಣಾದ ನಾಯಕರು ಯೋಜನೆ ರೂಪಿಸಿದರೆ ಶತಾಯ ಗತಾಯ ಅದನ್ನು ಕಾರ್ಯಗತಗೊಳಿಸಲು ಪಟ್ಟು ಹಿಡಿಯುವುದೆಂಬುದನ್ನು ನೋಡಿದ್ದೇವೆ. ಟಿಬೆಟ್‌ನೊಂದಿಗೆ ನೇರ ಸಂಪರ್ಕಕ್ಕಾಗಿ ದುರ್ಗಮವಾದ ನಿರ್ಜನ ಪ್ರದೇಶದಲ್ಲಿರುವ ಅಕ್ಸೈಚಿನ್ ರಸ್ತೆ ಅದಕ್ಕೆ ಉದಾಹರಣೆ. ಭಾರತ ಮತ್ತು ಚೀಣಾ ಮಧ್ಯೆ ವಿರಸಕ್ಕೆ ಕಾರಣವಾದ ಈ ರಸ್ತೆ ಈಗ ಇತಿಹಾಸ. ತನ್ನ ಮಹತ್ವಾಕಾಂಕ್ಷೆಯ 'ಒಂದು ವಲಯ ಒಂದು ರಸ್ತೆ' ಯೋಜನೆಯನ್ನು ಕಾರ್ಯಗತ ಮಾಡಲು ಮೇ ತಿಂಗಳ ನಡುವಿನಲ್ಲಿ ಬೀಜಿಂಗ್‌ನಲ್ಲಿ ಸಮಾಲೋಚನೆ ಸಮಾವೇಶವೊಂದನ್ನು ನಡೆಸಿತು. ಈ ಸಮಾವೇಶದಲ್ಲಿ ಅನೇಕ ದೇಶಗಳ ಪ್ರಮುಖರು ಭಾಗವಹಿಸಿದ್ದರು. ಹಲವು ದೇಶಗಳ ಪ್ರಧಾನಿಗಳೂ, ಅಧ್ಯಕ್ಷರೂ ಇದ್ದರು. ಈ ಭೂಭಾಗದಲ್ಲಿ ಭಾಗವಹಿಸದೇ ಇದ್ದ ದೇಶಗಳು ಭಾರತ ಮತ್ತು ಭೂತಾನ್ ಮಾತ್ರ. ಮುಖ್ಯವಾಗಿ ಭಾರತದ ಆಕ್ಷೇಪ ಯೋಜಿತ ಸಂಪರ್ಕ ಮಾರ್ಗ ಪಾಕಿಸ್ತಾನ ಆಕ್ರಮಿತ ಕಾಶ್ಮೀರದ ಮೂಲಕ ಹಾದು ಹೋಗುವುದಾಗಿದೆ. ಒಂದು ರೀತಿಯಲ್ಲಿ ಅದು ಅಂತರರಾಷ್ಟ್ರೀಯ ಮಾನ್ಯತೆ ನೀಡಿದಂತಾಗುತ್ತದೆ ರಸ್ತೆ ನಿರ್ಮಾಣವಾದರೆ. ನೂರಾರು ಬಿಲಿಯ ಡಾಲರುಗಳು ಖರ್ಚಾಗುವ ಈ ಯೋಜನೆಗೆ ಹಣ ಒದಗಿಸಲು ಚೀಣಾ ನೀಲನಕ್ಷೆ ತಯಾರಿಸಿದೆ. ಇತ್ತೀಚಿನ ಕಾಲಾವಧಿಯಲ್ಲಿ ಶೀಘ್ರಗತಿಯಲ್ಲಿ ಅಭಿವೃದ್ಧಿ ಸಾಧಿಸುತ್ತಿರುವ ಚೀಣಾ ಪ್ರಬಲ ಶಕ್ತಿಯಾಗಿ ಹೊಮ್ಮುತ್ತಿದ್ದು, ಮಾರುಕಟ್ಟೆಯ ವಿಸ್ತರಣೆಗಾಗಿ ಹಾತೊರೆಯುತ್ತಿರುವುದು ಗಮನಿಸಬೇಕಾದ ಸಂಗತಿ. ಒಂದು ಬಗೆಯಲ್ಲಿ ಇದು ನೂತನ ಜಾಗತೀಕರಣದ ಮುನ್ಸೂಚನೆಯಾಗಿದೆ.




'ಮ್ಯಾರಿಟೈಮ್ ಸಿಲ್ಕ್ ರೋಡ್' ನಕ್ಷೆ




ಬೀಜಿಂಗ್‌ನಲ್ಲಿ ಸಮಾಲೋಚನೆ ಸಮಾವೇಶ

* * *

# ದಿಢೀರ್ ನಿರ್ಧಾರಗಳ ಅಮೆರಿಕದ ಅಧ್ಯಕ್ಷ ಟ್ರಂಪ್

ಆರು ತಿಂಗಳಲ್ಲಿ ಪ್ರಪಂಚದಲ್ಲಿ ಅವಾಂತರ ಸೃಷ್ಟಿಸಿರುವ ವ್ಯಕ್ತಿ ಎಂದರೆ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್. ಚುನಾವಣೆ ಪ್ರಚಾರ ಕಾಲದಲ್ಲೇ ಸಾಕಷ್ಟು ವಿವಾದಗಳನ್ನು ಹುಟ್ಟುಹಾಕಿದ ಈ ಕಟ್ಟಾ ಉದ್ಯಮಿ ಯದ್ವಾತದ್ವಾ ನಡವಳಿಕೆಗೆ ಹೆಸರುವಾಸಿ. ಒಂದು ರೀತಿಯಲ್ಲಿ ಟಿಪಿಕಲ್ ಅಮೆರಿಕನ್, ಹಳೆಯ ಕಾಲದ ಟ್ರಿಗರ್ ಹ್ಯಾಪಿ ಯಾಂಕಿಯನ್ನು ನೆನಪಿಗೆ ತರುವ ವ್ಯಕ್ತಿ. ಅನಿರೀಕ್ಷಿತ ತೀರ್ಮಾನಗಳನ್ನು ತೆಗೆದುಕೊಳ್ಳುವ ಈತ ಒಂದು ಬಗೆಯ ಭಂಡ. ಹಿನ್ನಡೆಗಳಿಗೆ ವಿಚಲಿತನಾಗದಿರುವ ಟ್ರಂಪ್ ಆನೆ ತುಳಿದದ್ದೇ ಹಾದಿ ಎಂದು ಹೊರಟಿದ್ದಾನೆ.

ಇತ್ತೀಚಿನ ನಿರ್ಧಾರ ಎಂದರೆ ಪರಿಸರ ಸಂರಕ್ಷಣೆ ಕುರಿತು ಪ್ಯಾರಿಸ್ ಒಪ್ಪಂದದಿಂದ ಅಮೆರಿಕ ನಿರ್ಗಮನ. ಪ್ರಪಂಚದಲ್ಲಿ ಪರಿಸರಕ್ಕೆ ಬೇಕಾದಷ್ಟು ಹಾನಿ ಉಂಟುಮಾಡುತ್ತಿರುವ ದೇಶ ಎಂದರೆ ಅಮೆರಿಕ. ವಿಷಪೂರಿತ ಹಾನಿಕಾರಕ

ರಾಸಾಯನಿಕಗಳನ್ನು ಹೊರಸೂಸುತ್ತಿರುವ ದೇಶ ಅಮೆರಿಕ. ಜಗತ್ತಿನ ತಾಪಮಾನವನ್ನು ಹೆಚ್ಚಿಸುವುದಕ್ಕೆ, ಸಮುದ್ರದ ಏರಿಳಿತ ಹಾಗೂ ಮಟ್ಟವನ್ನು ಹೆಚ್ಚಿಸುವುದಲ್ಲದೆ ಪರಿಸರ ಹಾನಿಯಿಂದ ಮನುಕುಲದ ವಿನಾಶಕ್ಕೆ ಎಡೆಕೊಡುತ್ತದೆ. ಈ ಕುರಿತು ಪರಿಸರ ವಿಜ್ಞಾನಿಗಳು ಎಚ್ಚರಿಸಿದ್ದಾರೆ. ಅಂಥದರಲ್ಲೂ ಅಮೆರಿಕ ಈಗ ವಿಪರೀತ ಹಿಗ್ಗಾಟಮುಗ್ಗಾಟದಿಂದ ರೂಪಿತವಾದ ಪ್ಯಾರಿಸ್ ಪರಿಸರ ಒಪ್ಪಂದದಿಂದ ಹೊರ ನಡೆದಿದೆ.

ವಿಶ್ವಸಂಸ್ಥೆಯ ಆಶ್ರಯದಲ್ಲಿ ೧೯೭೨ರಲ್ಲಿಯೇ ಆದ ಪರಿಸರ ಒಪ್ಪಂದಕ್ಕೆ ಅಮರಿಕ ವಿರೋಧ ವ್ಯಕ್ತಗೊಳಿಸಿತ್ತು. ಅನಂತರ ಜಪಾನಿನ ಕ್ಯೋಟೋ ಹಾಗೂ ಕಾತಾರ್‌ನ ದೋಹಾದ ಒಪ್ಪಂದಗಳನ್ನು ಅದು ಮಾನ್ಯ ಮಾಡಿರಲಿಲ್ಲ. ೧೯೯೭ರಲ್ಲಿ ಕ್ಲಿಂಟನ್ ಅಧ್ಯಕ್ಷರಾಗಿದ್ದಾಗ ಸಹಿ ಹಾಕಿದ್ದ ಕ್ಯೋಟೋ ಒಪ್ಪಂದವನ್ನು ಅನಂತರ ಬಂದ ಜಾರ್ಜ್ ಬುಷ್ ತಿರಸ್ಕರಿಸಿದ್ದರು. ಹಾಗಾಗಿ ಅಮೆರಿಕ ಮೊದಲಿನಿಂದಲೂ ಪರಿಸರ ಒಪ್ಪಂದವನ್ನು ವಿರೋಧಿಸಿರುವುದನ್ನು ಕಾಣಬಹುದು. ಅದಾಗ್ಯೂ ಪ್ಯಾರಿಸ್ ಪರಿಸರ ಒಪ್ಪಂದದಿಂದ ಹಿನ್ನಡೆದಿರುವುದನ್ನು ಎಲ್ಲ ದೇಶಗಳು ಖಂಡಿಸಿವೆ. ಒಪ್ಪಂದದಿಂದ ಹಿಂದೆ ಸರಿಯಲು ನೀಡಿರುವ ಸಮರ್ಥನೆ ಹಾಗೂ ಭಾರತ ಮತ್ತು ಚೀಣಾಗಳ ಮೇಲೆ ಹೊರಿಸಿರುವ ಆಪಾದನೆ ನಿರರ್ಥಕ. ಅಮೆರಿಕದ ಈ ನಡವಳಿಕೆಗೆ ಅಲ್ಲಿನ ಹಲವು ರಾಜ್ಯಗಳು ವಿರೋಧ ಸೂಚಿಸಿವೆ. ಅಮೆರಿಕದ ನಿರ್ಧಾರದಿಂದಾಗಿ ಪರಿಸರ ರಕ್ಷಣೆಯ ಆಂದೋಲನಕ್ಕೆ ಹಿನ್ನಡೆಯಾಗಿದೆ. ಅಮೆರಿಕ ತನ್ನ ಹೊಣೆಗಾರಿಕೆಯಿಂದ ಜಾರಿಕೊಳ್ಳುವ ಹುನ್ನಾರ ಇದಾಗಿದೆ.

**ಬ್ರಿಟನ್ ಅತಂತ್ರ ಫಲಿತಾಂಶ :** ಅವಧಿ ಮುಗಿಸುವ ಮುನ್ನವೇ ಚುನಾವಣೆಗಳನ್ನು ನಡೆಸಿದ ಬ್ರಿಟನ್ನಿನ ಪ್ರಧಾನಿ ಥೆರೆಸಾ ಮೇ ಲೆಕ್ಕಾಚಾರ ತಲೆಕೆಳಗಾಯಿತು. ಕಳೆದ ತಿಂಗಳು ಜರುಗಿದ ಚುನಾವಣೆ ಗಳಲ್ಲಿ ಯಾವ ಪಕ್ಷಕ್ಕೂ ಬಹುಮತ ದೊರೆಯದೇ ಹೋಯಿತು. ಪಾರ್ಲಿಮೆಂಟರಿ ವ್ಯವಸ್ಥೆಯಲ್ಲಿ ಇಂಥ ಫಲಿತಾಂಶ ಅನಿರೀಕ್ಷಿತವೇನಲ್ಲ. ಬ್ರಿಟಿಷ್ ಇತಿಹಾಸದಲ್ಲಿ ಸಮ್ಮಿಶ್ರ ಸರಕಾರ ಸ್ಥಾಪನೆಯಾಗಿರುವುದು ಮೊದಲೇನಲ್ಲ. ಕನ್ಸರ್‌ವೇಟಿವ್ ಪಕ್ಷದ ನಾಯಕಿ ಥೆರೆಸಾ ಮೇ ಪ್ರಧಾನಿಯಾಗಿ ಆಯ್ಕೆಗೊಂಡದ್ದು ಬ್ರಿಟನ್‌ನಲ್ಲಿ ಬ್ರೆಕ್ಸಿಟ್ ಜನಮತ ಗಣನೆ ನಡೆದ ತರುವಾಯ. ಯೂರೋಪಿಯನ್ ಯೂನಿಯನ್ನಿನಿಂದ ಮುಕ್ತವಾಗಲು ಅಂಥ ದೊಡ್ಡ ಬಹುಮತದಿಂದ ಜನ ತೀರ್ಪು ನೀಡಲಿಲ್ಲ. ಬ್ರೆಕ್ಸಿಟ್ ಪ್ರಕ್ರಿಯೆ ಪ್ರಾರಂಭಿಸಿದ ಪ್ರಧಾನಿ ಮೇ ಭಾರಿ ಬಹುಮತದ ನಿರೀಕ್ಷೆಯಿಂದ ಚುನಾವಣೆ ಕಣಕ್ಕೆ ಧುಮುಕುವ ಸಾಹಸಕ್ಕೆ ಕೈ ಹಾಕಿದ್ದು ತಮ್ಮ ನೀತಿಗಳಿಗೆ ಸ್ಪಷ್ಟ ನಿರ್ದೇಶನ ಪಡೆಯಲು. ಆದರೆ ಆದದ್ದೇ ಬೇರೆ. ೬೫೦ ಸದಸ್ಯತ್ವ ಹೊಂದಿರುವ ಪಾರ್ಲಿಮೆಂಟಿನಲ್ಲಿ ಕನ್ಸರ್‌ವೇಟಿವ್ ಪಕ್ಷ ಪಡೆದದ್ದು ೩೧೮ ಸ್ಥಾನಗಳನ್ನು ಮಾತ್ರ ಹಾಗೂ ಶೇ. ೪೨.೪೫ ಮತಗಳನ್ನು ಮಾತ್ರ. ಈಗ ಐರ್ಲೆಂಡಿನ ಡೆಮಾಕ್ರಟಿಕ್ ಯೂನಿಯನ್ ಪಾರ್ಟಿ (೧೦ ಸ್ಥಾನಗಳು) ನೆರವಿನಿಂದ ಸರಕಾರ ರಚಿಸಲು ಮುಂದಾಗಿದೆ. ಮತದಾನದ ವಿಚಾರಕ್ಕೆ ಬಂದಾಗ ಬ್ರಿಟನ್ನಿನ ಮತದಾರರು ಅಮೆರಿಕದ ಮತದಾರರಿಗಿಂತ ಮೇಲೆ. ಅಮೆರಿಕದಲ್ಲಿ ಮತದಾನದ ಪ್ರಮಾಣ ಚುನಾವಣೆಯಿಂದ ಚುನಾವಣೆಗೆ ಕಮ್ಮಿ ಯಾಗುತ್ತಿದ್ದು, ಶೇ.೫೦ಕ್ಕಿಂತ ಕಡಿಮೆಯಾಗಿದ್ದರೆ ಬ್ರಿಟನ್ನಿನಲ್ಲಿ ಶೇ.೬೯ರಷ್ಟು ಮತದಾರರು ಮತ ಚಲಾಯಿಸಿದ್ದಾರೆ. ಚುನಾವಣಾ ಫಲಿತಾಂಶವನ್ನು ಗಮನಿಸಿದರೆ ಬ್ರಿಟನ್ನಿನ ಬ್ರೆಕ್ಸಿಟ್ ಮಾರ್ಗ ಸುಗಮವೇನಲ್ಲ.


ಥೆರೆಸಾ ಮೇ

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫

# ಸಂದಾಯ



**ನಾ**ನು
ವ್ಯಕ್ತಪಡಿಸುವ ಪ್ರತಿ ಆಲೋಚನೆಗೆ, ಸಂದಾಯ ಪಡೆಯುತ್ತೇನೆ
ಬರೆಯುವ ಪ್ರತಿ ಅಕ್ಷರಕ್ಕೆ, ಸಂದಾಯ ಪಡೆಯುತ್ತೇನೆ
ಕೂಗುವ ಪ್ರತಿ ಘೋಷಣೆಗೆ, ಸಂದಾಯ ಪಡೆಯುತ್ತೇನೆ
ಎಸೆಯುವ ಪ್ರತಿ ಕಲ್ಲಿಗೂ, ಸಂದಾಯ ಪಡೆಯುತ್ತೇನೆ

ನಾನು
ದೋಚಿದ ಬಂದೂಕಿಗೆ ಸಂದಾಯ ಪಡೆಯುತ್ತೇನೆ
ನನ್ನೆದೆ ಸೀಳಿದ ಗುಂಡಿಗೆ ಸಂದಾಯ ಪಡೆಯುತ್ತೇನೆ
ಅಂತ್ಯಕ್ರಿಯೆಗಳಲ್ಲಿ ಪಾಲ್ಗೊಳ್ಳುವುದಕ್ಕೆ ಸಂದಾಯ ಪಡೆಯುತ್ತೇನೆ
ಹುತಾತ್ಮರ ಮನೆಗೆ ಭೇಟಿ ನೀಡುವುದಕ್ಕೆ ಸಂದಾಯ ಪಡೆಯುತ್ತೇನೆ

ನೀನು
ನಮ್ಮ ಕಣಿವೆಗೆ ನೀ ನುಗ್ಗಿದಾಗ ಸಂದಾಯ ಪಡೆದಿರುವೆ
ಇಲ್ಲಿ ಕಳೆಯುವ ಪ್ರತಿ ದಿನಕ್ಕೂ ಸಂದಾಯ ಪಡೆದಿರುವೆ
ನಿನ್ನಿಂದಾದ ಪೀಡನೆ, ಚಿತ್ರಹಿಂಸೆ, ಕೊಲೆ, ದಹನಕ್ಕೆ ಸಂದಾಯ ಪಡೆದಿರುವೆ
ನಾನು ಸಂದಾಯ ಪಡೆಯುತ್ತೇನೆ ಎನ್ನುವುದಕ್ಕೂ ಸಂದಾಯ ಪಡೆದಿರುವೆ

ನನ್ನ ಪ್ರತಿಭಟನೆಯ ಪ್ರತಿ ರೂಪವೂ ಸಂದಾಯ ಪಡೆದಿದ್ದರೆ
ನಿನ್ನ ಆಕ್ರಮಣವೂ ಸಂದಾಯ ಪಡೆದಿದೆ

ವ್ಯತ್ಯಾಸವಿಷ್ಟೆ:
ಹಣ ಮತ್ತು ಭಡ್ತಿಯ ಮೂಲಕ ನೀ ಸಂದಾಯ ಪಡೆದರೆ
ನಾನು ನಿನ್ನ ಅತಿಕ್ರಮಣವನ್ನು ಅಂತ್ಯಗೊಳಿಸುವ
ಭರವಸೆಯನ್ನು ಸಂದಾಯವಾಗಿ ಪಡೆಯುತ್ತೇನೆ.




ಮೂಲ : **ನಾಸಿರ್ ಪಟಿಗರು** ಅನುವಾದ : **ಸಂವರ್ತ (ಸಾಹಿಲ್)**
'ಸತ್ಯಶ್ರೀ', ಎಂಐಜಿ, ೪ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ, ಕೆಹೆಚ್‌ಬಿ ಕಾಲೋನಿ, ಹುಡ್ಕೊ, ಮಣಿಪಾಲ್ – ೫೭೬ ೧೦೪




ನಾನು ಓದಿದ ಪುಸ್ತಕ

ಲೇಖಕರು:
**ಡಾ॥ ಬಿ. ಎಸ್. ಪ್ರಣತಾರ್ತಿಹರನ್**
ಪುಟಗಳು : ೪೪೪    ಬೆಲೆ : ರೂ. ೨೮೦/–
ಪ್ರಕಾಶಕರು :
**ಶ್ರೀಕ್ಷೇತ್ರ ಪ್ರಕಾಶನ**, ನಂ. ೨೮೭/ಎಫ್–೨೧,
ರಾಮಾನುಜ ರಸ್ತೆ, ಮೈಸೂರು – ೫೭೦ ೦೦೪

# ಮನುಷ್ಯ ಸಂಬಂಧಗಳ ಸುತ್ತಣ ಪ್ರವಾಸ

**ಡಾ॥ ಎಚ್. ಎಸ್. ಗೋಪಾಲ ರಾವ್**

ಪ್ರವಾಸ ಕಥನವೆನ್ನುವುದು ಗದ್ಯ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರ. ಪ್ರವಾಸವೆನ್ನುವ ಪ್ರಕ್ರಿಯೆ ಬಹಳ ಹಿಂದಿನಿಂದಲೂ ಇದ್ದುದಕ್ಕೆ ಭಾರತಕ್ಕೆ ಬಂದಿದ್ದ ಅನೇಕ ವಿದೇಶೀ ಪ್ರವಾಸಿಗರ ಕಥನಗಳು ಸಾಕ್ಷಿಯಾಗಿವೆ. ಇವು ಆಯಾ ಕಾಲ ಘಟ್ಟದ ಜನ, ಜನಜೀವನ, ರಾಜಕೀಯ ಮತ್ತು ಸಾಂಸ್ಕೃತಿಕ ವಿಚಾರಗಳ ಬಗ್ಗೆ ತಿಳಿಯಲು ನೆರವಾಗುತ್ತವೆ. ಇತಿಹಾಸ ರಚನೆಯ ಸಂದರ್ಭದಲ್ಲೂ ಪ್ರವಾಸಿ ಕಥನಗಳು ಆಕರಗಳಾಗಿ ನೆರವಿಗೆ ಬರುತ್ತವೆ. ಕೆಲವು ಬಾರಿ ಐತಿಹಾಸಿಕ ಮಹತ್ವದ ವಿಚಾರಗಳ ತಾರ್ಕಿಕ ಒಪ್ಪಿಗೆಗೆ ಪ್ರವಾಸಿ ಕಥನಗಳು ನೆರವಿಗೆ ಬರುತ್ತವೆ. ಎರಡನೆ ಪೊಲೇಕೇಶಿಯು ಕನೂಜಿನ ಶ್ರೀಹರ್ಷನನ್ನು ಸೋಲಿಸಿದ್ದ ವಿಷಯದ ಶಾಸನೋಲ್ಲೇಖಕ್ಕೆ ಹ್ಯುಯನ್‌ತ್ಸಾಂಗನ ಪ್ರವಾಸ ಕಥನ ಸಮರ್ಥನೆ ನೀಡುತ್ತದೆ. ಇಂತಹ ಅದೆಷ್ಟೋ ಉದಾಹರಣೆಗಳನ್ನು ಪ್ರವಾಸ ಕಥನಗಳಿಂದ ಪಡೆಯಬಹುದು.

ಆಧುನಿಕ ಕಾಲದಲ್ಲೂ ಶಿವರಾಮ ಕಾರಂತ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎ. ಎನ್. ಮೂರ್ತಿರಾವ್, ರಾಶಿ., ಕೃಷ್ಣಾನಂದ ಕಾಮತ್ ಮತ್ತಿನ್ನೂ ಅನೇಕರ ಪ್ರವಾಸ ಕಥನಗಳು ಕನ್ನಡದಲ್ಲಿ ಜನಪ್ರಿಯವಾಗಿವೆ ಮತ್ತು ಅವುಗಳಿಂದ ಪರಸ್ಪರ ಅನುಭವಗಳ ವಿನಿಮಯಕ್ಕೆ ಅವಕಾಶಗಳು ಒದಗಿ, ವಿಶ್ವವೇ ಒಂದು ಎನ್ನುವ ಮಾತು ಕೇವಲ ಭಾವನಾತ್ಮಕವಾಗಿ ಮಾತ್ರವಲ್ಲದೆ ವಾಸ್ತವವಾಗಿಯೂ ನಿಜವಾಗುತ್ತಿದೆ. ಈಗ ಅಮೆರಿಕಾ ದೂರದ ದೇಶವಲ್ಲ; ನಮ್ಮ ನೆರೆಹೊರೆಯ ಒಂದು ಪ್ರದೇಶ ಎನಿಸುತ್ತಿದೆ. ಇಂತಹ ಅಭಿಪ್ರಾಯಗಳು ಮತ್ತಷ್ಟು ಸ್ಪಷ್ಟರೂಪ ಪಡೆಯಲು ಈಚಿನ ಹಲವು ಪ್ರವಾಸ ಕಥನಗಳು ನೆರವಿಗೆ ಬರುತ್ತಿವೆ.

ಅಂತಹ ಒಂದು ಪ್ರವಾಸ ಕಥನ ಡಾ॥ ಬಿ. ಎಸ್. ಪ್ರಣತಾರ್ತಿಹರನ್ ಅವರ 'ಆಸುಪಾಸು'. ಈ ಕೃತಿಗೆ ಮುನ್ನುಡಿ ಬರೆದಿರುವ ಡಾ॥ ಹೆಚ್. ಪಾಂಡುರಂಗ ವಿಠಲ ಅವರು ಇದನ್ನು ಪ್ರವಾಸ ಕಥನ ಎನ್ನುವುದರ ಬದಲು ವಾಸ ಕಥನ ಎಂದು ಒಪ್ಪಿಕೊಂಡಿದ್ದಾರೆ. ಹಿಂದೆಲ್ಲಾ ಅಮೆರಿಕಾದಲ್ಲಿ ನೆಲೆಸಿದ್ದವರು ತಮ್ಮ ಬಂಧುಗಳನ್ನು, ಆಪ್ತರನ್ನು, ಪ್ರವಾಸಕ್ಕೆಂದೇ ಕರೆಸಿಕೊಳ್ಳುತ್ತಿದ್ದರು. ಈಗ ಅಮೆರಿಕಾದಲ್ಲಿ ನೆಲೆಸಿರುವವರು ತಮ್ಮ ಬಂಧು ವರ್ಗವನ್ನು, ವಿಶೇಷವಾಗಿ ಗಂಡ–ಹೆಂಡಿರ ಜೋಡಿಯು ತಂದೆ ತಾಯಿಯರನ್ನು ಪ್ರವಾಸಕ್ಕಿಂತಲೂ ತಮ್ಮ ನೆರವಿಗೆ ಕರೆಸಿಕೊಳ್ಳುವುದು ರೂಢಿ. ಈ ನೆರವು ಸಾಮಾನ್ಯವಾಗಿ ಹೆಣ್ಣುಮಕ್ಕಳ ಬಾಣಂತನಕ್ಕೆ ಸಂಬಂಧಿಸಿದಂತೆ ಹೆಚ್ಚು. ಮಗಳ ಬಾಣಂತನಕ್ಕೆ ಹೋದಾಗ ಅಳಿಯನನ್ನು ಕಡೆಗಣಿಸಲು ಸಾಧ್ಯವೆ? ಅವನಿಗೂ ಒಂದಷ್ಟು ಉಪಚಾರ ಆಗಬೇಕು. ಆ ಉಪಚಾರವು ಪ್ರಣತಾರ್ತಿಹರನ್ ಅವರ ಮಾತುಗಳಲ್ಲಿ ಕೋಣಂತನ ಎಂಬ ನುಡಿಗಟ್ಟಾಗಿದೆ. ಲೇಖಕರು ಈ ಕೃತಿಯನ್ನು ಅರ್ಪಣೆ ಮಾಡಿರುವುದು 'ಬಾಕೋತಂತಾ' ಸದಸ್ಯರಿಗೆ. ಬಾಕೋತಂತಾ ಎಂಬುದರ ವಿಸ್ತೃತ ರೂಪ ಬಾಣಂತನ ಕೋಣಂತನ ಮಾಡಲು ಬಂದ ತಂದೆ ತಾಯಿಯರು. ವಿಡಂಬನೆಯ ನುಡಿಗಟ್ಟುಗಳೇ ಅಪರೂಪವಾಗುತ್ತಿರುವ ಸಂದರ್ಭದಲ್ಲಿ ಇಂತಹ ಒಂದು ನುಡಿಗಟ್ಟನ್ನು ಕಟ್ಟಿಕೊಟ್ಟಿರುವ ಪ್ರಣತಾರ್ತಿಹರನ್ ಅಭಿನಂದನೆಗೆ ಪಾತ್ರರಾಗುತ್ತಾರೆ.

ಈಚಿನ ದಿನಗಳಲ್ಲಿ ವಯಸ್ಸಾದವರು ಅಮೆರಿಕಾಕ್ಕೆ ಹೊರಟರೆ ಅದು ಮಗಳ ಅಥವಾ ಸೊಸೆಯ ಬಾಣಂತನಕ್ಕೆ ಎಂಬ ನಿರೀಕ್ಷೆಯೇ ಹೆಚ್ಚು. ಹೆಣ್ಣುಮಕ್ಕಳ ಬಾಣಂತನಕ್ಕೆ ಹೋದಮೇಲೆ, ಆ ಹೆಣ್ಣುಮಕ್ಕಳನ್ನು ಪೋಷಿಸುವ ಅಥವಾ ಪೀಡಿಸುವ ಗಂಡುಮಕ್ಕಳಿಗೆ ಕೋಣಂತನವೂ ನಡೆಯಬೇಕು. ಅದು ನಿರೀಕ್ಷೆ. ಈ ನಿರೀಕ್ಷೆಯ ಹಿಂದಿನ ಕೌತುಕ, ಆತಂಕಗಳ ವಿಶ್ಲೇಷಣೆಗೆ ಪ್ರಣತಾರ್ತಿಹರನ್ ಅವಕಾಶ ಮಾಡಿಕೊಂಡಿದ್ದಾರೆ. ಬಾಕೋತಂತಾಗಳಲ್ಲಿ ತಂದೆಯರು ಮನೆಯ

> ಅಮೆರಿಕಾದಲ್ಲೂ ಗಣಪತಿ, ವೆಂಕಟೇಶ ಇತ್ಯಾದಿ ದೇವರುಗಳ ಪ್ರತಿಷ್ಠಾಪನೆ, ಹೋಮ, ಹವನ ಇತ್ಯಾದಿಗಳೆಲ್ಲಾ ಸಾಂಗವಾಗಿ ನಡೆಯುತ್ತವೆ ಎಂಬ ವಿವರಣೆಗಳನ್ನು ಕೇಳಿದಾಗ, ಹಿಂದೂ ಧರ್ಮಾಚರಣೆಗಳು ಅಮೆರಿಕಾಕ್ಕೆ ವರ್ಗಾವಣೆಯಾಗಿ ಬಲ ಪಡೆಯುತ್ತಿರುವುದು ದೇವರುಗಳಿಗೆ ಒಳ್ಳೆಯದೋ, ಅಲ್ಲಿ ನೆಲೆಸಿರುವ ಹಿಂದೂಗಳಿಗೆ ಮಾತ್ರ ಒಳ್ಳೆಯದೋ ಎಂಬ ಪ್ರಶ್ನೆಯು ಜಿಜ್ಞಾಸೆಗೆ ಅವಕಾಶ ಕಲ್ಪಿಸುತ್ತದೆ. ಆ ನಿಟ್ಟಿನಲ್ಲಿ ಪ್ರಣತಾರ್ತಿಹರನ್ ಅವರ ಕೃತಿ ಚಿಂತನಶೀಲ ಎನಿಸಿಕೊಳ್ಳುತ್ತದೆ.

ಸಮೀಪದ ಪಾರ್ಕ್‌ಗಳಲ್ಲಿ ಸಭೆ ಸೇರಿ, ತಮ್ಮ ಅನುಭವಗಳ ವಿನಿಮಯ ಮಾಡಿಕೊಳ್ಳುವ ಸಂದರ್ಭದಲ್ಲಿ ನಡೆಯುವ ವ್ಯಕ್ತಿ ಮತ್ತು ವ್ಯಕ್ತಿತ್ವಗಳ ವಿಮರ್ಶೆ ಪ್ರವಾಸ ಕಥನಕ್ಕಿಂತಲೂ ಕುತೂಹಲಕಾರಿ ಯಾಗಿದೆ. ಮೊದಲ ಬಾರಿ ಅಮೆರಿಕಾಕ್ಕೆ ಹೋಗಿದ್ದರ ನೆನಪಿಗೆ ಒಂದು ಪುಸ್ತಕ ಬರೆದಿದ್ದ ಲೇಖಕರು, ಬರೆದಿರುವ ಎರಡನೆಯ ಪುಸ್ತಕವೇ ಪ್ರಸ್ತುತ 'ಆಸುಪಾಸು'. ಅಮೆರಿಕಾ ಸಂಯುಕ್ತ ಸಂಸ್ಥಾನದ ಕ್ಯಾಲಿಫೋರ್ನಿಯಾ ರಾಜ್ಯದ ಸನ್ನಿವೇಲ್ ನಗರದ ಪ್ಯಾಂಡೊರಾಸ್ ಪಾರ್ಕ್‌ನಲ್ಲಿ ಈ ಕೃತಿಯ ಬಹುತೇಕ ಪಾತ್ರಗಳು ಸಂಧಿಸಿ, ವಿಚಾರ ವಿನಿಮಯ ಮಾಡಿಕೊಂಡಾಗ ಹತ್ತಿರವಾಗುವ ದೂರದ ಅಮೆರಿಕಾದ ಹೊರ ಮತ್ತು ಒಳಗಿನ ಪ್ರಪಂಚಗಳ ಪರಿಚಯವಾಗುತ್ತಲೇ, ಅನುಮಾನ, ಅಸಹನೆ, ಜುಗ್ಗತನ, ದರ್ಪ ಇತ್ಯಾದಿ ವಿಷಮ ಗುಣಗಳ ವಿಶ್ಲೇಷಣೆಯು ಪ್ರಪಂಚದ ಯಾವ ದೇಶವೇ ಆಗಿರಲಿ ಅಲ್ಲಿ ಶ್ರೀಮಂತಿಕೆ ಮತ್ತು ಪ್ರತಿಷ್ಠೆಗಳು ಮೇಲುಗೈ ಸಾಧಿಸುತ್ತವೆ ಎಂಬ ಕಟು ಸತ್ಯದ ಅರಿವು ಮಾಡುತ್ತದೆ.

ಹಿಂದೆ ಮೈಸೂರಿಗೆ ಅಥವಾ ಬೆಂಗಳೂರಿಗೆ ಹೊರಡುವುದೂ ಒಂದು ಸಂಭ್ರಮದ ಮಾತು. ನಂತರ ಆ ಸಂಭ್ರಮ ಕೆಲ ಕಾಲ ವಿದೇಶ ಪ್ರವಾಸಗಳಿಗೆ ವರ್ಗಾವಣೆಗೊಂಡಿತು. ಈಗ ಯಾವ ಪ್ರಯಾಣಕ್ಕೂ ಸಂಭ್ರಮವಿಲ್ಲ. ಈಗ ಅದು ಮಾಮೂಲು ಎನಿಸಿದೆ. ನಮ್ಮ ನೆರೆಯೂರಿಗೆ ಹೋಗಿಬಂದಷ್ಟೇ ಎನಿಸುತ್ತದೆ.

ಮೊದಲಿಗೆ ಪ್ರಣತಾರ್ತಿಹರನ್ ಬರೆದದ್ದು 'ಸಾನ್ಹೋಸೆಯ ನೆನಪುಗಳು'. ಈಗ ಅವರೇ ಹೇಳುವಂತೆ, ಅದರ ಮುಂದುವರಿದ ಭಾಗವಾಗಿ 'ಆಸುಪಾಸು' ಬಂದಿದೆ. ಈ ಆಸುಪಾಸಿನಲ್ಲಿ ಅಮೆರಿಕಾಕ್ಕೆ ಭಾರತವೂ ಸೇರಿದಂತೆ ಬೇರೆಬೇರೆ ದೇಶಗಳಿಂದ ಬಂದ ಜನರ ಬದುಕು, ಬವಣೆಗಳು ಮಾತ್ರವಲ್ಲದೆ ಅಮೆರಿಕಾದವರ ಬದುಕಿನ ಚಿತ್ರಣವೂ ಇದೆ.

ಮಹಾರಾಷ್ಟ್ರದ ಪಿಂಗಳೆಯವರ ಮಗಳ ಗರ್ಭದಲ್ಲಿ ಎರಡು ಮಕ್ಕಳು ಬೆಳೆಯುತ್ತಿದ್ದು, ಒಂದು ಮಗುವಿನ ಚೀಲದಲ್ಲಿದ್ದ ಸಮಸ್ಯೆ, ಒಂದನ್ನು ಉಳಿಸಲು ಇನ್ನೊಂದನ್ನು ಬಲಿ ಕೊಡಬೇಕಾದ ಮಾತು, ಎರಡು ಮಕ್ಕಳನ್ನೂ ಉಳಿಸಲು ದೇವರಿಗೆ ಹರಕೆ ಇತ್ಯಾದಿಗಳು ನಡೆದು, ಎರಡು ಮಕ್ಕಳೂ ಆರೋಗ್ಯವಾಗಿ ಬೆಳೆಯುತ್ತಿವೆ ಎಂಬ ವಿವರಗಳನ್ನು ಓದಿದ ಮೇಲೆ ನಂಬಿಕೆಗಳು ಮತ್ತು ವೈದ್ಯಕೀಯ ವಿಜ್ಞಾನಗಳ ನಡುವಿನ ತಾಕಲಾಟ ಅರ್ಥವಾಗದ್ದು ಎಂಬ ನಿಲುವಿಗೆ ಬರುವುದು ಅನಿವಾರ್ಯ ವಾಗುತ್ತದೆ. ಇಂತಹ ತಾಕಲಾಟಗಳನ್ನು ಪರಿಚಯ ಮಾಡಿಕೊಳ್ಳಲು ಈ ಕೃತಿ ನೆರವಾಗುತ್ತದೆ. ಇಂತಹ ವಿಚಾರಗಳೇ ಈ ಕೃತಿಯ ಸತ್ವವಾಗಿವೆ. ಆಸುಪಾಸಿನ ಕುಸುಮಳ ಕಥೆಯು ಅಮೆರಿಕಾದಲ್ಲಿದೆ ಎನ್ನಲಾದ ಹಣದ ಮೇಲಿನ ವ್ಯಾಮೋಹವು ಪ್ರೀತಿ ಮತ್ತು ವಿಶ್ವಾಸಗಳನ್ನು ಬಲಿ ಪಡೆಯುವ ಸನ್ನಿವೇಶಗಳನ್ನು ಗಮನಿಸಿದಾಗ, ಜಾಣೆಯಾದ ಕುಸುಮ ಅಮೆರಿಕಾದ




ಬಗ್ಗೆ ಕಂಡ ಕನಸು, ಗಂಡ ದುಗ್ಗಪ್ಪನ ಹಣದ ಲೆಕ್ಕಾಚಾರದ ಕಥೆಯನ್ನು ಹೇಳುತ್ತಲೇ ಸಂಬಂಧಗಳು ಹಣಕ್ಕಷ್ಟೇ ಸೀಮಿತವೇ ಎಂಬ ಪ್ರಶ್ನೆಯನ್ನು ಉಳಿಸುತ್ತದೆ. ಸೊಸೆಯನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು ಮತ್ತು ಆದಷ್ಟೂ ಅವಳಿಗೆ ಅವರ ಅಪ್ಪ, ಅಮ್ಮನ ಸಂಪರ್ಕ ತಪ್ಪಬೇಕು ಎಂಬುದು ಗಂಡು ಹೆತ್ತ ತಂದೆ, ತಾಯಿಯರ ಸ್ವಭಾವ ಎನಿಸಬಹುದು. ಇಂತಹ ಸ್ವಭಾವದ ಪಾತ್ರಗಳು ಅಮೆರಿಕಾಕ್ಕೆ ಹೋದರೂ ಬದಲಾಗುವುದಿಲ್ಲ ಎಂಬುದಕ್ಕೆ ಅಂಬಾಲಿಯ ಪಾತ್ರ ಒಳ್ಳೆಯ ಉದಾಹರಣೆಯಾಗಿದೆ. ಸೊಸೆ ಮತ್ತು ಬೀಗರ ಮೇಲೆ ಪತ್ತೆದಾರಿಕೆ ಮಾಡುವ ಅಂಬಾಲಿಯಂತಹ ಪಾತ್ರಗಳು ಸೊಸೆಯಂದಿರನ್ನು ಅಮೆರಿಕಾದಲ್ಲೂ ನೆಮ್ಮದಿಯಿಂದಿರಲು ಬಿಡುವುದಿಲ್ಲ ಎಂಬುದು ಯಾವ ದೇಶವಾದರೂ ಮಾನವನ ಕೆಲವು ಮೂಲ ಸ್ವಭಾವಗಳು ಬದಲಾಗುವುದಿಲ್ಲ ಎಂದು ಮನವರಿಕೆ ಮಾಡಿಕೊಡುತ್ತದೆ. ಗಂಡಿನ ದರ್ಪ ಮತ್ತು ಹುಂಬತನಗಳಿಗೆ ಮತ್ತೊಂದು ಉದಾಹರಣೆಯನ್ನು ರಾಧಾ ಪಾತ್ರದ ಮೂಲಕ ಪಡೆಯಬಹುದು. ಭಾರತದ ಹೆಣ್ಣುಗಳನ್ನು ನಂಬಿಸಿ, ಮದುವೆಯಾಗಿ ಅಮೆರಿಕಾಕ್ಕೆ ಕರೆದೊಯ್ದು, ಅಲ್ಲಿ ಶೋಷಿಸುವುದರ ಬಗ್ಗೆ ಕೇಳಿದ್ದೇವೆ. ಆ ಕೇಳಿಕೆಗಳಲ್ಲಿ ಎಷ್ಟು ಸತ್ಯ ಎಂಬ ಬಗ್ಗೆ ಅನುಮಾನಗಳಿಲ್ಲವಾದರೂ, ಅವುಗಳಿಗೆ ಸಾಕ್ಷ್ಯಗಳ ಕೊರತೆ ಇದೆ ಎನಿಸುತ್ತಿತ್ತು. 'ಆಸುಪಾಸು' ಅಂತಹ ಹಲವು ಸಾಕ್ಷ್ಯಗಳನ್ನು ದಾಖಲಿಸಿದೆ. ಕುಸುಮ, ರಾಧಾ, ಕೋಕಿಲ, ನೀತು/ಸುನೀತಳಂತಹ ಎಷ್ಟು ಜನ ಹೆಣ್ಣುಮಕ್ಕಳು ಶೋಷಣೆಗೆ ಗುರಿಯಾಗಿ ಗಂಡಿನ ದರ್ಪದ ಬಲಿಪಶುಗಳಾಗಿದ್ದಾರೋ ಲೆಕ್ಕವಿಲ್ಲ. ಅಮೆರಿಕಾದಲ್ಲಿನ ವಿವಾಹೇತರ ಸಂಬಂಧಗಳು, ಭಾರತೀಯ ಹೆಣ್ಣುಗಳ ಶೋಷಣೆ, ಹಣ ಮತ್ತು ಅಧಿಕಾರದ ದರ್ಪ ಇತ್ಯಾದಿಗಳು ಮನುಷ್ಯ ಸಂಬಂಧಗಳಿಗೆ ಸಂಬಂಧಿಸಿದ ಒಳ್ಳೆಯ ಸೂಚನೆಗಳಲ್ಲ ಎಂಬುದಕ್ಕೆ 'ಆಸುಪಾಸು' ಮತ್ತಷ್ಟು ವಿವರಣೆಗಳನ್ನೊದಗಿಸುತ್ತದೆ. ಇವರೆಲ್ಲರ ಬಗ್ಗೆ ಓದುವಾಗ ಏಕತಾನತೆ ಕಾಡಿದರೂ, ಈ ಏಕತಾನತೆಯೂ ಅನಿವಾರ್ಯ ಎನಿಸುತ್ತದೆ.

ಅಮೆರಿಕಾದಲ್ಲೂ ಗಣಪತಿ, ವೆಂಕಟೇಶ ಇತ್ಯಾದಿ ದೇವರುಗಳ ಪ್ರತಿಷ್ಠಾಪನೆ, ಹೋಮ, ಹವನ ಇತ್ಯಾದಿಗಳೆಲ್ಲಾ ಸಾಂಗವಾಗಿ ನಡೆಯುತ್ತವೆ ಎಂಬ ವಿವರಣೆಗಳನ್ನು ಕೇಳಿದಾಗ, ಹಿಂದೂ ಧರ್ಮಾಚರಣೆಗಳು ಅಮೆರಿಕಾಕ್ಕೆ ವರ್ಗಾವಣೆಯಾಗಿ ಬಲ ಪಡೆಯುತ್ತಿರುವುದು ದೇವರುಗಳಿಗೆ ಒಳ್ಳೆಯದೋ, ಅಲ್ಲಿ ನೆಲೆಸಿರುವ ಹಿಂದೂಗಳಿಗೆ ಮಾತ್ರ ಒಳ್ಳೆಯದೋ ಎಂಬ ಪ್ರಶ್ನೆಯು ಜಿಜ್ಞಾಸೆಗೆ ಅವಕಾಶ ಕಲ್ಪಿಸುತ್ತದೆ. ಆ ನಿಟ್ಟಿನಲ್ಲಿ ಪ್ರಣತಾರ್ತಿಹರನ್ ಅವರ ಕೃತಿ ಚಿಂತನಶೀಲ ಎನಿಸಿಕೊಳ್ಳುತ್ತದೆ.

ಯಾವುದೇ ದೇಶದ ಮಕ್ಕಳಿಗೆ ಕಥೆ ಕೇಳುವುದು, ಅದೂ ತಾತ ಮತ್ತು ಅಜ್ಜಿಯ ಮಾತುಗಳಲ್ಲಿ ಕಥೆ ಕೇಳುವುದು ಖುಷಿ ಕೊಡುವ ಸಂಗತಿ. ಪ್ರಣತಾರ್ತಿಹರನ್ ಅಂತಹ ಎರಡು ಕಥೆಗಳನ್ನು ಈ ಕೃತಿಯಲ್ಲಿ ಪ್ರಸ್ತಾಪಿಸಿ, ತಾವು ಉತ್ತಮ ಕಥೆಗಾರರು ಎಂಬುದನ್ನು ಸಾಬೀತುಮಾಡಿರುವುದೇ ಅಲ್ಲದೆ, ಈ ಕೃತಿಯಲ್ಲಿ ಮಕ್ಕಳಿಗೂ ಅವಕಾಶ ಕೊಟ್ಟಿದ್ದಾರೆ.

ಕೋಣಂತನಕ್ಕೆ ಉದಾಹರಣೆಯಾದ ತೋಣ್ಣೂರ್, ದಾಕ್ಷಾಯಣಿ, ಬಸವರಾಜ್, ಗಿರಿಜಾಂಬಾ, ಮಹಾದೇವಮ್ಮ, ಮಾದಯ್ಯ ಅವರ ಪಾತ್ರಗಳ ನಡುವಿನ ಸಂಘರ್ಷ, ಹಸಿಬಾಣಂತಿಯಾದ ದಾಕ್ಷಾಯಣಿಯು ಗಂಡನ ಸೇವೆಗೆ ಇಳಿಯುವ ಸಂದರ್ಭಗಳು ಇಂತಹ ಪಾತ್ರಗಳು ನಮ್ಮ ನಡುವೆಯೇ ಇವೆ ಎಂದು ಖಾತರಿಪಡಿಸುತ್ತವೆ. ಮಹಿಳೆಯರಂತೆಯೇ ಪುರುಷರೂ ಶೋಷಣೆಗೆ ಒಳಗಾಗುವುದೂ ಪ್ರಣತಾರ್ತಿಹರನ್ ಅವರ ಗಮನಕ್ಕೆ ಬಂದಿದೆ.

ಅಮೆರಿಕಾದಲ್ಲೂ ಕಸದ ಡಬ್ಬಿಯಿಂದ ಆಹಾರವನ್ನು ಎತ್ತಿಕೊಂಡು ತಿನ್ನುವ ಪರಿಸ್ಥಿತಿ ಇದೆ ಎನ್ನುವುದನ್ನೂ ಪ್ರಣತಾರ್ತಿಹರನ್ ಗಮನಿಸಿದ್ದಾರೆ. 'ಆಸುಪಾಸು'ವಿನಲ್ಲಿ ಬಹುವಾಗಿ ಕಾಡುವ ಪಾತ್ರ ೧೨ ವರ್ಷ ವಯೋಮಾನದ ಆಲಿಸನ್ ಎಂಬ ಮಗು. ಎಲ್ಲರೊಡನೆ ಹೊಂದಿಕೊಂಡು, ಪ್ರಶ್ನಿಸುವ ಮನೋಭಾವದ ಆಲಿಸನ್‌ನಂತಹ ಮಕ್ಕಳು ಪ್ರಪಂಚದ ಯಾವ ಭಾಗದಲ್ಲಿದ್ದರೂ ಪ್ರೀತಿ ಮತ್ತು ಭರವಸೆಗಳ ಕುರುಹಾಗುತ್ತಾರೆ.

'ಆಸುಪಾಸು'ವಿನಲ್ಲಿ ವಾಸ ಕಥನವಲ್ಲದೆ ಪ್ರವಾಸ ಕಥನವೂ ಇದೆ. ಲೇಖಕರು ಅನೇಕ ದೇಶಗಳ ಪ್ರವಾಸ ಮಾಡಿದ್ದಾರೆ. ಇದು ಅವರ ನಿರೂಪಣೆಯಿಂದಲೇ ತಿಳಿಯುತ್ತದೆ.

ಮೇಲ್ನೋಟಕ್ಕೆ ಪ್ರವಾಸ ಕಥನ ಎನಿಸಿದರೂ, 'ಆಸುಪಾಸು' ಕೇವಲ ಪ್ರವಾಸ ಕಥನವಾಗಿ ಮಾತ್ರವಲ್ಲದೆ ಮನುಷ್ಯ ಸಂಬಂಧಗಳ ಸಂಕೀರ್ಣ ವ್ಯವಸ್ಥೆಯ ಕೈಗನ್ನಡಿಯೂ ಆಗಿದೆ.

**ಡಾ॥ ಎಚ್. ಎಸ್. ಗೋಪಾಲ ರಾವ್**
'ಅಕ್ಷರ', ಐ. ವೈ. ಡಿ. ೨ನೇ ಅಡ್ಡರಸ್ತೆ, ಅರಸಿನಕುಂಟೆ
ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩

ಮಗು ತೊದಲು ನುಡಿಯಲು ಶುರು ಮಾಡಿದರೆ ಸಾಕು, ನಾವೆಲ್ಲಾ ಅದೆಷ್ಟು ಸಂಭ್ರಮಿಸುತ್ತೇವೆ ಎಂದರೆ ಈ ಆರಂಭಿಕ ಹಂತದಲ್ಲಿ ಮಗುವಿಗೆ ನಮಗೆ ತಿಳಿದ ಜಗತ್ತಿನ ಎಲ್ಲಾ ಭಾಷೆಗಳನ್ನು, ಎಲ್ಲಾ ಮಾತುಗಳನ್ನು ಹೇಳಿಕೊಟ್ಟು ಅದನ್ನು ಮಾತನಾಡಿಸುವ ಪ್ರಯತ್ನ ಮಾಡುತ್ತಲೇ ಇರುತ್ತೇವೆ. ಆದರೆ ಈ ಪುಟಾಣಿ ಪುಟ್ಟು ಕಂದಮ್ಮಗಳು ನೀವು ಹೇಳಿಕೊಡುವ ಭಾಷೆಗೂ ತಮಗೂ ಅದ್ಯಾವುದೇ ಸಂಬಂಧವಿಲ್ಲ ಎನ್ನುವ ರೀತಿಯಲ್ಲಿ ಭಾಷೆಯ ಹಂಗಿಗೆ ಒಳಪಡದ ಬಾಲ ಭಾಷೆಯಲ್ಲಿ ಅದೇನನ್ನೋ ಹೇಳುತ್ತಾ ಸಂಭ್ರಮಿಸುತ್ತಿರುತ್ತವೆ. ಇನ್ನು ಕೆಲವು ಮಕ್ಕಳು ಎಷ್ಟು ಮಾತನಾಡಿಸಿದರೂ ಮಾತನಾಡದೆ ಕಿರುನಗುವೇ ಅವರ ಉತ್ತರವಾದಾಗ ಹೆತ್ತವರ ಸಂಕಟ ಹೇಳತೀರದು. ತನ್ನ ಮಗುವಿಗೆ ಮಾತು ನಿಧಾನ ಅಂತ ಒಳಗೊಳಗೆ ವೇದನೆಯನ್ನು ಅನುಭವಿಸುತ್ತಿರುತ್ತಾರೆ. ಮುಂದೆ ಆ ಮಗು ಸಿಕ್ಕಾಪಟ್ಟೆ ವಾಚಾಳಿಯಾದಾಗ ಮಾತ್ರ ಹೆತ್ತವರೇ ಬಾಯಿಮುಚ್ಚಿಸಲು ಹೆಣಗಾಡಬೇಕಾಗುತ್ತದೆ. ಮಾತಾಡಿದರೂ ಕಷ್ಟ. ಆಡದಿದ್ದರೂ ಕಷ್ಟ. ಇಂತಹ ಹೊತ್ತಲ್ಲಿ ಮಾತನ್ನು ಎಲ್ಲಿ ಆಡಬೇಕು, ಎಷ್ಟು ಆಡಬೇಕು, ಮಾತಾಡದೆ, ಕೋಲುಬಸವನ ಹಾಗೆ ಯಾವಾಗ ನಿಂತಿರಬೇಕು ಎಂಬ ಗೊಂದಲ ಆವರಿಸಿಕೊಳ್ಳುವಾಗ ಮಾತನ್ನು ಹೇಗೆ ವ್ಯಾಖ್ಯಾನಿಸಬೇಕೆಂಬುದೇ ಗೊತ್ತಾಗುತ್ತಿಲ್ಲ. ಅದೇನೇ ಇರಲಿ, ಇಂತಹ ವಾದ – ವಿವಾದ, ಉತ್ತರ – ಪ್ರತ್ಯುತ್ತರಗಳು, ಮಾತು ಗೊತ್ತಿರುವುದರಿಂದ ತಾನೇ ಮಾತಿನ ಮೂಲಕ ಇವನ್ನೆಲ್ಲಾ ಹೇಳಲು ಸಾಧ್ಯ ಅಂತ ಗುಂಗಿಗೆ ಬಿದ್ದಾಗ ಮಾತ್ರ ಅಚ್ಚರಿಯಾಗುತ್ತದೆ.

# ಮಾತಿಗೊಂದು ಎಲ್ಲೆ ಎಲ್ಲಿದೆ...

ಸ್ಮಿತಾ ಅಮೃತರಾಜ್

'ಮಾನವ ಜನ್ಮ ದೊಡ್ಡದು' ಅಂತ ದಾಸರು ಇದಕ್ಕೇ ಹೇಳಿರಬೇಕು. ಯಾಕೆಂದರೆ ನಾವು ಪ್ರಾಣಿ ಪಕ್ಷಿಗಳಿಂದ, ಕ್ರಿಮಿಕೀಟಾದಿಗಳಿಂದ, ಹೆಚ್ಚೇಕೆ ಸಕಲ ಜೀವಸಂಕುಲಗಳಿಗಿಂತ ಅದೆಷ್ಟು ಭಿನ್ನವಾದರೂ, ಅವುಗಳಿಗಿಂತ ರೂಪು–ಲಾವಣ್ಯದಲ್ಲಿ ಮಿಗಿಲಾದರೂ, ಅದೆಲ್ಲಕ್ಕಿಂತ ಹೆಚ್ಚಾಗಿ ನಮಗೆ ಆಲೋಚಿಸುವ, ಯೋಚಿಸಿದ್ದನ್ನು ಹಿಂದುಮುಂದು ನೋಡದೆ ಒದರುವ, ಅಂದರೆ ಮಾತನಾಡುವ ವಿಶೇಷ ಶಕ್ತಿ ಇರುವುದರಿಂದಲೋ ಏನೋ ನಾವುಗಳು ಎಲ್ಲರ ದೃಷ್ಟಿಯಲ್ಲಿ ಕೃತಾರ್ಥರಾಗಿರುವುದು. ಇನ್ನು ಮನುಷ್ಯನಿಗೆ ಬಾಯಿ ತಿನ್ನಲು ಮಾತ್ರ ಅಲ್ಲ, ಅದು ಮಾತನಾಡುವ ಕೆಲಸ ಕೂಡ ಮಾಡುತ್ತದೆ. ಅಂದರೆ ಇದಕ್ಕಿಂತ ದೊಡ್ಡ ಭಾಗ್ಯ ಬೇರೊಂದಿಲ್ಲ. ಬಹುಶಃ ಇದಕ್ಕೇ ಇರಬೇಕೇನೋ ಮನುಷ್ಯ ಸಿಕ್ಕ ಸಿಕ್ಕ ಯಾವುದೇ ಅವಕಾಶಗಳನ್ನು ತಪ್ಪಿಸಿಕೊಳ್ಳದೆ ಅವನ್ನು ಸಮರ್ಥವಾಗಿ ಬಳಕೆ ಮಾಡಿಕೊಂಡು, ಸದುಪಯೋಗಪಡಿಸಿಕೊಳ್ಳಲೋಸುಗ ಸದಾ ಮಾತನಾಡುತ್ತಲೋ ಅಥವಾ ವಟಗುಟ್ಟುತ್ತಲೋ ಇರುವುದು. ಕೇಳುಗರು ಇದ್ದಾರೋ ಇಲ್ಲವೋ, ಅದು ನಂತರದ ಪ್ರಶ್ನೆ. ಇದು ಒಂದು ರೀತಿಯಲ್ಲಿ ಸರಿಯೆ. ಸದಾ ಮೂದೇವಿಯಂತೆ ಮೌನವಾಗಿದ್ದರೆ ಏನು ಚೆಂದ ? ಮತ್ತು ಆ ಮಾತಿಗೇನು ಅರ್ಥ ? ಅದೂ ಅಲ್ಲದೆ, ಮಾತು ಬಂದೂ ಬಾಯಿ ಬರದವರ ಹಾಗೆ ವರ್ತಿಸಿದರೆ ಏನು ಪ್ರಯೋಜನ ? ಅದಕ್ಕೇ ಇರಬೇಕು ಮಾತು ಬೆಳ್ಳಿ, ಮೌನ ಬಂಗಾರ ಅಂತ ಮೌನವನ್ನು ಅಟ್ಟಕ್ಕೇರಿಸಿ ಅದಕ್ಕೆ ಚಿನ್ನದ ಮುಕುಟ ತೊಡಿಸಿ ಕುಳ್ಳಿರಿಸಿದರೂ, ಬಂಗಾರಕ್ಕಿಂತ ತೂಕ ಕಡಿಮೆ ತೂಗಿದರೂ ಅಡ್ಡಿ ಇಲ್ಲ. ಬೆಳ್ಳಿ ಬೆಲೆಯಾದರೂ ಸಿಕ್ಕೇಸಿಗುತ್ತಲ್ಲಾ ಅಂತ ಸಮರ್ಥಿಸಿಕೊಂಡು ನಮ್ಮವರು ಹಟಕ್ಕೆ ಬಿದ್ದವರಂತೆ ಬಾಯಿ ತೆರೆದೇ ಇಟ್ಟುಕೊಂಡು ಮಾತಿಗೆ ಸಾಣೆ ಕೊಡುತ್ತಲೇ ಇರುತ್ತಾರೆ.

ಮಗು ತೊದಲು ನುಡಿಯಲು ಶುರು ಮಾಡಿದರೆ ಸಾಕು, ನಾವೆಲ್ಲಾ ಅದೆಷ್ಟು ಸಂಭ್ರಮಿಸುತ್ತೇವೆ ಎಂದರೆ ಈ ಆರಂಭಿಕ ಹಂತದಲ್ಲಿ ಮಗುವಿಗೆ ನಮಗೆ ತಿಳಿದ ಜಗತ್ತಿನ ಎಲ್ಲಾ ಭಾಷೆಗಳನ್ನು, ಎಲ್ಲಾ ಮಾತುಗಳನ್ನು ಹೇಳಿಕೊಟ್ಟು ಅದನ್ನು ಮಾತನಾಡಿಸುವ ಪ್ರಯತ್ನ ಮಾಡುತ್ತಲೇ ಇರುತ್ತೇವೆ. ಆದರೆ ಈ ಪುಟಾಣಿ ಪುಟ್ಟು ಕಂದಮ್ಮಗಳು ನೀವು ಹೇಳಿ ಕೊಡುವ ಭಾಷೆಗೂ ತಮಗೂ ಅದ್ಯಾವುದೇ ಸಂಬಂಧವಿಲ್ಲ ಎನ್ನುವ ರೀತಿಯಲ್ಲಿ ಭಾಷೆಯ ಹಂಗಿಗೆ ಒಳಪಡದ ಬಾಲ ಭಾಷೆಯಲ್ಲಿ ಅದೇನನ್ನೋ ಹೇಳುತ್ತಾ ಸಂಭ್ರಮಿಸುತ್ತಿರುತ್ತವೆ. ಇನ್ನು ಕೆಲವು ಮಕ್ಕಳು ಎಷ್ಟು ಮಾತನಾಡಿಸಿದರೂ ಮಾತನಾಡದೆ ಕಿರುನಗುವೇ ಅವರ ಉತ್ತರವಾದಾಗ ಹೆತ್ತವರ ಸಂಕಟ ಹೇಳತೀರದು. ತನ್ನ ಮಗುವಿಗೆ ಮಾತು ನಿಧಾನ ಅಂತ ಒಳಗೊಳಗೆ ವೇದನೆಯನ್ನು ಅನುಭವಿಸುತ್ತಿರುತ್ತಾರೆ. ಮುಂದೆ ಆ ಮಗು ಸಿಕ್ಕಾಪಟ್ಟೆ ವಾಚಾಳಿಯಾದಾಗ ಮಾತ್ರ ಹೆತ್ತವರೇ ಬಾಯಿಮುಚ್ಚಿಸಲು ಹೆಣಗಾಡಬೇಕಾಗುತ್ತದೆ. ಮಾತಾಡಿದರೂ ಕಷ್ಟ, ಆಡದಿದ್ದರೂ ಕಷ್ಟ. ಇಂತಹ ಹೊತ್ತಲ್ಲಿ ಮಾತನ್ನು ಎಲ್ಲಿ ಆಡಬೇಕು, ಎಷ್ಟು ಆಡಬೇಕು, ಮಾತಾಡದೆ, ಕೋಲುಬಸವನ ಹಾಗೆ ಯಾವಾಗ ನಿಂತಿರಬೇಕು ಎಂಬ ಗೊಂದಲ ಆವರಿಸಿಕೊಳ್ಳುವಾಗ ಮಾತನ್ನು ಹೇಗೆ ವ್ಯಾಖ್ಯಾನಿಸಬೇಕೆಂಬುದೇ ಗೊತ್ತಾಗುತ್ತಿಲ್ಲ. ಅದೇನೇ ಇರಲಿ, ಇಂತಹ ವಾದ–ವಿವಾದ, ಉತ್ತರ–ಪ್ರತ್ಯುತ್ತರಗಳು, ಮಾತು ಗೊತ್ತಿರುವುದರಿಂದ ತಾನೇ ಮಾತಿನ ಮೂಲಕ ಇವನ್ನೆಲ್ಲಾ ಹೇಳಲು ಸಾಧ್ಯ ಅಂತ ಗುಂಗಿಗೆ ಬಿದ್ದಾಗ ಮಾತ್ರ ಅಚ್ಚರಿಯಾಗುತ್ತದೆ.

ಒಂದಷ್ಟು ವರುಷಗಳ ಹಿಂದೆ ನಮ್ಮ ಮಾತುಗಳು ಸೀಮಿತ ಚೌಕಟ್ಟಿನೊಳಗಷ್ಟೆ ಸಾಗುತ್ತಿದ್ದವು. ಅದೂ ಮನೆಯವರ ಜೊತೆ, ತಪ್ಪಿದರೆ ನೆರೆಹೊರೆ ಮತ್ತೆ ಶಾಲೆಯಲ್ಲಿಯೇ. ನೇರ ಸಂಭಾಷಣೆಗೆ ಮತ್ತೆಲ್ಲಿಯೂ ಅವಕಾಶವಿರಲಿಲ್ಲ. ಉಳಿದಂತೆ ಪತ್ರವ್ಯವಹಾರವು ನಮ್ಮೆಲ್ಲರ ಭಾವಗಳ ರವಾನೆಗೆ, ಮೌಖಿಕ ಸಂಭಾಷಣೆಯ ಲಿಖಿತ ರೂಪಕ್ಕೆ ಮಾಧ್ಯಮವಾಗುತ್ತಿತ್ತು. ಹಾಗಾಗಿ ನಾವು ಆಡಬೇಕಾದ ಖುಷಿಯ ಸಂಗತಿಗಳನ್ನು, ನೋವಿನ ಎಳೆಯನ್ನು, ಕೌತುಕದ ಸನ್ನಿವೇಶಗಳನ್ನು, ಪ್ರೇಮಲಹರಿಯನ್ನು, ಇನ್ನು ಕೆಲವೊಮ್ಮೆ ಗೋಪ್ಯಾತಿಗೋಪ್ಯ ಗುಟ್ಟುಗಳನ್ನು ಹಾಳೆಯ ಮೇಲೆ ಬರಹಕ್ಕಿಳಿಸಿ, ರಟ್ಟಾಗದಂತೆ ಅದನ್ನು ಲಕೋಟೆಯ ಮಧ್ಯಕ್ಕೆ ತೂರಿಸಿ ಅದರ ಮೇಲೊಂದು ಅಂಚೆ ಚೀಟಿ ಅಂಟಿಸಿ, ಗಟ್ಟಿಯಾಗಿ ಗೋಂದು ಗುದ್ದಿ ಯಾರ್‍ಯಾರದೊ ಕೈಯಲ್ಲಿ ಭರವಸೆಯಿಂದ ಇಟ್ಟು ಅದನ್ನು ಪೋಸ್ಟು ಡಬ್ಬಿಯೊಳಗೆ ಇಳಿಸಲು ದುಂಬಾಲು ಬೀಳಬೇಕಿತ್ತು. ಇನ್ನು ಪೋಸ್ಟು ಮಾಡಲು ಕಳುಹಿಸಿದ

ಆಸಾಮಿಗೂ, ಅಂಚೆ ಹೊತ್ತು ತರುವ ಅಂಚೆಯಣ್ಣನಿಗೂ ದಕ್ಷಿಣೆ ರೂಪದಲ್ಲಿ ಏನಾದರೂ ಕೊಟ್ಟು ಆತನಿಗೆ ವಿಶೇಷವಾದ ಮಣೆ ಹಾಕಿದರೆ ಮಾತ್ರ ಕೆಲಸ ಸಲೀಸು. ಅಷ್ಟೆಲ್ಲಾ ಕುಣಿದರೂ ಲಕೋಟೆ ತೆಗೆದುಕೊಂಡು ಹೋದವರು ಅದನ್ನು ನೇರ ಅಂಚೆ ಡಬ್ಬಿಗೆ ಹಾಕಿಯೇ ಹಾಕುತ್ತಾರೆಂಬ ಯಾವ ಪೂರ್ಣ ಪ್ರಮಾಣದ ಖಾತ್ರಿಯಂತೂ ಇಲ್ಲ. ನಮ್ಮ ಪತ್ರಕ್ಕೆ ಆಚೆಯಿಂದ ಪ್ರತ್ಯುತ್ತರ ಬಂದ ಮೇಲಷ್ಟೇ ನಮ್ಮ ಅನುಮಾನ ಪರಿಹಾರವಾಗುವುದು. ಪಾಪ ! ಕೆಲವೊಮ್ಮೆ ನಿಯತ್ತಿನಿಂದ ಡಬ್ಬಿಗೆ ಹಾಕಿದವರೂ ಉತ್ತರ ಬರೆಯಲಾರದವರ ಬೇಜವಾಬ್ದಾರಿತನದಿಂದ ಇವರೂ ಸಂಕಷ್ಟಕ್ಕೆ ಗುರಿಯಾಗಬೇಕಾದ ಪ್ರಸಂಗ ಉಂಟಾಗುತ್ತದೆ. ಒಂದು ಸಂಭಾಷಣೆಗೆ ನಾವು ಇಷ್ಟೆಲ್ಲಾ ಹರಸಾಹಸ ಪಟ್ಟು ವಾರಗಟ್ಟಲೆ, ತಿಂಗಳುಗಟ್ಟಲೆ ಕಾಯಬೇಕಿತ್ತು. ಇನ್ನು ಅದು ತುರ್ತು ಪತ್ರವೋ, ಪ್ರೇಮ ಪತ್ರವೋ ಆಗಿದ್ದರಂತೂ ಅವರ ಕಾಯುವಿಕೆಯ ಚಡಪಡಿಕೆ ಅವರಿಗಷ್ಟೇ ಅರ್ಥವಾಗಲು ಸಾಧ್ಯ. ಆಗೆಲ್ಲಾ ಇನ್ನು ಭವಿಷ್ಯದಲ್ಲಿ ನಾವು ಮಾತನಾಡಲು ದುಡ್ಡು ತೆರಬೇಕಾದೀತು ಅಂತ ಯಾರೋ ಮಹಾನ್ ಭವಿಷ್ಯಕಾರರು ಭವಿಷ್ಯವಾಣಿ ನುಡಿದಿದ್ದಾರೆ ಅಂತ ನಮ್ಮ ಹಿರಿಯರೆಲ್ಲರೂ ಹೇಳುತ್ತಿದ್ದ ಮಾತುಗಳು ಇನ್ನೂ ನನ್ನ ಸ್ಮೃತಿಯೊಳಗೆ ಅಚ್ಚಳಿಯದೆ ಹಾಗೇ ಉಳಿದಿದೆ. ಆಗ ಆ ಭವಿಷ್ಯವಾಣಿಯ ಒಳ ಅರ್ಥ ಅವರಿಗೂ ಗೊತ್ತಿರಲಿಲ್ಲ. ನಮಗೂ ಗೊತ್ತಾಗಲಿಲ್ಲ. ದುಡ್ಡು ಕೊಟ್ಟು ಮಾತನಾಡುವುದರ ಅರ್ಥ ನಮ್ಮ ದಡ್ಡ ತಲೆಗೆ ಹೊಕ್ಕಿಯೇ ಇರಲಿಲ್ಲ. ನಾವುಗಳು ಎಷ್ಟು ಪೆದ್ದು ಅಂದರೆ ನಿಧಾನಕ್ಕೆ ಟೆಲಿಫೋನುಗಳು ಉಳ್ಳವರ ಮನೆಯ ಪಡಸಾಲೆಯ ಟೀಪಾಯಿಯ ಮೇಲೆ ಹೊದಿಕೆ ಹೊದ್ದುಕೊಂಡು ಬೆಚ್ಚಗೆ ಮಲಗಿ ಅದರೊಳಗಿಂದ ಟ್ರಿಣ್ ಟ್ರಿಣ್ ಅಂತ ರಾಗ ಕೊಯ್ಯುವಾಗಲೂ ಕೂಡ ಬೆರಗುಗಣ್ಣಿನಿಂದ ದಿಟ್ಟಿಸುತ್ತಿದ್ದೆವೇ ಹೊರತು ಅದು ಕಾಸು ಕೀಳುತ್ತಿದೆ ಅಂತ ಗೊತ್ತಾಗಿರಲಿಲ್ಲ. ಈಗ ಎಲ್ಲರ ಮನೆಯ ಎಲ್ಲ ಸದಸ್ಯರ ಕಿವಿ, ಬಾಯಿ, ಕೈ ಬಿಡುವೇ ಇಲ್ಲದೆ ಚಲನವಾಣಿಯ ಚಲನೆಯಲ್ಲಿ ಕಳೆದುಹೋಗುತ್ತಾ ಜೇಬು ಬರಿದಾಗುವುದನ್ನು ಕಂಡಾಗ ಅಂಗೈ ಅಗಲದ ನಿರ್ಜೀವ ಮೊಬೈಲ್ ನಮ್ಮ ಮಾತಿಗೂ ಬೆಲೆ ಕಟ್ಟುತ್ತದೆಯಲ್ಲಾ ಅಂತ ಅಚ್ಚರಿಯೂ ಗಾಬರಿಯೂ ಏಕಕಾಲದಲ್ಲಿ ಉಂಟಾಗುತ್ತಿದೆ. ಈ ಮೂಲಕ ಭವಿಷ್ಯವಾಣಿ ದಿಟವಾದ ಮೇಲೆ ಜ್ಯೋತಿಷ್ಯರ ಮಾತನ್ನು ಅಲ್ಲಗಳೆಯಲಾಗುವುದೇ ? ಮಾತು ಬಲ್ಲವರಾದ ನೀವೇ ಹೇಳಿ ನೋಡಿ !

ಆದರೆ ಒಂದು ಮಾತೇ ಇದೆಯಲ್ಲಾ, 'ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ' ಅಂತ. ಇದೇ ಗಾದೆ ಮಾತನ್ನು ಶಾಲೆಯಲ್ಲಿ ಪರೀಕ್ಷೆಗೆ ಟಿಪ್ಪಣಿ ಬರೆಯಲು ಕೊಡುತ್ತಿದ್ದ ಸಮಯದಲ್ಲಿ ಒಂದು ವಾಕ್ಯವೂ ಸರಿಯಾಗಿ ಬರೆಯಲು ಸುತರಾಂ ಸಾಧ್ಯವಾಗುತ್ತಿರಲಿಲ್ಲ. ಈ ಮಾತು ಈಗ ಬೆಳೆದು ದೊಡ್ಡವರಾದಂತೆ ನಮ್ಮನ್ನಾಳುವವರ ಮಾತಿನ ವೈಖರಿ ಕಂಡು ದಂಗಾದ ಮೇಲೆ, ಈಗ ಪುಟಗಟ್ಟಲೆ ಮಾತಿನ ಬಗ್ಗೆ ಬರೆಯಬಹುದಲ್ಲಾ ಅಂತ ಬೆಚ್ಚಿಬೀಳುವಂತಾಗುತ್ತದೆ. ಇನ್ನು ಕೆಲವೊಮ್ಮೆ ಮಾತಿಗೆ ಮಾತು ಬೆಳೆದು ನವಿರಾದ ಸಂಬಂಧದ ಎಳೆಯೇ ತುಂಡಾಗಿಹೋಗುವ ಎಷ್ಟೋ ಪ್ರಸಂಗಗಳೂ ಇವೆ. ಎಳವೆಯಲ್ಲಿ ಶಾಲೆಗೆ ಹೋಗುತ್ತಿರುವಾಗ ಮಾತನಾಡಿದವರ ಹೆಸರು ಬರೆಯಲು ಅಧ್ಯಾಪಕರು ಹೇಳುತ್ತಿದ್ದರು. ಕಡ್ಡಿ ಕೊಡದಿದ್ದಕ್ಕೆ ಅಥವಾ ಪೆಪ್ಪರ್‌ಮೆಂಟ್ ಒಬ್ಬನೇ ಚೀಪಿ ತಿಂದದ್ದಕ್ಕೆ ಕೋಪಿಸಿಕೊಂಡು ಅವರ ಹೆಸರು ಬರೆಯುವುದರ ಮೂಲಕ ಮಕ್ಕಳು ಅವರ ಮೇಲಿನ ಕೋಪವನ್ನು ತೀರಿಸಿಕೊಳ್ಳುವುದು ಸಾಮಾನ್ಯವಾಗಿತ್ತು. ಹಾಗಾಗಿ ಕೆಲವೊಮ್ಮೆ ಮೌನವೇ ಮೂರ್ತಿವೆತ್ತ ಮಕ್ಕಳು ಕೂಡ ಸುಖಾಸುಮ್ಮನೆ ಮಾತನಾಡಿದವರ ಪಟ್ಟಿಗೆ ಸೇರಿಬಿಡಬಹುದಾದ ಸಂಭವನೀಯತೆಗೆ ಅವರ ಜಿಪುಣತನ ಒಂದು ನೆವವಾಗುತ್ತಿತ್ತಷ್ಟೆ. ಪ್ರೈಮರಿ ದಾಟಿದ ತಕ್ಷಣ ಅವೆಲ್ಲಾ ಮರೆತುಹೋದವರಂತೆ ಮಕ್ಕಳೆಲ್ಲರೂ ಏಕಾಏಕಿ ಪ್ರಬುದ್ಧತೆಯನ್ನು ಆವಾಹಿಸಿಕೊಳ್ಳುತ್ತಾರೆ. ತರಗತಿಯಲ್ಲಿ ಸಿಕ್ಕಾಪಟ್ಟೆ ವಾಚಾಳಿಯಂತೆ ವಟಗುಟ್ಟಿದರೂ ಕೂಡ ಅವರ ಹೆಸರು ಬರೆದು ನೋಯಿಸಲಾರದಷ್ಟು ಹೃದಯವೈಶಾಲಿಗಳಾಗಿ ಬಿಡುತ್ತಾರೆ. ಹೀಗೆ ಆಡಿದ ಒಂದು ಮಾತು ಎಷ್ಟೊಂದು ಒಳ್ಳೆಯ ಕೆಲಸಗಳಿಗೆ ಕಾರಣವಾಗುತ್ತದೆಯೋ ಅದರಿಂದ ಅಷ್ಟೇ ಅನಾಹುತ ಆಗುತ್ತದೆಯೆಂಬುದನ್ನು ನಾವು ಅಲ್ಲಗಳೆಯುವಂತಿಲ್ಲ. 'ಕೊಟ್ಟ ಮಾತಿಗೆ ತಪ್ಪಲಾರೆನು' ಅಂತ ವಚನ ಪಾಲಿಸಿದ ಕಾಮಧೇನು ಗೋವಿನ ಕತೆ ಎಲ್ಲರಿಗೂ ಆದರ್ಶವೆ. ತೊಟ್ಟ ಬಾಣವ ಮತ್ತೆ ತೊಡಲಾರೆನು ಅಂತ ಮಾತು ಕೊಟ್ಟ ಕರ್ಣನದೂ ಅಷ್ಟೇ ಉದಾರ ವ್ಯಕ್ತಿತ್ವ. ಇನ್ನು ಪಾಂಚಾಲಿಗೆ ಕೌರವನ ಸಭೆಯಲ್ಲಿ ಆದ ಅನ್ಯಾಯಕ್ಕೆ ಸಿಡಿದು ಭೀಮನು ಕೋಪದಿಂದ ಉದ್ಧರಿಸಿದ ಮಾತು ಇಡೀ ಮಹಾಭಾರತದ ಕತೆಗೆ, ಉಪಕತೆಗಳಿಗೆ ಸಾಕ್ಷ್ಯಾಯಿತು. ದಶರಥನು ಕಿರಿಯ ರಾಣಿ ಕೈಕೇಯಿಗೆ ಕೊಟ್ಟ

# ಸ್ಕ್ರೀನುಗಳೇ ಜಗತ್ತಾಗಿರುವ ಹೊತ್ತಲ್ಲಿ...

ಕಾವ್ಯಲೋಕ



ಎಲ್ಲರ ಎದೆಯ ಮೇಲೂ
ಸವಾರಿ ಹೊರಟಿರುವ
ಅಸಹನೆಯೇ,
ತುಸುವಾದರೂ ವಿಶ್ರಮಿಸು.

ಫೇಸ್‌ಬುಕ್ಕು, ವಾಟ್ಸ್ಯಾಪ್ಪು
ಅದು ಇದು
ಎಲ್ಲದರಿಂದಲೂ ಹೊರ ಬಂದು
ರೋದಿಸುವವರ ಲೋಕದ
ದನಿ ಆಲಿಸು.

ನಿನ್ನೆ ಅಲ್ಲಿದ್ದವರು
ಇಂದು ಇಲ್ಲಿಯೂ ನಿಂತು
ಭಾಷಣ ಬಿಗಿಯುವರು.
ಅಲ್ಲಿದ್ದಾಗ ಇವರ ಕುರಿತು
ಇಲ್ಲಿದ್ದಾಗ ಅವರ ಮೇಲೆ
ನಿನ್ನನ್ನೇ ಕಾರುವರು.

ಎಲ್ಲರ ಮಿದುಳಿಗಿಳಿದ
ಅಹಂಕಾರವೇ,
ಒತ್ತುವರಿ ತೆರವುಗೊಳಿಸಿ
ಒಂದಿಷ್ಟು ಸಹನೆಗೂ
ಸ್ಥಳಾವಕಾಶ ಕಲ್ಪಿಸು.

'ಸ್ಕ್ರೀನು'ಗಳೇ
ಜಗತ್ತಾಗಿರುವ ಹೊತ್ತಲ್ಲಿ
ಸರಾಗವಾಗಿ
ಎಲ್ಲೆಡೆಯೂ ತೂರಿಕೊಳ್ಳುವ
ಅಸಹನೆಯೇ,
ನಿನ್ನೊಳಗಿನ ಅಹಂಕಾರದ ಬಗೆಗೆ
ಇನಿತಾದರೂ ಅಸಹನೆ ಬೆಳೆಸಿಕೋ !

**ಎಚ್. ಕೆ. ಶರತ್**
ಇ/ಮ : ಜೆ. ಆರ್. ಕೆಂಚೇಗೌಡ, ನಂ. ೩೨
ಡೆಂಟಲ್ ಕಾಲೇಜು ಹಿಂಭಾಗ, ವಿವೇಕಾನಂದ ರಸ್ತೆ
ವಿದ್ಯಾನಗರ, ಹಾಸನ – ೫೭೩ ೨೦೨

ಮಾತಿನಿಂದ ದೊಡ್ಡ ರಾಮಾಯಣವೇ ಆಗಿ ನಾವು ಅಷ್ಟು ಉದ್ದಕ್ಕೂ ಅಡ್ಡಕ್ಕೂ ಓಡಿಸಿಕೊಂಡು ಓದಿದರೂ ಮುಗಿಯದೆ ಇರುವುದನ್ನು ಕಂಡಾಗ ಮಾತ್ರ ಮಾತಿನ ಧೀಶಕ್ತಿ, ಮಾತಿನ ಪರಂಪರೆ ನಮಗೆ ವ್ಯಕ್ತವಾಗುತ್ತದೆ. ಹಾಗಾಗಿ ಮಾತೇ ಎಲ್ಲದಕ್ಕೂ ಮೂಲ. ಮಾತೇ ಸರ್ವತ್ರ ಸಾಧನಂ. ಇಷ್ಟೆಲ್ಲಾ ಅರಿವಿದ್ದರೂ ನರಮನುಷ್ಯ ಅರೆ ಗಳಿಗೆ ಮಾತಿಲ್ಲದೆ ಬದುಕಲು ಕ್ಷಣ ಮಾತ್ರವೂ ಸಾಧ್ಯವಿಲ್ಲವೇನೊ.

ಬಾಲ್ಯದಲ್ಲಿ ನಮ್ಮ ಮನೆಯಿಂದ ಒಂದಷ್ಟು ಅನತಿ ದೂರದ ಒಂದು ಮನೆಯಲ್ಲಿದ್ದ ಅಜ್ಜ ಸರಿಯಾಗಿ ಮಧ್ಯಾಹ್ನದ ಹೊತ್ತಿಗೆ ಒಂದಷ್ಟು ದೂರ ನಡೆದುಕೊಂಡು ಹೋಗಿ ಏನನ್ನೋ ಗಂಟಲೊಳಗೇ ಮಾತನಾಡುತ್ತಾ ಬಂದು ಒಂದು ಮರದ ಬಳಿ ನಿಂತು ಕಲ್ಲನ್ನೆಸೆದು ಬರುತ್ತಿದ್ದರು. ಸ್ವಲ್ಪ ಹೊತ್ತಿನ ಬಳಿಕ ಅಜ್ಜನ ಹೆಂಡತಿಯೂ ಹೀಗೇ ಬಾಯಲ್ಲಿ ಏನನ್ನೋ ಮಣಮಣಿಸುತ್ತಾ ಹಾಗೇ ಬಂದು ಮಾಡಿ ಹೋಗುತ್ತಿದ್ದರು. ಎಷ್ಟೋ ಬಾರಿ ಸದ್ದಿಲ್ಲದೆ ಅವರ ಮಾತಿನ ಮರ್ಮವನ್ನು ಕದ್ದಾಲಿಸಬೇಕೆಂದು ಅವರ ಹಿಂದೆ ಕಳ್ಳ ಹೆಜ್ಜೆ ಹಾಕಿಕೊಂಡು ಹೋದರೂ ಅವರ ಮಾತಿನ ಜಾಡನ್ನ ನಮ್ಗ್ಯಾರಿಗೂ ಅರ್ಥೈಸಲು ಸಾಧ್ಯವಾಗಲಿಲ್ಲ. ಬಹುಶಃ ಅದು ಅರ್ಥವಾಗುವ ಪ್ರಾಯ ಕೂಡ ನಮ್ಮದಾಗಿರಲಿಲ್ಲವೇನೊ. ಆದರೆ ಯಾರೊಂದಿಗೂ ಮಾತನಾಡಲಿಚ್ಛಿಸದ ಆ ವೃದ್ಧರು ತಮ್ಮ ಅಸಹಾಯಕತೆಯನ್ನು ಈ ಮೂಲಕ ವ್ಯಕ್ತಪಡಿಸುತ್ತಿದ್ದರೇನೊ ಅಥವಾ ನರಮನುಷ್ಯರಿಗಿಂತ ಪ್ರಕೃತಿಯೊಂದಿಗಿನ ಸಂವಾದವೇ ಲೇಸು ಅಂತ ಅವರು ಮನಗಂಡಿರಬೇಕೇನೋ.

*ನುಡಿದಡೆ ಮುತ್ತಿನ ಹಾರದಂತಿರಬೇಕು*
*ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು*
*ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು*
*ನುಡಿದಡೆ ಲಿಂಗ ಮೆಚ್ಚಿ ಅಹುದಹುದೆನಬೇಕು*

– ಎಂದು ನಮ್ಮ ವಚನಕಾರರು ಮಾತಿನ ಔಚಿತ್ಯವನ್ನು ತೆರೆದಿಟ್ಟಿರುವರು. ನಾವುಗಳು ಕೂಡ ಅಹುದಹುದು ಅಂತ ತಲೆ ಅಲ್ಲಾಡಿಸುತ್ತಾ ಬೇರೆಯವರಿಂದ ಇದೇ ಮಾತನ್ನು ನಿರೀಕ್ಷಿಸುತ್ತೇವೆ. ಆದರೆ ನಮ್ಮ ಮಾತು ಮೇರೆ ಮೀರಿ ಉಕ್ಕಿ ಹರಿದರೂ ತೊಂದರೆಯಿಲ್ಲ, ಆದರೂ ಮಾತೇ ಮಾಣಿಕ್ಯ ಅಂತ ಉಪದೇಶ ಕೊಡುವುದರಲ್ಲಿ ನಾವ್ಯಾರೂ ಹಿಂದೆ ಬಿದ್ದಿಲ್ಲ. ಜಂಗಮವಾಣಿ ಅವತ್ತು ಮನೆಯಲ್ಲಿ ಕುಳಿತಿದ್ದ ಸಮಯದಲ್ಲಿ ಅದರ ಮುಖೇನಾ ಉಭಯ ಕುಶಲೋಪರಿ ಮಾಡುತ್ತಾ ಸ್ಟೌವಿನ ಮೇಲೆ ಹಾಲು ಉಕ್ಕಿ ಹರಿದದ್ದೇನು ? ಸಾರು, ಪಲ್ಯ ಸೀದುಹೋದದ್ದೇನು ? ಮಾತಿನ ಭರಾಟೆಯಲ್ಲಿ ಬೆಂಕಿಯೇ ನಂದಿಹೋಗಿ, ಮಧ್ಯಾಹ್ನದ ಹೊತ್ತಿಗೂ ಅಡುಗೆ ತಯಾರಾಗದೆ ಹೊಟ್ಟೆಯೊಳಗೆ ಬೆಂಕಿ ಹತ್ತಿದ್ದೇನು ? 'ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು' ಅನ್ನೋ ಗಾದೆ ಮಾತು ಚಲನವಾಣಿ ಬಂದ ಮೇಲೆ ಮಾತ್ರ ಸುಳ್ಳಾಗಿಬಿಟ್ಟಿತು. ಚಲನವಾಣಿಯ ವಯರನ್ನು ಕಿವಿಯ ತೂತಿನೊಳಗೆ ತೂರಿಸಿಕೊಂಡು ನಮ್ಮ ಸಮಸ್ತ ಕೆಲಸಗಳನ್ನು ಏಕಕಾಲದಲ್ಲಿ ಪೂರೈಸಿಕೊಳ್ಳುವಾಗ... ಮಾತು ಮನೆ ಕೆಡಿಸುತ್ತದೆಯೇನೋ ಗೊತ್ತಿಲ್ಲ. ಆದರೆ ತೂತು ಒಲೆಯನ್ನು ಕೆಡಿಸಲಾರದಷ್ಟು ನಿಗಾವಹಿಸಲು ಮಾತ್ರ ಸಾಧ್ಯವಾಗುತ್ತದೆ.

ಮೊನ್ನೆ ಬಾಲ್ಯ ಕಾಲದ ಸಖಿಯೊಬ್ಬಳು ಸುದ್ದಿಯಿಲ್ಲದೆ ಧುತ್ತನೆ ಮನೆಯೊಳಗೆ ಬಂದಿಳಿದಿದ್ದಳು. ಬರುವಾಗ ಮಾತಿನ ಮೂಟೆಯನ್ನೇ ಅದೃಶ್ಯವಾಗಿ ಬೆನ್ನಲ್ಲಿ ಹೇರಿಕೊಂಡು ಬಂದಿದ್ದಳೇನೋ. ಹಗಲಿಡೀ ಮಾತನಾಡಿದೆವು. ಆದರೂ ಮುಗಿಯಲಿಲ್ಲ. ರಾತ್ರೆ ನಿದ್ದೆ ಮರೆತು ಕಣ್ಣು ತೂಕಡಿಸುವವರೆಗೂ ಮಾತನಾಡುತ್ತಾ ಮಾತನಾಡುತ್ತಾ ನಡುನಡುವೆ ಎಚ್ಚರವಾದಾಗ ಕನಸಿನಲ್ಲೋ ಎಂಬಂತೆ ಎದ್ದು ಕುಳಿತು ಮಾತನಾಡತೊಡಗಿದೆವು. ಆಡಿದಷ್ಟೂ ಮುಗಿಯದ ಮಾತು ಅದು ಎಲ್ಲಿಂದ ಪುತಪುತನೇ ಹೊರಬೀಳುತ್ತದೋ ವಾಗ್ದೇವಿಗಷ್ಟೇ ಗೊತ್ತಿರುವ ಸತ್ಯ. ತದನಂತರ ನಾವಾಡಿದ ಮಾತನ್ನ ಪುನರವಲೋಕಿಸಿದರೆ ಯಾವುದೂ ನೆನಪಿನಲ್ಲಿ ಉಳಿಯುವಂಥ ಮಾತೇ ಇರುವುದಿಲ್ಲ. ಅಂತೂ ಇಂತೂ ಬಾಯಿ ಬಿಟ್ಟರೆ ಪುಂಖಾನುಪುಂಖ ವಸ್ತು ವಿಷಯಗಳ ಮಾತುಗಳಿಗೆ ನಮ್ಮವರಲ್ಲಿ ಬರವೇನಿಲ್ಲ.

## ಕನಸುಗಳು



ಮರಳಿವೆ ಕನಸುಗಳು ನಗೆಯ ಅರಳಿಸುತ,
ಮರಳಿವೆ ಕನಸುಗಳು ಕತ್ತಲೆಯ ಬೆಳಗುತ,
ಮರಳಿವೆ ಕನಸುಗಳು ಮತಿಗೆ ಭ್ರಮೆಯ ಸವರುತ,
ಮರಳಿವೆ ಕನಸುಗಳು ನೆನಪುಗಳ ಕನವರಿಸುತ,
ರೆಪ್ಪೆಯಂಚನು ತಾಕಿ ಚಿಟ್ಟೆಯಾಗಿ ಹಾರುತ,
ಮನವನು ಮಾಯಾಲೋಕಕ್ಕೆ ಸೆಳೆಯುತ,
ನೂರಾರು ವರ್ಣಗಳ ಮಿಂಚನ್ನು ಹಚ್ಚುತ,
ಮರಳಿವೆ ಕನಸುಗಳು ಬದುಕಿಗೆ ಜೀವಂತಿಕೆಯ ಸ್ಪರ್ಶ ನೀಡುತ.

**ಅಪೂರ್ವ ಹಿರೇಮಠ**
ಬಾಪೂಜಿ ನಗರ, ಕೂಡ್ಲಿಗಿ – ೫೮೩ ೧೩೫

ಅದಕ್ಕೇ ಮಾತಿಗೊಂದು ಎಲ್ಲೆ ಎಲ್ಲಿದೆ, ನಿನ್ನಾಸೆಗೆಲ್ಲಿ ಕೊನೆಯಿದೆ ಅಂತ ಎಲ್ಲೆ ಇರದ ಮಾತಿಗೂ ಕೊನೆ ಇರದ ಆಸೆಗೂ ಬಂಧ ಬೆಸೆದು ನಮ್ಮ ಗೀತರಚನಾಕಾರರು ಸೊಗಸಾದ ಪದ್ಯವನ್ನೇ ಹೊಸೆದುಬಿಟ್ಟಿರುವರು. ಮಾತನಾಡದೆ ಮಗುಮ್ಮಾಗಿ ಕುಳಿತ ಚೆಲುವೆಗೂ ಕೂಡ 'ಮಾತಾಡ್ ಮಾತಾಡ್ ಮಲ್ಲಿಗೆ...ಸಂಪಿಗೆ...ಸೇವಂತಿಗೆ... ಗುಂಪಿನಲ್ಲಿ ಕೇದಗೆ' ಅಂತ ಮೌನವಾಗಿ ಅರಳುವ ಹೂವಿಗೆ ಹೋಲಿಸುತ್ತಾ ಚೆಲುವೆಯ ಮೌನವನ್ನು ನಮ್ಮ ಜಾನಪದರು ಮಾತಾಗಿಸಲು ಪ್ರಯತ್ನಿಸಿದ್ದಾರೆ. ಮಾತಾಗು ಮನವೇ ಅಂತ ಕಾಡುವ ಮೌನದೊಂದಿಗೆ ಕವಿ ಆರ್ದ್ರವಾಗಿ ಅಲವತ್ತುಕೊಳ್ಳುತ್ತಾನೆ. ಮಾತಿಲ್ಲದೆ ನಾವ್ಯಾರೂ ಬದುಕಲು ಸಾಧ್ಯವಿಲ್ಲ ಅಂತ ಬಡಬಡಿಸುತ್ತಿರುವಾಗ, ಸರಿಯಾದ ಸಮಯದಲ್ಲಿ, ಸರಿಯಾದವರ ಜೊತೆಗೆ ನಾವು ಆಡಲೇಬೇಕಾದ ಮಾತನ್ನು ಆಡುತ್ತಿದ್ದೇವಾ... ಅಂತ ನೆನೆಪಿಸಿಕೊಂಡರೆ ದಿಗಿಲಾಗುತ್ತದೆ. ಇವತ್ತು ಉದ್ಯೋಗಸ್ಥ ದಂಪತಿಗಳ ಕುಟುಂಬಗಳಲ್ಲಿ ಗಂಡನಿಗೆ ರಾತ್ರೆ ಪಾಳಿಯಾದರೆ ಹೆಂಡತಿಗೆ ಹಗಲು ಪಾಳಿ. ಈ ನಡುವೆ ಅವರು ಮಾತನಾಡುವುದು ಒತ್ತಟ್ಟಿಗಿರಲಿ, ಒಬ್ಬರಿಗೊಬ್ಬರ ದರ್ಶನ ಭಾಗ್ಯವೇ ಕಷ್ಟಸಾಧ್ಯ. ವಾರದ ಕೊನೆಯಲ್ಲಿ ಒಟ್ಟಾದರೂ ದುಡಿದು ಹೈರಾಣಾದ ಜೀವಿಗಳಿಗೆ ಸಂಯಮದಿಂದ ಮಾತನಾಡುವ ವ್ಯವಧಾನ ಕೂಡ ಇರುವುದಿಲ್ಲ. ಇಂದಿನ ಜಾಗತೀಕರಣ, ಔದ್ಯೋಗೀಕರಣದ ಭರಾಟೆಯಲ್ಲಿ ನಮ್ಮ ಮಾತು ಮೂರಾಬಟ್ಟೆಯಾಗುತ್ತಿದೆ. ಮಾತನಾಡಬೇಕಾದವರೊಂದಿಗಿನ ಮಾತಿನ ಸಮಯವನ್ನು ಅದು ಕಸಿದುಕೊಳ್ಳುತ್ತಿರುವುದು ದೊಡ್ಡ ವಿಪರ್ಯಾಸ. ಇನ್ನು ಎಷ್ಟೋ ಸಲ ನಮ್ಮ ಮಾತುಗಳು ಕಟ್ಟುಕತೆಯಾಗಿ ಅವರಿವರ ಬಾಯಿಯ ಹುರಿಗಡಲೆಕಾಳಾಗಿ, ಮುಗಿಯದ ಕಥೆಯಾಗಿ ಕೊನೆಗೆ ವ್ಯಥೆಯಾಗಿ ಪರಿಣಮಿಸುವುದನ್ನು ಕಂಡಾಗ ಮಾತ್ರ ವಿಷಾದವೆನ್ನಿಸಿ, ಇನ್ನು ಯಾವೊತ್ತೂ ತೂಕದ ಮಾತೇ ಆಡಬೇಕು, ಸಿಕ್ಕಾಪಟ್ಟೆ ಮಾತನಾಡಿ ಸಮಯವನ್ನು ಪೋಲುಮಾಡಬಾರದು ಅಂತಾನೋ ಅಥವಾ ನಮ್ಮ ಮಾತು ಹಗುರವಾಗಬಾರದು ಅಂತ ಮಗುಮ್ಮಾಗಿ ಕುಳಿತುಕೊಳ್ಳುವ ಪ್ರಯತ್ನ ಸಾಮಾನ್ಯ ಒಂದಲ್ಲ ಒಂದು ಹಂತದಲ್ಲಿ ಎಲ್ಲರೂ ಈ ತೀರ್ಮಾನಕ್ಕೆ ಬಂದೇಬಿಟ್ಟಿರುತ್ತಾರೆ. ಮತ್ತೆ ಎದೆ ಭಾರವಾಗಿ ಮಾತನಾಡಲು ಆಗದೇ ಇದ್ದರೆ ಸಾಧ್ಯವೇ ಇಲ್ಲವೇನೋ ಅನ್ನುವಷ್ಟರಮಟ್ಟಿಗೆ ಬಂದು, ನಂತರ ಲಬ ಲಬ ಅಂತ ಮಾತನಾಡಿ ಹಗುರವಾಗಿಬಿಡುತ್ತೇವೆ. ಇದೇ ಮಾತಿನ ನಡುವಿನ ಸೂಕ್ಷ್ಮ ವ್ಯತ್ಯಾಸ.

**ಸ್ಮಿತಾ ಅಮೃತರಾಜ್. ಸಂಪಾಜೆ**
'ಹಸಿರು', ಬಾಲಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲ್ಲೂಕು, ಕೊಡಗು – ೫೭೧ ೨೩೪

# ತಳ ವರ್ಗಗಳ ಪ್ರತೀಕವಾಗಿ 'ಗೊಬ್ಬರ'

**ಟಿ.** ಎಸ್. ಎಲಿಯಟ್, "ಯಾವ ಲೇಖಕನೂ ತಾನೊಬ್ಬನೇ ಅರ್ಥ ಕೊಡುವುದಿಲ್ಲ, ಅವನ ವೈಯಕ್ತಿಕ ಪ್ರತಿಭೆ, ಸ್ವಂತಿಕೆಗಳನ್ನು ಅರ್ಥ ಮಾಡಿಕೊಳ್ಳಲು ಅವನಿಗೂ ಮತ್ತು ಅವನ ಹಿಂದಿನ ಸಾಹಿತ್ಯ ಪರಂಪರೆಗೂ ಇರುವ ಸಂಬಂಧವನ್ನು ಗಮನಿಸಬೇಕಾಗುತ್ತದೆ" ಎನ್ನುತ್ತಾನೆ. ಎಲಿಯಟ್ 'ಪರಂಪರೆ' ಎಂಬ ಪದವನ್ನು 'ಇತಿಹಾಸ ಪ್ರಜ್ಞೆ' ಎಂಬ ಅರ್ಥದಲ್ಲಿ ಬಳಸುತ್ತಾನೆ.

ಈ ಸಾಲುಗಳನ್ನು ಕುವೆಂಪು ಮತ್ತು ಅವರ 'ಗೊಬ್ಬರ' ಪದ್ಯಕ್ಕೆ ಅನ್ವಯಿಸಿದಾಗ ಕುವೆಂಪು ಕನ್ನಡ ಸಾಹಿತ್ಯ ಪರಂಪರೆ ಎಂದಿರುವುದನ್ನು ಅರ್ಥೈಸಿ, ತನ್ನ ಪ್ರತಿಭೆ ಮತ್ತು ಸ್ವಂತಿಕೆಯ ಮೂಲಕ ಹೊಸದೊಂದು ಅರ್ಥವನ್ನು ಕೊಡುತ್ತಾರೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಎಲ್ಲರೂ ಪರಂಪರೆಯನ್ನು ಅರ್ಥ ಮಾಡಿಕೊಳ್ಳುತ್ತಾರೆ. ಆದರೆ ಹೇಗೆ ಅರ್ಥ ಮಾಡಿಕೊಳ್ಳುತ್ತಾರೆ ಮತ್ತು ಅವರ ಅಭಿವ್ಯಕ್ತಿಯ ವಿಚಾರ, ವೈಧಾನಿಕತೆ ಎಂಥದ್ದು ಎಂಬುದರ ಮೇಲೆ ಭವಿಷ್ಯ ನಿರ್ಮಾಣವಾಗುತ್ತದೆ. ಆ ಮೂಲಕ ಕಂಡುಕೊಂಡ ವಿಚಾರಗಳು ಹೊಸ ಪೀಳಿಗೆಗೆ ದಾರಿದೀಪವಾಗುತ್ತವೆ.

ಮೇಲಿನ ಚರ್ಚೆಯನ್ನು ನಾನು ತೆಗೆದುಕೊಂಡಿದ್ದು ನಮ್ಮ ಕನ್ನಡ ಸಾಹಿತ್ಯ ಪರಂಪರೆಯನ್ನು ಕುವೆಂಪು ಗ್ರಹಿಸುವ ವಿಧಾನದ ಕುರಿತು. ಕನ್ನಡ ಕಾವ್ಯ ಎಂದರೆ ಅದು ಪುರೋಹಿತಶಾಹಿಗಳ ಹಿಡಿತದಲ್ಲಿತ್ತು. ಸಾಹಿತ್ಯ ಎಂದರೆ ಶ್ರೇಷ್ಠ ಎಂದು ಕರೆಯಲಾದ ವಸ್ತು, ವ್ಯಕ್ತಿ ವಿಷಯಗಳ ವಿವಿಧ ಕಟ್ಟುಪಾಡುಗಳ ಅಭಿವ್ಯಕ್ತಿಯಾಗಿತ್ತು. ಇದಕ್ಕೆ ರಾಜಾಶ್ರಯ ಪೋಷಣೆ ನೀಡುತ್ತಿತ್ತು. ಇಲ್ಲಿ ಸಂಸ್ಕೃತ ಭಾಷೆ ಸರ್ವಾಧಿಕಾರಿ ನೆಲೆಯಲ್ಲಿ ದೇಸಿ ಭಾಷೆಗಳ ಮೇಲೆ ಸವಾರಿ ಮಾಡುತ್ತಿತ್ತು. ಇದನ್ನೇ ಡಾ॥ ಕೆ. ವಿ. ನಾರಾಯಣರವರು ಏಕ ಘನಾಕೃತಿ ಸಾಹಿತ್ಯ ಎನ್ನುತ್ತಾರೆ. ಮತ್ತೊಂದೆಡೆ, ಕ್ರೂರ ಜಾತಿವ್ಯವಸ್ಥೆ ಶೂದ್ರ ಸಮುದಾಯಗಳನ್ನು ಅಕ್ಷರಜ್ಞಾನದಿಂದ ವಂಚಿಸಿ, ಅವರ ಪ್ರತಿಭೆಯನ್ನು ಅಲ್ಲೇ ಕಮರುವಂತೆ ಮಾಡಿರುವುದು.

ಇಲ್ಲಿ ಕುವೆಂಪು ಏಕಕಾಲದಲ್ಲಿ ಎರಡು ಬಿಡುಗಡೆಗಳಿಗಾಗಿ ಹೋರಾಟ ನಡೆಸಿದ್ದಾರೆ. ಒಂದು, ಸ್ವತಃ ಶೂದ್ರರಾಗಿದ್ದ ಅವರು ಪುರೋಹಿತ ವರ್ಗದವರಿಂದ ಅಂತರ ಕಾಪಾಡಿಕೊಂಡಿದ್ದು. ಇನ್ನೊಂದು, ಪುರೋಹಿತಶಾಹಿ ಪ್ರವೃತ್ತಿ ಹಿಡಿತದಲ್ಲಿದ್ದ ಕನ್ನಡ ಕಾವ್ಯವನ್ನು ಶ್ರೀಸಾಮಾನ್ಯರ ಕನ್ನಡ ಕಾವ್ಯ ಮಾಡಲು ಯತ್ನಿಸಿದ್ದು. ಇಂತಹ ಯತ್ನದ ಹಾದಿಯಲ್ಲಿ ನಮಗೆ 'ಗೊಬ್ಬರ' ಪದ್ಯ ಮುಖ್ಯವೆನಿಸುತ್ತದೆ.

ಈ ಪದ್ಯದಲ್ಲಿ ಕುವೆಂಪು ಎತ್ತಿಕೊಳ್ಳುವ ಮುಖ್ಯ ಪ್ರಶ್ನೆಗಳು ಕಾವ್ಯದ ಕರ್ತೃ, ಕರ್ಮ ಮತ್ತು ಕರ್ಮಿಣೀ ಕುರಿತು. ಶೂದ್ರ ಕಾವ್ಯ ಬರೆಯುವುದು ತಪ್ಪೇ? ಅದು ಇಲ್ಲಿಯವರೆಗೂ ಎಲ್ಲಿತ್ತು? ಏನನ್ನು ಒಳಗೊಂಡಿತ್ತು? ಈಗ ಏನಾಗಿದೆಯೆಂಬುದನ್ನು ಹೇಳುವುದರೊಂದಿಗೆ ಕಾವ್ಯದ ವಸ್ತುವಿನ ಮಹತ್ವವನ್ನು ವಿವರಿಸುತ್ತಾರೆ.

ಗೊಬ್ಬರ ಎಂದರೆ ಏನೂ ಕೆಲಸಕ್ಕೆ ಬಾರದಿರುವುದು, ಸೆಗಣಿ ಎಂಬರ್ಥವಿದೆ. ಇದು ನಿಷ್ಪ್ರಯೋಜನದ ಉಪೇಕ್ಷ ವಾಚಕದಲ್ಲಿದೆ. ಇಲ್ಲಿ ನಮಗೆ ಗೊಬ್ಬರ ರೂಪಕವಾಗಿ ಕಾಣುತ್ತದೆ. ಇದನ್ನೇ ನಮ್ಮ ಸಮುದಾಯದ ತಳವರ್ಗಗಳ ಪ್ರತೀಕವಾಗಿ ಪರಿಭಾವಿಸ ಬಹುದು. ನಮ್ಮ ಕಲೆ, ವೃತ್ತಿ, ಕೌಶಲ್ಯ ಮುಂತಾದ ವಲಯಗಳಲ್ಲಿ ಪುರೋಹಿತಶಾಹಿ ಆಧುನಿಕವಾದ ಮೇಲು–ಕೀಳು, ಉಚ್ಚ–ನೀಚ, ಎಂಬ ಕಲ್ಪನೆಗಳನ್ನು ಕಟ್ಟಿಕೊಟ್ಟಿದೆ. ಆ ಮೂಲಕ ತಳ ಸಮುದಾಯಗಳನ್ನು ಎಲ್ಲಾ ಹಂತಗಳಲ್ಲೂ ತುಳಿಯುವ ಕೆಲಸ ಮಾಡಿವೆ ಎಂಬ ವೈಚಾರಿಕ ನಿಲುವನ್ನು ಕುವೆಂಪು ಈ ಪದ್ಯದಲ್ಲಿ ತಾಳುತ್ತಾರೆ.

'ಗೊಬ್ಬರ' ಪದ್ಯ ನಮ್ಮ ಚಾರಿತ್ರಿಕ ಕಾವ್ಯದ ಬೆಳವಣಿಗೆ ಮತ್ತು ಪಲ್ಲಟಗಳ ಕುರಿತಂತೆ ಕಂಡರೂ, ಅದು ಸಾಂಸ್ಕೃತಿಕ ಸಂಘರ್ಷಕ್ಕೆ ಎಡೆಮಾಡಿಕೊಟ್ಟಿದೆ. ಅದರೊಂದಿಗೆ ಸಂವೇದನಾ ನೆಲೆಯಲ್ಲೂ ಕಾಣಿಸಿಕೊಳ್ಳುತ್ತದೆ. ಮೇಲಾಗಿ, ಅದು ಪ್ರಜಾಪ್ರಭುತ್ವದ ಆಶಯಗಳನ್ನು ವ್ಯಕ್ತಪಡಿಸುತ್ತದೆ. ಕುವೆಂಪು ನಮಗೆ ಭಿನ್ನವಾಗಿ ಕಾಣಿಸಿಕೊಳ್ಳುವುದು ಅವರ ಸಾಮಾಜಿಕ ಆಲೋಚನಾ ಕ್ರಮಗಳಲ್ಲಿ. ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಒಮ್ಮೆ ಮೂವರು ರಾಷ್ಟ್ರ ಕವಿಗಳ ಕುರಿತ ವಿಚಾರ ಸಂಕಿರಣದಲ್ಲಿ ಡಾ॥ ಬಂಜಗೆರೆ ಜಯಪ್ರಕಾಶ್‌ರವರು ಮಾತನಾಡುತ್ತಾ, "ಕುವೆಂಪು ಸಾಹಿತ್ಯದ ವಿಶೇಷತೆ ಅಡಗಿರುವುದು ಮಾನ್ಯವಿಲ್ಲದ ವಸ್ತು–ವಿಷಯಗಳಿಗೆ ಮಾನ್ಯತೆಯನ್ನು ಕೊಡುವುದರಲ್ಲಿ" ಎನ್ನುತ್ತಾರೆ. ಇದರ ಸತ್ಯವನ್ನು ನಾನೂ ಸಹ ಕಂಡುಕೊಂಡಿದ್ದೇನೆ. ಅವರ ರೈತನ ದೃಷ್ಟಿ, ಕುಳದ ಕಲಿ, ಮುಂತಾದ ಪದ್ಯಗಳು, ಜಲಗಾರ, ಶೂದ್ರ ತಪಸ್ವಿಯಂತಹ ನಾಟಕಗಳೇ ಅಲ್ಲದೆ ಅವರ ವಿವಿಧ ಬರಹ ಪ್ರಭೇದಗಳು ಮೇಲಿನ ಮಾತನ್ನು ಸಾದರಪಡಿಸುತ್ತವೆ. ಇಂತಹುದೇ ಕೆಲಸ ವಚನಕಾರರ ಕಾಲಮಾನದಲ್ಲಿ ಕೂಡ ಆಗಿದೆ ಎಂಬುದು ಗಮನಾರ್ಹ.

ಕುವೆಂಪುರವರ ವೈಚಾರಿಕತೆ ತಳಹದಿ ಎಂದರೆ ಸಮಾನತೆಯನ್ನು ಕಾಣುವ ಮತ್ತು ಕಟ್ಟುವ ಒಂದು ಮನೋಧರ್ಮ. ಇವರ ಕಾವ್ಯ ಶ್ರಮ ಸಂಸ್ಕೃತಿಯನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ. ಅವರ ಕುಳದ ಕಲಿ ಪದ್ಯದಲ್ಲಿ 'ನೆಹರೂಗೇನೂ ಕಡಿಮೆಯೇನು ನಿನ್ನ ದೇಶಭಕ್ತಿ, ಅವರೋ ಹೆಸರು; ನೀನೋ ಉಸಿರು ನಾಡದೇವಿಗೆ' ಎಂಬ ಸಾಲು ರೈತನೊಬ್ಬ ದೇಶದ ಪ್ರಧಾನಿಗಿಂತ ಬಹುಪ್ರಧಾನ ಎಂಬ ಸಂದೇಶ ಸಾರುತ್ತದೆ. ಈ ನಿಟ್ಟಿನಲ್ಲಿ 'ಗೊಬ್ಬರ' ತಳಸಮುದಾಯವನ್ನು ಪ್ರತಿನಿಧಿಸುತ್ತಾ, ಸಮಾಜದ ಒಂದು ಅಂಗವೆಂದು ಪರಿಗಣಿಸಲು ಆಗ್ರಹಿಸುತ್ತದೆ. ಕುವೆಂಪು ತಮ್ಮ ವಸ್ತು ಮತ್ತು ಭಾಷಾ ಅಭಿವ್ಯಕ್ತಿ ಮಾಧ್ಯಮದಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ಮಾಡಿದ್ದಾರೆ. ಅಂದು ಪ್ರತಿಷ್ಠಾಪನೆಗೊಂಡ ಮೇಲುವರ್ಗದ ದಮನಿತ ಚಿಂತನೆಗಳಿಗೆ ಕುವೆಂಪು ಸವಾಲೊಡ್ಡುವಂತೆ ಪ್ರತ್ಯುತ್ತರದ ಬರವಣಿಗೆಯನ್ನು ರೂಪಿಸಿದ್ದಾರೆ.

'ಗೊಬ್ಬರ' ಪದ್ಯದ ಆರಂಭದಲ್ಲಿ ವ್ಯಂಗ್ಯದ ವರಸೆಯನ್ನು ತೋರುತ್ತಾ 'ಗೊಬ್ಬರದ ಮೇಲೆ ಪದ್ಯ ಬರೆಯುವುದೇ... ಸಾಲದೇಂ ಪ್ರಲಯಕಿದೇ ಪೀಠಿಕೆ?' ಎಂಬ ಸಾಲುಗಳು ತಳಸಮುದಾಯಗಳ ಎಚ್ಚೆತ್ತ ಸ್ಥಿತಿಯನ್ನು ಬಿಂಬಿಸುತ್ತವೆ. ಪ್ರಜಾಪ್ರಭುತ್ವದ ನಿಲುವನ್ನು ತಾಳುವ ಕುವೆಂಪು ಎಲ್ಲ ವರ್ಗಗಳಲ್ಲೂ ಅಭಿವ್ಯಕ್ತಿ ಸ್ವಾತಂತ್ರ್ಯದ ಜಾಗೃತಿಯನ್ನು ಮೂಡಿಸುತ್ತಾರೆ. ಮೇಲಾಗಿ, ಕುವೆಂಪುರವರ ಸರ್ವೋದಯ ದೃಷ್ಟಿ ಎದ್ದುಕಾಣುತ್ತದೆ. ಈ ಭೂಮಿ, ನೀರು, ಜ್ಞಾನ, ಸಂಪತ್ತು ಮತ್ತು ಅಧಿಕಾರಗಳು ಸಮುದಾಯದ ಸ್ವತ್ತು ಎಂಬುದು ನನ್ನ ಭಾವನೆ. ಆದರೆ ನಮ್ಮ ದೇಶದ ವೈದಿಕಶಾಹಿ ವ್ಯವಸ್ಥೆ ಇದನ್ನು ನಿಯಂತ್ರಿಸುವಲ್ಲಿ ಜಾಣತನ ಪ್ರದರ್ಶನ ಮಾಡಿದೆ. "ಕವಿತೆ ಭೂಪಾಲರ ಅರಮನೆಯಲ್ಲಿ ಕೈ ಕೆಸರು ಮಾಡಿಕೊಳ್ಳದೆ ಮೊಸರನುಣುತರ್ದ... ಸೆಗಣಿಗಂಪಾ ಘ್ರಾಣಿಪಂತಾಯ್ತೆ?" ಎನ್ನುವಲ್ಲಿ ಪುರೋಹಿತಶಾಹಿ ವ್ಯವಸ್ಥೆಯಲ್ಲಿ ಉಂಟಾದ ಪಲ್ಲಟವನ್ನು ಗುರುತಿಸುತ್ತಾರೆ. ಇಲ್ಲಿ ಪಂಡಿತ ಮತ್ತು ರೈತನ ನಡುವಿನ ಸಂಸ್ಕೃತಿ ಪ್ರಶ್ನೆಯಾಗಿರದೆ, ಸಂವೇದನಾ ಪ್ರಶ್ನೆಯಾಗಿ ಕೂಡ ನಮಗೆ ಕಾಣಿಸುತ್ತದೆ. ಪಂಡಿತರು ಮೊಸರುಣ್ಣುವುದಕ್ಕೂ, ರೈತ ಸೆಗಣಿ ಕಂಪನ್ನು ಆಘ್ರಾಣಿಸುವುದಕ್ಕೂ ಅಂತರವಿದೆ.

ನಮ್ಮ ಬದುಕು ನಿಂತಿರುವುದೇ ಶ್ರಮಮೂಲ ಸಮುದಾಯಗಳಿಂದ. ಸುಂದರ ಕಟ್ಟಡವೊಂದರ ನಿರ್ಮಾಣದ ಹಿಂದೆ ನಗರದ ಸ್ವಚ್ಛತೆ, ನಮ್ಮ ಆಹಾರ, ನಾವು ಧರಿಸುವ ಬಟ್ಟೆಬರೆ, ಓಡಾಡುವ ರಸ್ತೆ ಮುಂತಾದ ನಮ್ಮ ಎಲ್ಲ ಭೌತಿಕ ಅವಶ್ಯಕತೆಗಳ ನಡುವೆ ಲಿಂಗಭೇದವಿಲ್ಲದ ಶ್ರಮಜೀವಿಗಳ ಕಳ್ಳುಬಳ್ಳಿ ಸಂಬಂಧವಿದೆ. ಈ ಸಂಬಂಧದ ಕುರಿತು ಅರಿವಿಲ್ಲದೆ ಹೋದಲ್ಲಿ ನಾವು ಮನುಷ್ಯರಾಗುವುದಿಲ್ಲ, ರಾಕ್ಷಸರಾಗುತ್ತೇವೆ. ಹಾಗೆ ಕಾವ್ಯಕ್ಕೆ ಕೇವಲ ಮೋಹಜಾಲದ ಸಂಸ್ಕೃತಿಯ ಪ್ರತೀಕವಾದ ಹೂವು ಮಾತ್ರ ವಸ್ತುವಾಗುವುದನ್ನು ಕುವೆಂಪು ಒಪ್ಪುವುದಿಲ್ಲ. ಅದನ್ನೇ ಕುವೆಂಪು, "ಮರದ ತುದಿ ನಲ್ಗಂಪುವೆತ್ತು ತಂಗಾಳಿಗೊಲಿಯುವ ಹೂವೆ? ಬೇರುಗಳಿಗಿಲ್ಲದಿರೆ ಗೊಬ್ಬರಂ, ಹೇಳನೆಗೆ, ವೃಕ್ಷಕೆಲ್ಲಿಯದು ಹೂವಿನ ಹಬ್ಬ?" ಎಂದು ಪ್ರಶ್ನಿಸುತ್ತಾರೆ. ಇಲ್ಲಿ ಕೆಳಸಮುದಾಯಗಳ ವಕ್ತಾರರಾಗಿ ಕುವೆಂಪು ಮೇಲ್ವರ್ಗಗಳ ಬೇರುಗಳು ಎಲ್ಲಿ ಹರಡಿಕೊಂಡಿವೆ ಎಂಬ ಮರ್ಮವನ್ನು ಬಿಚ್ಚಿಡುತ್ತಾರೆ. ಕವಿ ಆತ್ಮವಿಶ್ವಾಸದಿಂದ, "ಹಚ್ಚಿಕೊಳ್ಳಿರೊ ಹಚ್ಚಿಕೊಳ್ಳಿ ಪರಿಮಳಂ... ನಾ ಕಣ್ಣಿಲೆ ಕಾಂಬೆ" ಎಂದು ಹೇಳುವಲ್ಲಿ ಸಂಕ್ರಮಣ ಕಾಲಗರ್ಭದಲ್ಲಿ ಎಚ್ಚೆತ್ತ ನೊಂದ ಸಮುದಾಯಗಳು ಮೆಟ್ಟಿನಿಂತು ಅಧಿಕಾರ ಹಿಡಿಯುವ ಕಾಲ ಸನ್ನಿಹಿತವಾಗಿದೆ ಎಂಬ ಆಶಾಭಾವನೆಯನ್ನು ವ್ಯಕ್ತಪಡಿಸುತ್ತಾರೆ. ಮುಂದುವರಿದು, ಗೊಬ್ಬರ ಸಿಂಹಾಸನವೇರುವ ದಿನ ಸಮಾಜದ ಕಟ್ಟಕಡೆಯ ವ್ಯಕ್ತಿಗೂ ಉನ್ನತ ಸ್ಥಾನ ದೊರೆಯುತ್ತದೆ; ಆಗ ಎಲ್ಲರಿಗೂ ಸಾಮಾನ್ಯನ ಮಹತ್ವ ತಿಳಿಯುತ್ತದೆ ಎನ್ನುತ್ತಾರೆ. ಕೊನೆಯಲ್ಲಿ, ಆರ್ಥಿಕ ವಿಚಾರವನ್ನು ಉದ್ದೇಶಿಸಿ ಸಿರಿಯನ್ನು ತರುವ ಶಕ್ತಿ ಗೊಬ್ಬರಕ್ಕೆ ಮಾತ್ರ ಇದೆ ಎನ್ನುತ್ತಾರೆ. ಕಾರಣವಿಷ್ಟೆ, ನಮ್ಮ ಆರ್ಥಿಕತೆಯ ಮೂಲ ನಿಂತಿರುವುದು ಕೆಳಸಮುದಾಯಗಳ ಶ್ರಮದಿಂದಲೇ ಎಂಬುದನ್ನು ಯಾರೂ ಮರೆಯುವಂತಿಲ್ಲ. 'ಗೊಬ್ಬರ' ಪದ್ಯ ಕೇವಲ ಕಾವ್ಯಕ್ಕೆ ಮಾತ್ರ ಧ್ವನಿಸದೆ, ಕಲೆ, ಆಹಾರ, ವೃತ್ತಿ, ಜನಾಂಗ ಕುರಿತು ನಮ್ಮ ವ್ಯವಸ್ಥೆ ರೂಪಿಸಿರುವ ತರತಮಗಳಿಗೆ ಉತ್ತರವಾಗಿ ಮೆಟ್ಟಿ ನಿಲ್ಲುತ್ತದೆ.

**ಶೆಟ್ಟಿಹಳ್ಳಿ ನಾರಾಯಣಸ್ವಾಮಿ ಎಂ.**
ಮನೆ ಸಂಖ್ಯೆ: ೩೪೬, ಅಂಚೆ ಕಛೇರಿ ಮುಂಭಾಗ, ಕೊತ್ತನೂರು ಅಂಚೆ ಬೆಂಗಳೂರು – ೭೭

**ಪ್ರೊ॥ ಸೀ. ನಾ. ಬಾಲಪ್ಪ ವಾಂಕಡೋತ**

**ಹೊ**ಸಗನ್ನಡ ಸಾಹಿತ್ಯದ ದಲಿತ ಬಂಡಾಯ ಕಾಲಘಟ್ಟದಲ್ಲಿನ ಸತ್ವಶಾಲಿ ಕವಿ ಮತ್ತು ಬರಹಗಾರ ಚೆನ್ನಣ್ಣ ವಾಲೀಕಾರ ಅವರು ಜಾನಪದ ಸಾಹಿತ್ಯ ಲೋಕದಲ್ಲಿ ಜಾನಪದ ಕವಿ, ಕಲಾಕಾರ ಹಾಗೂ ವಿದ್ವಾಂಸರಾಗಿ ತಮ್ಮನ್ನೆ ಅರ್ಪಿಸಿಕೊಂಡವರು. ಬಹುಮುಖ ವ್ಯಕ್ತಿತ್ವ ಹೊಂದಿರುವ ಚೆನ್ನಣ್ಣನವರು ಸಾಹಿತ್ಯದ ಅನೇಕ ಪ್ರಕಾರಗಳಾದ ಕಥೆ, ಕಾದಂಬರಿ, ನಾಟಕ, ವಚನ, ಡಪ್ಪಿನಾಟ, ವಿಮರ್ಶೆ, ಸಂಶೋಧನೆ ಹಾಗೂ ಸಂಪಾದನಾ ಕಾರ್ಯಗಳಲ್ಲಿ ನಿರಂತರವಾಗಿ ತೊಡಗಿಕೊಂಡಿದ್ದಾರೆ.

ಡಾ॥ ಚೆನ್ನಣ್ಣ ವಾಲೀಕಾರ ಅವರು ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ, ಪ್ರಸಾರಾಂಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿ ೨೦೦೩ರಲ್ಲಿ ನಿವೃತ್ತಿಹೊಂದಿದ್ದಾರೆ. ಇವರು ೧೯೪೩ರಲ್ಲಿ ಗುಲಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನ 'ಶಂಕರವಾಡಿ' ಗ್ರಾಮದಲ್ಲಿ ಜನಿಸಿದರು.

ಚೆನ್ನಣ್ಣನವರಿಂದ ಕನ್ನಡ ಸಾಹಿತ್ಯಕ್ಕೆ ಸಂದ ಕೊಡುಗೆ ತುಂಬ ಮೌಲಿಕವಾಗಿದೆ. ಅದರಲ್ಲೂ ವಿಶೇಷವಾಗಿ ಜಾನಪದ ಸಾಹಿತ್ಯ ಕೃಷಿಯ ನೆಲೆ–ಬೆಲೆ ವೈಶಿಷ್ಟ್ಯಗಳನ್ನು ಕುರಿತಾಗಿ ಕನ್ನಡದಲ್ಲಿ ಅಷ್ಟು ಅಧ್ಯಯನ ನಡೆದಿಲ್ಲ. ಇದನ್ನು ಗುರುತಿಸುವ ಕೆಲಸ ನಡೆಯಬೇಕಾಗಿದೆ. ಜಾನಪದ ಕ್ಷೇತ್ರದಲ್ಲಿ ಚೆನ್ನಣ್ಣನವರ ಸಾಧನೆ ಮಹತ್ವವಾದುದು.



ಸಾಹಿತ್ಯ ಶಿಷ್ಟವಾಗಿರಲಿ ಅಥವಾ ಜಾನಪದವಾಗಿರಲಿ ಇಲ್ಲಿ ಯಾವ ತತ್ತ್ವ ಅಥವಾ ಸಿದ್ಧಾಂತಗಳು ಚೆನ್ನಣ್ಣನವರ ಬರವಣಿಗೆಗೆ ಅನ್ವಯಿಸಲಾರವು. ಏಕೆಂದರೆ ಅವರದೇ ಆದ ಪ್ರತ್ಯೇಕ ಸಾಹಿತ್ಯ ಬರವಣಿಗೆ ಇದೆ. ಜಾನಪದ ಕ್ಷೇತ್ರದಲ್ಲಿ ಅವರ ಕ್ಷೇತ್ರಕಾರ್ಯ ಹಾಗೂ ಬರವಣಿಗೆ ಕ್ರಮ ಇನ್ನುಳಿದವರಿಗಿಂತ ಭಿನ್ನವಾಗಿದೆ. ಅವರ ಬದುಕು – ಬರಹಗಳ ಜಾನಪದ ಜೀವಾಳವಾಗಿದೆ. ಹಾಗಾಗಿ ಚೆನ್ನಣ್ಣ ವಾಲೀಕಾರ ಅವರನ್ನು ಹೈದ್ರಾಬಾದ್ ಕರ್ನಾಟಕ ಪ್ರದೇಶದ ವಿಶಿಷ್ಟ ಶೈಲಿಯ ಪ್ರಮುಖ ಜಾನಪದ ವಿದ್ವಾಂಸರೆಂದು ಗುರುತಿಸಲಾಗಿದೆ.

ಅವರು ತಮ್ಮ ಸಾಹಿತ್ಯದ ಎಲ್ಲಾ ಪ್ರಕಾರಗಳ ನಡುವೆಯೂ ಜನಪದ ಸಾಹಿತ್ಯಕ್ಕೆ ತೋರಿದ ಒಲವು, ಮಾಡಿದ ಕೆಲಸ ಹಾಗೂ ಕೊಟ್ಟ ಕೊಡುಗೆಯನ್ನು ಕಡೆಗಣಿಸಲಾಗದು. ಅವರ "ವ್ಯೋಮಾ ವ್ಯೋಮ" ಎಂಬ ಮಹಾಕಾವ್ಯ ಮಹಾಛಂದಸ್ಸಿನ ಮಹಾಸಂಕೀರ್ಣದ ಗಪದ್ಯದಲ್ಲಿ ರಚನೆಯಾಗಿರುವ ಕೃತಿ. ಚೆನ್ನಣ್ಣನವರು ಸುಮಾರು ಹದಿನೈದಕ್ಕೂ ಮೇಲ್ಪಟ್ಟ ಜಾನಪದ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಮತ್ತು ಅವುಗಳಲ್ಲಿ ಕನ್ನಡ ಜಗತ್ತಿನ ಸಂಸ್ಕೃತಿಯ ಮೌಲ್ಯಗಳನ್ನು ಕಟ್ಟಿಕೊಟ್ಟಿದ್ದು ವಿಶೇಷ. ಅವರ ಜಾನಪದ ಕೃತಿಗಳನ್ನು ಸೃಜನ ಮತ್ತು ಸೃಜನೇತರ ಎಂದು ವಿಭಾಗಿಸಲಾಗಿದೆ. ಜನಪದ ಡಪ್ಪಿನಾಟಗಳು ಸೃಜನವೆಂದೂ, ಜನಪದ ಸಂಶೋಧನೆ ಜನಪದ ಸಂಪಾದನೆ– ಸಂಗ್ರಹ ಹಾಗೂ ಇತರೆ ಸೃಜನೇತರವೆಂದೂ ಈ ಹಿನ್ನೆಲೆಯಲ್ಲಿ ಅವರ ಜಾನಪದ ಲೋಕದ ನೆಲೆಗಳನ್ನು ವಿವೇಚಿಸಲಾಗಿದೆ.

ವಾಲೀಕಾರರು ಸೃಜನಶೀಲ ಜನಪದ ಡಪ್ಪಿನಾಟಗಳ ಮೂಲ ಆಶಯವನ್ನು ವಿವೇಚಿಸುವುದು ಅಗತ್ಯ. 'ಸೋಮ್ರಾಯ್–ಭೀಮ್ರಾಯ್ಯ ಡಪ್ಪಿನಾಟ'ದಲ್ಲಿ ನೀತಿ, ಪ್ರೀತಿ ಮತ್ತು ಸ್ನೇಹದ ಮಹತ್ವ ಹಾಗೂ ಸ್ವಾರ್ಥಕೇಂದ್ರಿತ ಸಮಾಜಕ್ಕಿಂತ ತ್ಯಾಗಕೇಂದ್ರಿತ ಸಮಾಜದಿಂದ ಮಾತ್ರ ಹೊಸ ಮನುಷ್ಯ ಸೃಷ್ಟಿಯಾಗಲು ಸಾಧ್ಯ ಎಂಬುದನ್ನು ಎತ್ತಿ ತೋರಿಸುವ ಮಾನವೀಯ ಗುಣಗಳನ್ನು ಇಲ್ಲಿ ಕಾಣಬಹುದು. ಬದುಕಿನಲ್ಲಿ ಜಾತಿ ಮುಖ್ಯವಲ್ಲ. ಸಮಾಜದಲ್ಲಿ ಮೇಲು–ಕೀಳು, ಜಾತಿ–ವಿಜಾತಿ, ಪ್ರತಿಷ್ಠೆಗಳನ್ನು 'ಅಯ್ಯಾ ಮಾಡಿದ್ದು ಕಯ್ಯ ಮ್ಯಾಲೆಂಬ

# ಕನ್ನಡ ಜಾನಪದ ಸಾಹಿತ್ಯಕ್ಕೆ ಚೆನ್ನಣ್ಣ ವಾಲೀಕಾರರ ಕೊಡುಗೆ

**ಚೆನ್ನಣ್ಣ ವಾಲೀಕಾರ ಅವರು ಕನ್ನಡ ಸಾರಸ್ವತ ಲೋಕದಲ್ಲಿ ಕವಿಯಾಗಿದ್ದುಕೊಂಡು ಸೃಜನ, ಸಂಶೋಧನೆ, ಸಂಗ್ರಹ ಹಾಗೂ ಸಂಪಾದನೆಗಳ ಮೂಲಕ ಕನ್ನಡ ಜಾನಪದ ಸಾಹಿತ್ಯಕ್ಕೆ ಕೊಟ್ಟಿರುವ ಕೊಡುಗೆ ಗಮನಾರ್ಹವಾದದ್ದು. ಇವರ ಎಲ್ಲಾ ಜನಪದ ಕೃತಿಗಳಲ್ಲಿ ಸಾಮಾನ್ಯವಾಗಿ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಸುತ್ತಲಿನ ಜನಪದ ಸಾಹಿತ್ಯ, ಕಲೆ, ಆಚರಣೆ ಸಂಪ್ರದಾಯಗಳನ್ನು ಉಲ್ಲೇಖಿಸಿರುವುದು ಒಂದು ವೈಶಿಷ್ಟ್ಯ. ಅವರು ಯಾವುದೇ ಪಾಶ್ಚಾತ್ಯ ಅನುಕರಣೆ, ನಗರೀಕರಣ ಪ್ರಭಾವಕ್ಕೆ ಒಳಗಾಗದೆ ಜನಪದರಂತೆ ಬಾಳಿದವರು. ಬದುಕಿದಂತೆ ಬರೆದವರು. ಹಗಲಿರುಳು ಕ್ಷೇತ್ರಕಾರ್ಯದ ಮೂಲಕ ಅವರು ಜಾನಪದ ಸಾಹಿತ್ಯಕ್ಕೆ ಮಾಡಿದ ಸೇವೆ ಅನುಕರಣೀಯವಾದುದು.**

### ತಿದ್ದುಪಡಿ

ಜೂನ್ ೨೦೧೭ರ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಹರಕೆ' ಕತೆಯು ಶ್ರೀಮತಿ ಪುನೀತರವರು ಮಳೆಯಾಳಂ ಭಾಷೆಯಿಂದ ಅನುವಾದ ಮಾಡಿದ್ದಾರೆ. ಇದರ ಮೂಲ ಕತೆಗಾರ ಶ್ರೀ ಕೆ. ವಿ. ಮಣಿಕಂಠನ್.

ಡಪ್ಪಿನಾಟ'ದಲ್ಲಿ ಮಾರ್ಮಿಕ ವಿಡಂಬನೆಯ ಮೂಲಕ ಅಭಿವ್ಯಕ್ತಿಸಿದ್ದಾರೆ. ಹೆಣ್ಣೊಬ್ಬಳ ಮಹದಾಸೆಯಿಂದ ನಡೆಯುವ ಅನಾಹುತ, ಸಾವು ನೋವಿನ ದುರಂತಗಳು 'ಸಂಗ್ಯಾ ಬಾಳ್ಯ ಬರೆದ ಪತ್ತಾರ ಮಾಸ್ತರನ ಡಪ್ಪಿನಾಟ'ದಲ್ಲಿ ಚಿತ್ರಿತವಾಗಿದೆ.

ಫಿನ್ಲೆಂಡಿನ ಜನಪದ ಮಹಾಕಾವ್ಯ 'ಕಲೆವಾಲ' ಆಧಾರದ ಮೇಲೆ ಚೆನ್ನಣ್ಣನವರು 'ಕಲೆವಾಲ ಡಪ್ಪಿನಾಟ'ವನ್ನು ರಚಿಸಿದ್ದಾರೆ. ಈ ಮೂಲಕ ವಿದೇಶಿಯ ಮೂಲ ಕಥೆಯನ್ನು ಕನ್ನಡಕ್ಕೆ ಅಳವಡಿಸಿದ್ದಾರೆ. ಇಲ್ಲಿ ಪುರುಷ ಪ್ರಧಾನ ಪ್ರತಿಕ್ರಿಯೆ, ಶೌರ್ಯ, ಹಠ ಸಾಧನೆ, ತಪ್ಪೊಪ್ಪುವಿಕೆ, ಅದಕ್ಕೆ ಪಶ್ಚಾತ್ತಾಪಪಡುವುದು ಈ ಮುಂತಾದ ವಿಚಾರಗಳು ಅಭಿವ್ಯಕ್ತಿಗೊಂಡಿವೆ. 'ಇರುವೆ ಮತ್ತು ಹಾವಿನ ಡಪ್ಪಿನಾಟ'ದಲ್ಲಿ ದಲಿತ ಬಂಡಾಯದ ದಟ್ಟ ಪ್ರಭಾವವಿದೆ. ಹೊಸ ಸಮಾಜ ಕಟ್ಟಲು ಒಗ್ಗಟ್ಟು ಮುಖ್ಯ; ಅದರಿಂದ ಏನನ್ನಾದರೂ ಸಾಧಿಸ ಬಹುದೆಂಬ ಒಗ್ಗಟ್ಟಿನ ಮೂಲ ಧೋರಣೆ ವ್ಯಕ್ತವಾಗಿದೆ. 'ಸಮಗಾರ ಸಂಗಪ್ಪನ ಡಪ್ಪಿನಾಟ'ದಲ್ಲಿ ಪ್ರಜಾಪ್ರಭುತ್ವದ ರೀತಿಯಲ್ಲಿ ಸಮಗಾರನ ಮಗನೊಬ್ಬ ರಾಜನಾಗುವ ಕಥೆ ಚಿತ್ರಿತವಾಗಿದೆ. ಹೊಸ ಮನುಷ್ಯಸೃಷ್ಟಿಗೆ ಹೋರಾಟ ಮತ್ತು ಅಕ್ಷರ ಜ್ಞಾನ ಬೇಕೆಂಬ ಆಶಯ ಇದರಲ್ಲಿದೆ.

ಸಮಾಜದಲ್ಲಿ ನಡೆಯುವ ಅನ್ಯಾಯ, ಶೋಷಣೆಯ ವಿರುದ್ಧ ಪ್ರತಿಭಟಿಸುವ ಧೀರರ ಕಥೆಗಳನ್ನು ಅಭಿವ್ಯಕ್ತಿಸುವ 'ಕುನ್ನೂರ ಲಾಡಲೆ ಪಟೇಲನ ಡಪ್ಪಿನಾಟ' ಮತ್ತು 'ದಿಗ್ಗಾಂವ ನಾಯ್ಕೊಡಿ ಮಹಾದೇವಪ್ಪನ ಡಪ್ಪಿನಾಟ' ಈ ಆಟಗಳನ್ನು ವಾಸ್ತವವಾಗಿ ನಡೆದ ಘಟನೆಗಳ ಆಧಾರದ ಮೇಲೆ ರಚಿಸಿದ್ದಾರೆ. ಇವು ಸಾಮಾಜಿಕ ಕಳಕಳಿಯಿಂದ ಕೂಡಿದವುಗಳಾಗಿವೆ. ಲೋಕದೇವತೆಯಾಗಿ ಹೋಗಿರುವ ಘತ್ತರಗಿ ಭಾಗಮ್ಮನ ಕುರಿತಾದ ದಂತಕಥೆಯನ್ನಾಧರಿಸಿ 'ಘತ್ತರಗಿ ಭೀಮಶಾ ಭಾಗಮ್ಮನ ಡಪ್ಪಿನಾಟ'ವನ್ನು ರಚಿಸಿದ್ದಾರೆ. ಮೇಲು, ಕೀಳು, ಕುಲ, ಜಾತಿ ಇವು ಮನುಷ್ಯ ಸೃಷ್ಟಿಯೇ ಹೊರತು; ದೇವರ ಸೃಷ್ಟಿಯಲ್ಲವೆಂಬ ನೀತಿಯನ್ನು ಈ ಡಪ್ಪಿನಾಟಗಳು ಸಾರಿ ಹೇಳುತ್ತವೆ. 'ಅಂದೇಲಿ ಮೀನಗಾರ ಮಾಣಿಕನ ಡಪ್ಪಿನಾಟ'ವು ಅಂತರ್ಜಾತಿ ಗಂಡು – ಹೆಣ್ಣುಗಳ ಗಾಂಧರ್ವ ವಿವಾಹಕ್ಕೆ ಪ್ರೋತ್ಸಾಹ ನೀಡಬೇಕೆಂಬ ಆಶಯ ವ್ಯಕ್ತವಾಗಿದೆ. ಇಲ್ಲಿ ಸತ್ಯ – ಅಸತ್ಯ, ನ್ಯಾಯ – ಅನ್ಯಾಯಗಳನ್ನು ಮುಖಾಮುಖಿಯಾಗಿ ನೋಡಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ. 'ಕೋಳಕೂರ ಧೋಂಡಿಬಾನ ಡಪ್ಪಿನಾಟ' ದುರಂತದಲ್ಲಿ ಕೊನೆಗೊಳ್ಳುತ್ತದೆ. ಅನ್ಯಾಯಕ್ಕೆ ತಿರುಗೇಟು ನೀಡುವುದಾಗಿದೆ. ಇಲ್ಲಿ ವಿಶಿಷ್ಟ ಕ್ರಾಂತಿಕಾರಿ ಮನೋಭಾವ ಹಾಗೂ ಬಂಡಾಯದ ಧೋರಣೆಯನ್ನು ಬಲವಾಗಿ ಪ್ರತಿಪಾದಿಸಿದ್ದಾರೆ.

ಚೆನ್ನಣ್ಣ ವಾಲೀಕಾರ ಅವರು ಸೃಜನದಂತೆ ಸಂಶೋಧನೆ, ಸಂಪಾದನೆ ಹಾಗೂ ಸಂಗ್ರಹದಂತಹ ಸೃಜನೇತರ ಜನಪದ ಸಾಹಿತ್ಯದಲ್ಲಿ ಕೃಷಿ ಮಾಡಿದ್ದಾರೆ.

೧೯೯೪ರಲ್ಲಿ ಪ್ರಕಟಗೊಂಡ 'ಜಾನಪದ ಲೋಕ' ಕೃತಿಯು ಜನಪದ ಲೋಕದೊಳಗಿನ ಬೇರೆ ಬೇರೆ

ಕಾವ್ಯಲೋಕ

## ಶ್ರೀಸಾಮಾನ್ಯ

ಎರಡ್ಹೊತ್ತಿನ ಗಂಜಿಗೆ ನಿಶ್ಚಿಂತ,
ಸುತ್ತಲಿನ ಲೋಕಕ್ಕೆ ಸೀಮೆಯರಿತ
ಕಣ್ಣುಪಟ್ಟಿ, ನಗಲೂ–ಅಳಲೂ
ಸಾವಧಾನದ ಅರಿವು ಸಾಮಾನ್ಯ.

ಗಗನಕ್ಕೆ ಮುಖವಿಟ್ಟಿದ್ದು,
ಅದೆಲ್ಲೋ ಬಾಲ್ಯದ ಕನಸು.
ಭೂಮಿಯಾಳವನ್ನೇ ಭೇದಿಸಿದ್ದು
ನಿಜ, ಅವನ ಕಣ್ಣದಿಟ್ಟಿ.

ಸ್ವಂತ ಸೂರಿನ ಕನವರಿಕೆ,
ಬೆನ್ನು ಬಾಗುವುದೂ ಗಮನಿಸದೆ
ಹಲ್ಲುಗಿಂಜಿದ್ದು ಎಣಿಸಲಾಗದಷ್ಟು
ಪರಿಧಿಯೊಳಗೇ ಬಾಳುವ ಎಣಿಕೆ ಅವನದ್ದು.

ನಿಂತರೂ, ಕುಳಿತರೂ ಏನನ್ನೋ
ಹಿಡಿಯುವ, ಪಡೆಯುವ ಆತುರ, ಕಾತುರ
ದಿನಗಳಿಗೆ ಹಣದ ಮೂಲಕ ಮೌಲ್ಯ
ನಿರ್ಧರಿಸುವ ಹುನ್ನಾರ.

ಜೀವನದ ಅರ್ಥ, ಅವನಿಗನಿಸಿದಷ್ಟೇ
ನಿರ್ದಿಷ್ಟ, ಅದರಲ್ಲೇ ಸಂತೃಪ್ತ;
ಹಾರದ, ಕುಣಿಯದ, ಗಹಗಹಿಸದ
ಸಾಮಾನ್ಯ, ನಮ್ಮ ಶ್ರೀಸಾಮಾನ್ಯ !!

**ಎಂ. ಕುಸುಮ**
ನಂ. ೪೩, 'ಜಯಲಕ್ಷ್ಮಿ ನಿಲಯ,' KIMCO ಎದುರು
ಬಿ. ಎಂ. ರಸ್ತೆ, ಹಾಸನ – ೫೭೩ ೨೦೧

## ಜನನ – ಮರಣ

ಸಾವಿರ ಮರಗಳ ಮರಣ
ಆರು ಸಾಲಿನ ರಸ್ತೆಯ ಜನನ
ಚಲಿಸುವುದು ಸಾವಿರಾರು ವಾಹನ
ಎಲ್ಲದರ ಹಿಂದೊಂದೊಂದು ವಚನ
"ಮರವನ್ನು ಉಳಿಸೋಣ
ಮಳೆಯನ್ನು ತರಿಸೋಣ!"

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪

ಸಂದರ್ಭಗಳಲ್ಲಿ ಪ್ರಕಟಗೊಂಡ ಇಪ್ಪತ್ತು ಬಿಡಿ ಲೇಖನಗಳಿಂದ ಕೂಡಿದೆ. ಜನಪದದ ಎಲ್ಲಾ ಪ್ರಕಾರಗಳ ಲೇಖನಗಳು ಈ ಸಂಪುಟದಲ್ಲಿ ಕಂಡುಬರುತ್ತದೆ. ಮೌಖಿಕ, ಭೌತಿಕ, ಸಾಮಾಜಿಕ ಆಚರಣೆ, ಪ್ರದರ್ಶನ ಕಲೆಗಳು, ವೈಚಾರಿಕತೆ ಹಾಗೂ ಕನ್ನಡದಲ್ಲಿ ನಡೆದ ಜಾನಪದ ಅಧ್ಯಯನಕ್ಕೆ ಸಂಬಂಧಿಸಿದ ಮಹತ್ವದ ಮಾಹಿತಿಗಳನ್ನು ಮತ್ತು ಪ್ರಪಂಚದ ಎಲ್ಲಾ ಸಮುದಾಯದ ವಾಸ್ತವ ಬದುಕಿನ ಅನೇಕ ಪ್ರಸಂಗಗಳನ್ನು ದಾಖಲಿಸಿದ್ದಾರೆ. ಇವೆಲ್ಲವು ಚೆನ್ನಣ್ಣನವರ ವಿಸ್ತಾರವಾದ ಕ್ಷೇತ್ರಕಾರ್ಯದ ಫಲದಿಂದ ಇಲ್ಲಿಯ ಲೇಖನಗಳಲ್ಲಿ ತನ್ನತನದ ಮತ್ತು ಜನಪದರ ಬದುಕಿನ ಅನುಭವದ ಸ್ಥಿತಿಗತಿಗಳನ್ನು ಇಂದಿನ ಬದುಕಿಗೆ ಮಿಡಿಯುವಂತೆ ನಿರೂಪಿಸಿದ್ದಾರೆ. 'ಒಂದು ಗ್ರಾಮದ ಜಾನಪದೀಯ ಅಧ್ಯಯನ' ಸಂಶೋಧನ ಕೃತಿಯು ಇದೇ ವರ್ಷ ಲೋಕಾರ್ಪಣೆಗೊಂಡಿರುವುದು ವಿಶೇಷ. ಇದರಲ್ಲಿ ಒಂದು ಹಳ್ಳಿಯ ಜನಜೀವನದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ನೆಲೆಗಟ್ಟಿನಲ್ಲಿ ಆಗುವ ಬದಲಾವಣೆಯ ಸ್ವರೂಪವನ್ನು ಕಟ್ಟಿಕೊಟ್ಟಿದ್ದಾರೆ. ಚೆನ್ನಣ್ಣನವರ ಹುಟ್ಟೂರಾದ ಶಂಕರವಾಡಿ ಗ್ರಾಮದ ಇತಿಹಾಸ, ಪರಿಸರ, ಊರಿನ ರೂಪ ರಚನೆ, ಒಕ್ಕಲುತನದಲ್ಲಿ ಕಂಡುಕೊಂಡು ಹೊಸ ಬಗೆಯ ವಿಚಾರ ಹಾಗೂ ಆ ಹಳ್ಳಿಯಲ್ಲಿ ತೀವ್ರ ಗತಿಯಲ್ಲಿ ಆದ ವಿವಿಧ ಕ್ಷೇತ್ರದಲ್ಲಿಯ ಬದಲಾವಣೆಗಳು ಇವನ್ನೆಲ್ಲವನ್ನು ವೈಚಾರಿಕವಾಗಿ ಗಮನಿಸಿರುವುದೇ ಮಹತ್ವದ ಸಂಗತಿ.

'ಹೈದ್ರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ' ಇದು ೧೯೯೮ರಲ್ಲಿ ಪ್ರಥಮ ಮುದ್ರಣ ಕಂಡಿರುವ ಹಾಗೂ ಚೆನ್ನಣ್ಣನವರಿಗೆ ಪಿಎಚ್.ಡಿ. ಪದವಿಯನ್ನು ತಂದುಕೊಟ್ಟ ಸಂಶೋಧನಾ ಕೃತಿಯಾಗಿದೆ. ಚೆನ್ನಣ್ಣನವರ ಗ್ರಾಮ ದೇವತೆಗಳು, ಕೇವಲ ಹೈದ್ರಾಬಾದ್ ಕರ್ನಾಟಕಕ್ಕೆ ಸೀಮಿತವಾಗದೆ ಇಡೀ ಮಾನವ ಸಮುದಾಯಗಳ ಬದುಕಿನ ಹೋರಾಟಕ್ಕೆ ಸಂಬಂಧಿಸಿದಾಗಿದೆ ಎಂಬುದು ಸ್ಪಷ್ಟ. ಮಾನವ ಬದುಕಿನಲ್ಲಿ ಪುರೋಹಿತಶಾಹಿ, ಅಧಿಕಾರಿಶಾಹಿ, ವ್ಯಾಪಾರಶಾಹಿ ಮತ್ತು ವರ್ಣ, ವರ್ಗ, ಅಂತಸ್ತು ಹಾಗೂ ಪ್ರತಿಷ್ಠೆಯ ರಕ್ಷಣೆಗಾಗಿ ಸೃಷ್ಟಿಸಿರುವ ಸಾಮಾಜಿಕ ಅನಿಷ್ಟಗಳನ್ನು ತುಂಬ ಸೊಗಸಾಗಿ ಲೇಖಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಚೆನ್ನಣ್ಣ ವಾಲೀಕಾರ ಅವರ ಮತ್ತೊಂದು ಮಹತ್ವದ ಸಂಶೋಧನಾ ಕೃತಿ 'ಕರ್ನಾಟಕ ದೇವದಾಸಿಯರ, ಸಮಾಜೋ – ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ'ವನ್ನು ೨೦೦೧ರಲ್ಲಿ ಪ್ರಕಟಿಸಿದ್ದಾರೆ. ಸುದೀರ್ಘ ಸಂಶೋಧನೆ, ಚಿಂತನೆಯ ಪ್ರತಿಫಲ ಹಾಗೂ ಸತತ ಹತ್ತು ವರ್ಷಗಳ ಕಾಲ ಕ್ಷೇತ್ರಕಾರ್ಯಮಾಡಿ ತನ್ನ ಜೀವನಾನುಭವದಲ್ಲಿ ಕಂಡುಕೊಂಡ ದೇವದಾಸಿಯರ ಸಮಸ್ಯೆಗಳ ಸಮಗ್ರ ಚಿಂತನ – ಮಂಥನ ಮಾಡಿದ್ದಾರೆ.



'ಟೋಕ್ರೆ ಕೋಳಿ' ಕೃತಿಯ ಬಗ್ಗೆ ಹೇಳುವುದಾದರೆ ಇದೊಂದು ಜನಾಂಗೀಕ ತಲಸ್ಪರ್ಶಿಯಾದ ಸಂಶೋಧನಾ ಕೃತಿ. ಭಾರತದ ಪ್ರಾಚೀನ ಬುಡಕಟ್ಟು 'ಟೋಕ್ರೆ ಕೋಳಿ' ಜನಾಂಗದ ವಿಕಾಸ, ಇತಿಹಾಸ ಹಾಗೂ ಸಾಮಾಜಿಕ ಜೀವನ, ಧಾರ್ಮಿಕ ಪದ್ಧತಿ, ಆರ್ಥಿಕ ವ್ಯವಸ್ಥೆ, ಶೈಕ್ಷಣಿಕ ಪದ್ಧತಿ, ರಾಜಕೀಯ ನೀತಿ ಮತ್ತು ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ. ಶಿಕ್ಷಣದಿಂದ ಈ ಬುಡಕಟ್ಟು ಜನಾಂಗದ ಹೊಸ ಬದುಕು ಕಟ್ಟಲು ಸಾಧ್ಯ ಎಂಬ ನಿಲುವು ಲೇಖಕರದಾಗಿದೆ. ಟೋಕ್ರೆ ಕೋಳಿ ಜನಾಂಗದ ಬದುಕಿನ ನಾನಾ ಮಗ್ಗಲುಗಳನ್ನು ವಿಸ್ತಾರವಾಗಿ ಸಂಶೋಧನೆ ಮಾಡಿ ಅವುಗಳನ್ನು ಹೊರಹಾಕಿ ಅದರಿಂದ ಜನಾಂಗದ ಮಹತ್ವವನ್ನು ಎತ್ತಿ ಹೇಳಿದ್ದಾರೆ. ಹೀಗೆ ಚೆನ್ನಣ್ಣ ವಾಲೀಕಾರ ಅವರು ಕ್ಷೇತ್ರಕಾರ್ಯ ಕೈಗೊಂಡು ಹತ್ತು ಹಲವು ಜನಪದ ಸಂಶೋಧನ, ವಿಮರ್ಶಕ ಕೃತಿಗಳನ್ನು ಕನ್ನಡ ಜಾನಪದ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರವಾದದ್ದು.

ಚೆನ್ನಣ್ಣ ವಾಲೀಕಾರ ಅವರು ಸೃಜನ, ವಿಮರ್ಶೆ, ಸಂಶೋಧನೆಯಂತೆ ಜನಪದ ಸಂಪಾದನೆ ಮತ್ತು ಸಂಗ್ರಹದಂತಹ ಕ್ಷೇತ್ರದಲ್ಲಿಯೂ ತೊಡಗಿಕೊಂಡು ಸ್ವಲ್ಪಮಟ್ಟಿಗೆ ಕೆಲಸ ಮಾಡಿದ್ದಾರೆ. ಸಂಪಾದನೆ ಹಾಗೂ ಸಂಗ್ರಹಗಳಂತಹ ಕೆಲವು ಮಹತ್ವಪೂರ್ಣ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳೆಂದರೆ 'ಗುಲಬರ್ಗಾ ಜಿಲ್ಲೆಯ ತ್ರಿಪದಿಗಳು', 'ಗುಲಬರ್ಗಾ ಜಿಲ್ಲೆಯ ಮೊಹರಂ ಪದಗಳು' ಹಾಗೂ 'ಸಣ್ಣಾಟಗಳು' ಮುಂತಾದವುಗಳು.

ಜನಪದ ಸಂಪಾದನೆಯಲ್ಲಿ 'ಗುಲಬರ್ಗಾ ಜಿಲ್ಲೆಯ ತ್ರಿಪದಿಗಳು' ಒಂದು ವೈಶಿಷ್ಟ್ಯಪೂರ್ಣ ಕೃತಿ. ಇದು ಲೇಖಕರ ಮೊದಲ ಜನಪದ ಸಂಗ್ರಹವಾಗಿದೆ. ಹಲಸಂಗಿ ಗೆಳೆಯರ ಮತ್ತು ಚಂದ್ರಶೇಖರ ಕಂಬಾರ ಅವರ ಜನಪದ ಸಂಗ್ರಹ ಕೃತಿಗಳು ಚೆನ್ನಣ್ಣ ವಾಲೀಕಾರರ ಮೇಲೆ ದಟ್ಟವಾದ ಪ್ರಭಾವ ಬೀರಿವೆ. ಆದ್ದರಿಂದ ಅವರು ಗುಲಬರ್ಗಾ ಜಿಲ್ಲೆಯನ್ನು ಆರಿಸಿಕೊಂಡು ತ್ರಿಪದಿ ಹಾಡುಗಳನ್ನು ಸಂಗ್ರಹಿಸುವಲ್ಲಿ ಮಹತ್ಕಾರ್ಯ ಮಾಡಿದ್ದಾರೆ. ಈ ಪ್ರದೇಶದ ಆಚಾರ–ವಿಚಾರ, ರೂಢಿ ಸಂಪ್ರದಾಯಗಳು ಹಾಗೂ ಒಂದು ಜನಾಂಗದ ಸಂಸ್ಕೃತಿಯ ಪರಿಚಯವನ್ನು ಮಾಡಿಕೊಟ್ಟಿರುವುದು ವಿಶಿಷ್ಟ ಸಂಗತಿ.

ಚೆನ್ನಣ್ಣನವರ ಎರಡನೇ ಜಾನಪದ ಸಂಗ್ರಹ ಕೃತಿ 'ಗುಲಬರ್ಗಾ ಜಿಲ್ಲೆಯ ಮೊಹರಂ ಪದಗಳು'. ಇದೊಂದು ಜನಪದರ ವಿಶಿಷ್ಟ ಸಂಪ್ರದಾಯದ ಭಾವೈಕ್ಯತೆಯ ಸಂದೇಶ ಸಾರುತ್ತದೆ. ಕರ್ಬಲಾ ಪದಗಳು, ಧಾರ್ಮಿಕ ಪದಗಳು, ಸಾಮಾಜಿಕ ಪದಗಳು ಹಾಗೂ ಇತರ ಪದಗಳಿಂದ ಕೂಡಿದ ವಿಶಿಷ್ಟ ಕೃತಿಯಾಗಿದೆ. ಬಹುಮುಖ್ಯವಾಗಿ ಇದರಲ್ಲಿ ಅನ್ಯ ಸಂಸ್ಕೃತಿಯೊಂದರ ಸಂಪ್ರದಾಯ, ಆಚರಣೆಗಳನ್ನು ತುಂಬ ಸೊಗಸಾಗಿ ಚಿತ್ರಿಸಿದ್ದಾರೆ. ಮೊಹರಂ ಪದಗಳನ್ನು ಹಾಡುವ, ಕುಣಿಯುವ ಮೂಲಕ ಇತರೆ ಗ್ರಾಮದ ಜನರೆಲ್ಲರಿಗೂ ಕೋಮು ಸೌಹಾರ್ದತೆ, ಭಾವೈಕ್ಯತೆ ಇವುಗಳನ್ನು ಕಲಿಸುತ್ತದೆ ಎಂಬ ವಾಸ್ತವ ಬದುಕನ್ನು ಈ ಹಾಡುಗಳ ಮೂಲಕ ತೆರೆದಿಟ್ಟಿದ್ದಾರೆ. ಚೆನ್ನಣ್ಣನವರ ಮತ್ತೊಂದು ಸಂಪಾದನ ಕೃತಿ 'ಸಣ್ಣಾಟಗಳು'. ಇದರಲ್ಲಿ ಆರು ಸಣ್ಣಾಟಗಳು ಒಳಗೊಂಡಿವೆ. ಸಣ್ಣಾಟ ಬಯಲಾಟದ ಪ್ರಕಾರಗಳಲ್ಲಿ ಒಂದಾಗಿದೆ. ಈ ಸಣ್ಣಾಟಗಳ ರಚನೆಯಲ್ಲಿ ಮುಖ್ಯವಾಗಿ ಜನತೆಗೆ ಮನೋರಂಜನೆಯ ಜೊತೆಗೆ ನೀತಿಬೋಧನೆ ಮಾಡುವುದಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಹೀಗೆ ಚೆನ್ನಣ್ಣನವರು ಸುಮಾರು ನಾಲ್ಕಕ್ಕೂ ಹೆಚ್ಚು ಕೃತಿಗಳನ್ನು ಸಂಗ್ರಹಿಸಿ ಸಂಪಾದನೆ ಮಾಡಿರುವುದು ಸಾಧನೆಯೆ ಸರಿ.

ಒಟ್ಟಿನಲ್ಲಿ, ಚೆನ್ನಣ್ಣ ವಾಲೀಕಾರ ಅವರು ಕನ್ನಡ ಸಾರಸ್ವತ ಲೋಕದಲ್ಲಿ ಕವಿಯಾಗಿದ್ದುಕೊಂಡು, ಸೃಜನ, ಸಂಶೋಧನೆ, ಸಂಗ್ರಹ ಹಾಗೂ ಸಂಪಾದನೆಗಳ ಮೂಲಕ ಕನ್ನಡ ಜಾನಪದ ಸಾಹಿತ್ಯಕ್ಕೆ ಕೊಟ್ಟಿರುವ ಕೊಡುಗೆ ಗಮನಾರ್ಹವಾದದ್ದು. ಇವರ ಎಲ್ಲಾ ಜನಪದ ಕೃತಿಗಳಲ್ಲಿ ಸಾಮಾನ್ಯವಾಗಿ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಸುತ್ತಲಿನ ಜನಪದ ಸಾಹಿತ್ಯ, ಕಲೆ, ಆಚರಣೆ ಸಂಪ್ರದಾಯಗಳನ್ನು ಉಲ್ಲೇಖಿಸಿರುವುದು ಒಂದು ವೈಶಿಷ್ಟ್ಯ. ಅವರು ಯಾವುದೇ ಪಾಶ್ಚಾತ್ಯ ಅನುಕರಣೆ, ನಗರೀಕರಣ ಪ್ರಭಾವಕ್ಕೆ ಒಳಗಾಗದೆ ಜನಪದರಂತೆ ಬಾಳಿದವರು. ಬದುಕಿದಂತೆ ಬರೆದವರು. ಹಗಲಿರುಳು ಕ್ಷೇತ್ರಕಾರ್ಯದ ಮೂಲಕ ಅವರು ಜಾನಪದ ಸಾಹಿತ್ಯಕ್ಕೆ ಮಾಡಿದ ಸೇವೆ ಅನುಕರಣೀಯವಾದುದು.

**ಪ್ರೊ || ಸೀ. ನಾ. ಬಾಲಪ್ಪ ವಾಂಕಡೋತ**
ಸಹಾಯಕ ಪ್ರಾಧ್ಯಾಪಕರು, ವಿ. ಸಿ. ಬಿ. ಶಿಕ್ಷಣ ಸಂಸ್ಥೆಯ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ,
ಲಿಂಗಸುಗೂರು – ೫೮೪ ೧೨೨, ರಾಯಚೂರು ಜಿಲ್ಲೆ

# ನೈಸರ್ಗಿಕ ವಿಕೋಪಗಳ ಉಸ್ತುವಾರಿ
## ಕರ್ನಾಟಕ ಒಂದು ಮಾದರಿ

ಜಿ. ಎಸ್. ಶ್ರೀನಿವಾಸರೆಡ್ಡಿ
ಮತ್ತು ಸಿ. ಎನ್. ಪ್ರಭು

ಹವಾಮಾನ ಬದಲಾವಣೆ ಕುರಿತ ಅಂತರರಾಷ್ಟ್ರೀಯ ಮಂಡಳಿ ಕಾರ್ಯನಿರ್ವಹಣಾ ತಂಡ–೨ರ ವರದಿಯ ಪ್ರಕಾರ ಇತ್ತೀಚಿನ ದಿನಗಳಲ್ಲಿ ಹವಾಮಾನ ವೈಪರೀತ್ಯಗಳು ನಿಯಮಿತವಾಗಿ ಪದೇಪದೇ ಸಂಭವಿಸುತ್ತಿದ್ದು ವಿಶೇಷವಾಗಿ ಪ್ರಾದೇಶಿಕ ಮತ್ತು ಸ್ಥಳೀಯ ಪ್ರದೇಶಗಳಲ್ಲಿ ಗಣನೀಯವಾಗಿ ಹೆಚ್ಚಿದೆ, ಇದರ ಪರಿಣಾಮವಾಗಿ ಹವಾಮಾನ ಸಂಬಂಧಿತ ಪ್ರಕೃತಿ ವಿಕೋಪಗಳಾದ ಬರ, ಸಿಡಿಲುಸಹಿತ ಭಾರಿಮಳೆ, ಪ್ರವಾಹ, ಆಲಿಕಲ್ಲು ಮಳೆ, ಬಿರುಗಾಳಿ, ಚಂಡಮಾರುತ ಸಂಭವನೀಯತೆಗಳು ಹೆಚ್ಚಾಗುತ್ತಿದ್ದು ಅಪಾರ ಜೀವಹಾನಿ, ಆಸ್ತಿ ನಷ್ಟಗಳಿಗೆ ಕಾರಣವಾಗುತ್ತಿದೆ. ಸಂಯುಕ್ತ ರಾಷ್ಟ್ರಗಳ ಒಕ್ಕೂಟದ ಉನ್ನತ ಮಟ್ಟದ ಸಮಿತಿಯು – ವಿಪತ್ತು ನಿರ್ವಹಣೆ ಮತ್ತು ಸ್ಥಿತಿಸ್ಥಾಪಕ ಸಂಸ್ಥೆಯ ಸಮಿತಿ ಹವಾಮಾನ ವೈಪರೀತ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಅಗತ್ಯ ಮುಂಜಾಗ್ರತಾ ಕ್ರಮಗಳನ್ನು ಯೋಜಿಸುವುದು ಸೂಕ್ತವಾಗಿದೆಯೆಂದು ಅಭಿಪ್ರಾಯಪಟ್ಟಿದೆ.

ಜಾಗತಿಕ ಹವಾಮಾನ ಬದಲಾವಣೆಯ ಪರಿಣಾಮವಾಗಿ ಉಷ್ಣವಲಯದಲ್ಲಿ ಗಮನಾರ್ಹ ಹವಾಮಾನ ಬದಲಾವಣೆ ಹಾಗೂ ಮುಂಗಾರು ಮಾರುತಗಳಲ್ಲಿ ವ್ಯತ್ಯಯ ಉಂಟಾಗುತ್ತಿದ್ದು ಅದರಿಂದಾಗಿ ಮಳೆ ಪ್ರಮಾಣದಲ್ಲಿ ತೀವ್ರತರ ಬದಲಾವಣೆಗಳಾಗುತ್ತಿದೆ. ಚೀನಾ, ಭಾರತ ಹಾಗೂ ಆಗ್ನೇಯ ಏಷ್ಯಾ ಪ್ರದೇಶಗಳಲ್ಲಿ ಮುಂಗಾರಿನಲ್ಲಿ ಅತ್ಯಂತ ಏರಿಳಿತ ಕಂಡುಬಂದಿದೆ. ವಿಶ್ವದ ಮೂರನೇ ಒಂದು ಭಾಗದ ಜನಸಂಖ್ಯೆಯು ಮುಂಗಾರು ಮಳೆ ಅವಲಂಬಿತವಾಗಿದ್ದು, ಮುಖ್ಯವಾಗಿ ಮುಂಗಾರಿನಲ್ಲಾಗುವ ಏರಿಳಿತವು ಭಾರತದ ಮೇಲೆ ತೀವ್ರ ಪರಿಣಾಮ ಬೀರುತ್ತಿದೆ ಹಾಗೂ ವಿಕೋಪಗಳು ಸಂಭವಿಸುತ್ತಿವೆ.

ಪೆಸಿಫಿಕ್ ಸಾಗರದಲ್ಲಿ ಸಂಭವಿಸುವ ಎಲ್–ನಿನೋ ಪರಿಣಾಮಗಳಿಂದಾಗಿಯೂ ಸಹ ಮುಂಗಾರಿನಲ್ಲಿ ವೈಪರೀತ್ಯಗಳಾಗುತ್ತಿವೆ. ಮಾನ್ಸೂನ್ ಮಾರುತಗಳ ಕಾಲ, ತೀವ್ರತೆ, ಬದಲಾವಣೆ ಕುರಿತ ಅಧ್ಯಯನವು ಹವಾಮಾನ ಸಂಬಂಧಿತ ವಿಕೋಪಗಳಾದ ಬರ, ಪ್ರವಾಹಗಳನ್ನು ಅಂದಾಜಿಸಲು ಸಹಕಾರಿಯಾಗಲಿದೆ. ಹವಾಮಾನ ವೈಪರೀತ್ಯಗಳನ್ನು ಸಮಗ್ರವಾಗಿ ತಿಳಿದುಕೊಳ್ಳಲು ಸಮುದ್ರ ಮೇಲ್ಮಟ್ಟದ ಉಷ್ಣತೆಯಲ್ಲಿನ ವ್ಯತ್ಯಾಸಗಳು ಹಾಗೂ ಮಳೆ ಪ್ರಸರಣ ವ್ಯವಸ್ಥೆಯ ಅಧ್ಯಯನವೂ ಅಗತ್ಯವಾಗಿದೆ.

ಬರ ಪರಿಸ್ಥಿತಿಯು ನಿಧಾನಗತಿಯ ನೈಸರ್ಗಿಕ ಪ್ರಕ್ರಿಯೆಯಾಗಿದ್ದು ಬರ ಪರಿಸ್ಥಿತಿಯನ್ನು ಸುಧಾರಿತ ಹವಾಮಾನ ಮಾಹಿತಿ ವ್ಯವಸ್ಥೆ ಹಾಗೂ ಸರಿಯಾದ ಸಮಯದ ಹವಾಮಾನ ಮಾಹಿತಿ ವಿಶ್ಲೇಷಣೆ, ನಕ್ಷೆ ತಯಾರಿಕೆ ಹಾಗೂ ವರದಿಗಳ ಸಹಾಯದಿಂದ ಪರಿಣಾಮಕಾರಿಯಾಗಿ ನಿರ್ವಹಿಸಬಹುದಾಗಿದೆ. ಕೃಷಿ ಮತ್ತು ಆರ್ಥಿಕತೆಯ ಮೇಲೆ ಹವಾಮಾನ ವೈಪರೀತ್ಯಗಳಿಂದಾದ ಪರಿಣಾಮಗಳನ್ನು ತಿಳಿಯಲು ಪ್ರಾದೇಶಿಕ ಮಟ್ಟದ ನಿರ್ದಿಷ್ಟ ವಿಶ್ಲೇಷಣೆಯು ಅತೀ ಮುಖ್ಯವೆಂದು ಅಧ್ಯಯನಗಳಿಂದ ತಿಳಿದುಬಂದಿದೆ.

**ರಾಜ್ಯದಲ್ಲಿ ನೈಸರ್ಗಿಕ ವಿಕೋಪಗಳು**

ರಾಜ್ಯದಲ್ಲಿನ ನೈಸರ್ಗಿಕ ವಿಕೋಪಗಳನ್ನು ಅವಲೋಕಿಸಿದಾಗ ರಾಜ್ಯವು ಅನೇಕ ರೀತಿಯ ನೈಸರ್ಗಿಕ ವಿಕೋಪಗಳಿಗೀಡಾಗಿರುವುದನ್ನು ಗಮನಿಸಬಹುದಾಗಿದೆ. ಕಳೆದ ೧೫ ವರ್ಷಗಳಲ್ಲಿ ರಾಜ್ಯವು ಬರ, ಪ್ರವಾಹ, ಆಲಿಕಲ್ಲು ವಿಪತ್ತುಗಳಿಗೆ ಸಾಕ್ಷಿಯಾಗಿದೆ.



ತುತ್ತಾದ ಪ್ರದೇಶಗಳನ್ನು ತೋರಿಸುವ ನಕ್ಷೆ (೨೦೦೯ರಲ್ಲಿ ಸಂಭವಿಸಿದ ವಾಯುಭಾರ ಕುಸಿತದ ಹಾದಿ ಅದರ ಪರಿಣಾಮವಾಗಿ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಪ್ರವಾಹಕ್ಕೆ ತುತ್ತಾದ ಪ್ರದೇಶಗಳನ್ನು ತೋರಿಸುವ ನಕ್ಷೆ)

**ಬರ**

ರಾಜ್ಯದ ಬಹುತೇಕ ಪ್ರದೇಶ ಬರಪೀಡಿತ ಪ್ರದೇಶವಾಗಿದ್ದು, ರಾಜ್ಯದಲ್ಲಿನ ಮಳೆಯ ಭೌಗೋಳಿಕ ವಿಸ್ತರಣೆ, ಅವಧಿ, ವ್ಯತ್ಯಯಗಳಿಂದ ರಾಜ್ಯವು ನಿಯಮಿತವಾಗಿ ಬರ ಪರಿಸ್ಥಿತಿಗೆ ತುತ್ತಾಗುತ್ತಲಿದೆ. ರಾಜ್ಯದಲ್ಲಿನ ಒಣ ಪ್ರದೇಶವು ವಿಸ್ತಾರದಲ್ಲಿ ರಾಜಸ್ಥಾನದ ನಂತರದ ಸ್ಥಾನದಲ್ಲಿದ್ದು ನೆರೆರಾಜ್ಯಗಳಿಗಿಂತ ಹೆಚ್ಚು ಬರ ಪರಿಸ್ಥಿತಿಗೆ ತುತ್ತಾಗಿದೆ. ರಾಜ್ಯದಲ್ಲಿನ ಒಟ್ಟು ಭೌಗೋಳಿಕ ಪ್ರದೇಶ ೧೯೦.೨೩೮ ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಸುಮಾರು (ಶೇ. ೮೦ರಷ್ಟು) ೧೫೨.೧ ಲಕ್ಷ ಹೆಕ್ಟೇರು ಪ್ರದೇಶವು ಬರಕ್ಕೀಡಾಗುತ್ತಿದೆ. ಸತತ ಬರ ಪರಿಸ್ಥಿತಿಯ ಪರಿಣಾಮವಾಗಿ ಅಂತರ್ಜಲ ಮಟ್ಟವೂ ಗಣನೀಯವಾಗಿ ಕುಸಿದಿದ್ದು, ಅಂತರ್ಜಲ ಗುಣಮಟ್ಟವೂ ಹದಗೆಡುತ್ತಿದೆ. ಬರ ಪರಿಸ್ಥಿತಿಯು ಜನರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಯ ಮೇಲೆ ತೀವ್ರ ಪರಿಣಾಮ ಬೀರುತ್ತಿದೆ.

ಬರ ಪರಿಸ್ಥಿತಿಯನ್ನು ವಾಡಿಕೆ ಮಳೆಯಲ್ಲಿನ ಕೊರತೆ, ಪ್ರತಿಕೂಲ ಹವಾಮಾನ, ದೀರ್ಘಕಾಲದ ಒಣಹವೆಯಿಂದಾಗಿ, ಜಲಚಕ್ರದಲ್ಲಿ ಉಂಟಾಗುವ ಅಸಮತೋಲನವೆಂದು ವ್ಯಾಖ್ಯಾನಿಸಬಹುದಾಗಿದೆ. ದೀರ್ಘಕಾಲದ ನೀರಿನ ಕೊರತೆ, ಪ್ರತಿಕೂಲ ಹವಾಮಾನ ಪರಿಸ್ಥಿತಿಯಿಂದ ಮಣ್ಣಿನ ತೇವಾಂಶ ಕಡಿಮೆಯಾಗಿ ಬೆಳೆ ಹಾಗೂ ಇಳುವರಿ ಕಡಿಮೆಯಾಗುತ್ತದೆ.

**ಬರ ಪರಿಸ್ಥಿತಿಯ ಮುಖ್ಯ ಛಾಯೆಗಳೆಂದರೆ**

* ಮಳೆಕೊರತೆ,
* ಅಂತರ್ಜಲ ಮಟ್ಟದಲ್ಲಿ ಕುಸಿತ,
* ನದಿ, ಕೆರೆ ಕಟ್ಟೆ, ಕಾಲುವೆಗಳಲ್ಲಿ ನೀರಿನ ಕೊರತೆ,
* ಮಣ್ಣಿನಲ್ಲಿ ತೇವಾಂಶ ಕೊರತೆ.

ರಾಜ್ಯದ ಬರ ಪರಿಸ್ಥಿತಿಯನ್ನು ಅವಲೋಕಿಸಿದಾಗ ಕಳೆದ ೧೬ ವರ್ಷಗಳಲ್ಲಿ ೧೩ ವರ್ಷಗಳು ಬರಕ್ಕೆ ತುತ್ತಾಗಿದ್ದು ಕೆಲವು ತಾಲ್ಲೂಕುಗಳು ಸತತ ೫ ವರ್ಷಗಳಿಗೂ ಹೆಚ್ಚು ಬರಕ್ಕೀಡಾಗಿದೆ.

**ಪ್ರವಾಹ**

ರಾಜ್ಯದಲ್ಲಿ ಪ್ರವಾಹದಿಂದಾಗಿ ಅಪಾರ ಪ್ರಾಣಹಾನಿ, ಆಸ್ತಿಪಾಸ್ತಿ ನಷ್ಟಗಳು ಸಂಭವಿಸುತ್ತಿವೆ. ಅತೀ ಹೆಚ್ಚು ಮಳೆ, ಮಳೆ ತೀವ್ರತೆ ಮತ್ತು ಜಲಾಶಯಗಳಿಂದ ಬಿಡುಗಡೆ ಮಾಡುವ ಅಪಾರ ಪ್ರಮಾಣದ ನೀರಿನಿಂದ ಹಲವು ಪ್ರದೇಶಗಳು ಪ್ರವಾಹಕ್ಕೀಡಾಗುತ್ತಿವೆ. ಬಂಗಾಳ ಕೊಲ್ಲಿಯಲ್ಲಿನ ವಾಯುಭಾರ ಕುಸಿತದ ಪರಿಣಾಮದಿಂದಾಗಿ ಸೆಪ್ಟೆಂಬರ್ ೨೦೦೯ರಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿ ಸಂಭವಿಸಿದ ಪ್ರವಾಹ ಪರಿಸ್ಥಿತಿಯನ್ನು ಉದಾಹರಿಸಬಹುದಾಗಿದೆ. ಉತ್ತರ ಕರ್ನಾಟಕ ಭಾಗದ ಜಿಲ್ಲೆಗಳಲ್ಲಿ ವಾರ್ಷಿಕ ವಾಡಿಕೆ ಮಳೆ ಪ್ರಮಾಣವು <೧೦೦೦ ಮಿ.ಮೀ.ಗಳಿದ್ದು ಕೇವಲ ನಾಲ್ಕು ದಿನಗಳಲ್ಲಿ ಸುರಿದ ೩೦೦ ಮಿ.ಮೀ.ಗೂ ಅಧಿಕ ಮಳೆಯು ಪ್ರವಾಹವನ್ನುಂಟುಮಾಡಿತು. ಅದಲ್ಲದೆ ಬಂಗಾಳ ಕೊಲ್ಲಿಯಲ್ಲಿನ ವಾಯುಭಾರ ಕುಸಿತವು ಮಹಾರಾಷ್ಟ್ರದ ತನಕ ವ್ಯಾಪಿಸಿದ್ದು ಭಾರಿ ಪ್ರಮಾಣದ ಮಳೆಯಿಂದಾಗಿ ಬಹುತೇಕ ಎಲ್ಲಾ

ಜಲಾಶಯಗಳು ಭರ್ತಿಯಾಗಿ ಜಲಾಶಯಗಳಿಂದ ಅಪಾರ ಪ್ರಮಾಣದ ಹೊರಹರಿವು ಬಹುತೇಕ ಉತ್ತರ ಕರ್ನಾಟಕದ ಜಿಲ್ಲೆಗಳು ಪ್ರವಾಹಕ್ಕೆ ತುತ್ತಾಗಲು ಕಾರಣವಾಯಿತು.

ನಗರ ಪ್ರದೇಶಗಳಲ್ಲೂ ಅತೀ ಹೆಚ್ಚು ಮಳೆಯಿಂದಾಗಿ ಪ್ರವಾಹಗಳು ಸಂಭವಿಸಿವೆ. ಬೆಂಗಳೂರಿನಲ್ಲಿ ಪ್ರತೀ ವರ್ಷ ಮಳೆಯಿಂದಾಗಿ ಪ್ರವಾಹ ಪರಿಸ್ಥಿತಿಯುಂಟಾಗುತ್ತಿದೆ. ೨೦೧೬ರ ಜುಲೈ ತಿಂಗಳಿನಲ್ಲಿ ಸುರಿದ ಭಾರಿ ಮಳೆಯಿಂದಾಗಿ ನಗರದ ಉತ್ತರ ಹಾಗೂ ಪೂರ್ವ ಭಾಗಗಳ ಹಲವು ಪ್ರದೇಶಗಳು ಜಲಾವೃತಗೊಂಡಿತು. ತತ್ಸಂಬಂಧವಾಗಿ ಅಪಾರ ಆಸ್ತಿಪಾಸ್ತಿ ನಷ್ಟವುಂಟಾಯಿತು. ಈ ರೀತಿ ರಾಜ್ಯದ ವಿವಿಧೆಡೆಗಳಲ್ಲಿ ಪ್ರತಿ ವರ್ಷ ಪ್ರವಾಹ ಸಂಭವಿಸುವುದು ಸಾಮಾನ್ಯವಾಗುತ್ತಿದೆ. ಇದರ ಸಮರ್ಪಕ ನಿರ್ವಹಣೆಗೆ ಅಗತ್ಯ ಕ್ರಮ ಕೈಗೊಳ್ಳುವುದು ಅನಿವಾರ್ಯವಾಗಿದೆ.

**ಆಲಿಕಲ್ಲು ಮಳೆ**

ಆಲಿಕಲ್ಲು ಮಳೆಯು ಖಂಡಾಂತರ ಒಳನಾಡು ಹಾಗೂ ಮಧ್ಯಂತರ ಅಕ್ಷಾಂಶ ಪ್ರದೇಶಗಳಲ್ಲಿ ಸಾಮಾನ್ಯವಾಗಿದ್ದು ಉಷ್ಣವಲಯ ಪ್ರದೇಶಗಳಲ್ಲಿ ಅತೀ ಕಡಿಮೆಯಿರುತ್ತದೆ ಎಂದು ಪರಿಗಣಿಸಲಾಗಿತ್ತು. ಆದರೆ ಉತ್ತರ ಕರ್ನಾಟಕ ಹಾಗೂ ಮಹಾರಾಷ್ಟ್ರಕ್ಕೆ ಹೊಂದಿಕೊಂಡ ಹಲವು ಜಿಲ್ಲೆಗಳಲ್ಲಿ ಸತತವಾಗಿ ಪೂರ್ವ ಮುಂಗಾರಿನ ಕಾಲದಲ್ಲಿ ಸಂಭವಿಸುತ್ತಿರುವ ಆಲಿಕಲ್ಲು ಮಳೆಯು ವಾತಾವರಣದಲ್ಲಿನ ಬದಲಾವಣೆಯ ಪರಿಣಾಮವೆಂದು ತಿಳಿಯಬೇಕಿದೆ.

೨೦೧೪, ೨೦೧೫ ಮತ್ತು ೨೦೧೬ರಲ್ಲಿ ಸಂಭವಿಸಿದ ತೀವ್ರತರ ಆಲಿಕಲ್ಲು ಮಳೆಯು ಅಪಾರ ಪ್ರಮಾಣದ ದ್ರಾಕ್ಷಿ, ದಾಳಿಂಬೆ, ಮಾವು ಮುಂತಾದ ಬಹುವಾರ್ಷಿಕ ತೋಟಗಾರಿಕೆ ಬೆಳೆಗಳು ಹಾಗೂ ಇನ್ನಿತರ ಬೆಳೆಗಳಿಗೆ ನಷ್ಟ ಉಂಟುಮಾಡಿತು, ಕರ್ನಾಟಕ ಸರ್ಕಾರದ ಪ್ರಾಥಮಿಕ ಮಾಹಿತಿಯ ಪ್ರಕಾರ ೨೦೧೪ರ ಆಲಿಕಲ್ಲು ಮಳೆಯಿಂದಾಗಿ ಸುಮಾರು ೧೦೦೦ ಕೋಟಿಗೂ ಹೆಚ್ಚು ಬೆಳೆ ನಷ್ಟ ಎಂದು ಅಂದಾಜಿಸಲಾಗಿದೆ.

ರಾಜ್ಯದಲ್ಲಿ ಸಂಭವಿಸುವ ಬಹುತೇಕ ನೈಸರ್ಗಿಕ ವಿಕೋಪಗಳು ಜಲ ಹಾಗೂ ಹವಾಮಾನ ಸಂಬಂಧಿತವಾಗಿದ್ದರೂ ಅವುಗಳನ್ನು ಸಮರ್ಪಕ ಜಲ ನಿರ್ವಹಣೆಗೆ ಸಂಬಂಧಿಸಿದ್ದಾಗಿದೆಂದು ಪರಿಗಣಿಸಿದಾಗ ಮಾತ್ರ ಈ ವಿಕೋಪಗಳ ಪರಿಣಾಮಗಳನ್ನು ತಗ್ಗಿಸಬಹುದಾಗಿದೆ.

**ಹವಾಮಾನ ಕೇಂದ್ರಗಳ ಜಾಲ**

ಬರ ಹಾಗೂ ಪ್ರವಾಹ ಪರಿಸ್ಥಿತಿಯನ್ನು ವಿಸ್ತೃತವಾಗಿ ನಿರ್ವಹಿಸಲು ಹವಾಮಾನ ಕೇಂದ್ರಗಳ ಜಾಲ ಹಾಗೂ ಹವಾಮಾನ ಮುನ್ಸೂಚನೆಯಂಥ ಕ್ರಮಗಳು ಪ್ರಮುಖ ಪಾತ್ರ ವಹಿಸುತ್ತವೆ. ಆದುದರಿಂದ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರವು ದೇಶದಲ್ಲಿಯೇ ಅನನ್ಯವಾಗಿದ್ದು, ೧೯೮೮ರಿಂದ ಕಾರ್ಯನಿರ್ವಹಿಸುತ್ತಿದ್ದು, ನೈಸರ್ಗಿಕ ವಿಕೋಪಗಳ ಉಸ್ತುವಾರಿಯಲ್ಲಿ ಅನೇಕ ಉಪಕ್ರಮಗಳನ್ನು ಕೈಗೊಂಡಿದೆ.

ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರವು (ಕೆ.ಎಸ್.ಎನ್.ಡಿ.ಎಂ.ಸಿ.) ಸರಿಯಾದ ಸಮಯದಲ್ಲಿ ಹವಾಮಾನ ಮಾಹಿತಿಯನ್ನು ಸಂಗ್ರಹಿಸಲು ಸೌರಶಕ್ತಿ ಆಧಾರಿತ, ಜಿಪಿಆರ್‌ಎಸ್ ಸಹಿತ ದೂರಸ್ಥ ಮಳೆಮಾಪನ ಮತ್ತು ಹವಾಮಾನ ಮಾಪನ ಕೇಂದ್ರಗಳ ಜಾಲವನ್ನು ರಾಜ್ಯದ ಎಲ್ಲಾ ೭೪೭ ಹೋಬಳಿಗಳಲ್ಲಿ ಮತ್ತು ರಾಜ್ಯದ ಎಲ್ಲಾ ೫೬೨೫ ಗ್ರಾಮ ಪಂಚಾಯಿತಿ ಕೇಂದ್ರಗಳಲ್ಲಿ ಸ್ಥಾಪಿಸಲಾಗಿದ್ದು ಇದು ದೇಶದಲ್ಲಿಯೇ ವಿನೂತನ ಹಾಗೂ ಪ್ರಪ್ರಥಮವಾಗಿದೆ ಹಾಗೂ ದೇಶದ ಇತರೆ ಭಾಗಗಳಿಗೆ ಮಾದರಿಯಾಗಿದೆ.

ಹವಾಮಾನ ಮಾಪನ ಕೇಂದ್ರಗಳ ಜಾಲದ ಪ್ರಮುಖ ರೂಪುರೇಷೆಗಳು :

- ✶ ಮಳೆಮಾಪನ ಕೇಂದ್ರ ಪ್ರತಿ ~೨೫ ಚದರ ಕಿ.ಮೀ.ಗೆ
- ✶ ಹವಾಮಾನ ಮಾಪನ ಕೇಂದ್ರ ಪ್ರತಿ ~೨೫೦ ಚದರ ಕಿ.ಮೀ.ಗೆ
- ✶ ಪ್ರತಿ ೧೫ ನಿಮಿಷಗಳಿಗೊಮ್ಮೆ ಎಲ್ಲಾ ಕೇಂದ್ರಗಳಿಂದ ಮಾಹಿತಿ ಸಂಗ್ರಹಣೆ
- ✶ ಕೇಂದ್ರಗಳು ಸ್ವಯಂಚಾಲಿತವಾಗಿದ್ದು ೨೪ x ೭ ಹಾಗೂ ೩೬೫ ದಿನಗಳ ಕಾರ್ಯನಿರ್ವಹಣೆ
- ✶ ಮಳೆಮಾಪನದಲ್ಲಿ ೦.೫ ಮಿ.ಮೀ. ನಿಖರತೆ

ಸ್ಥಾಪಿಸಲಾಗಿರುವ ಎಲ್ಲಾ ಕೇಂದ್ರಗಳು ಅತೀ ಸಂವೇದನಾಶೀಲವಾಗಿದ್ದು ಹವಾಮಾನ ಪರಿಸ್ಥಿತಿಯಲ್ಲಿನ ಬದಲಾವಣೆಗಳನ್ನು ಅತೀ ನಿಖರವಾಗಿ ಮತ್ತು ನಿರಂತರವಾಗಿ ದಾಖಲಿಸುತ್ತವೆ.

ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರವು ನೈಸರ್ಗಿಕ ವಿಕೋಪಗಳನ್ನು ನಿರ್ವಹಿಸಲು ಸರ್ವಸನ್ನದ್ಧವಾಗಿದ್ದು ಮಳೆಮಾಪನ ಹಾಗೂ ಹವಾಮಾನ ಮಾಪನ ಜಾಲದಿಂದ ಪ್ರತಿ ೧೫ ನಿಮಿಷಗಳಿಗೊಮ್ಮೆ ಹವಾಮಾನ ಸಂಬಂಧಿತ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಿ, ನಕ್ಷೆ ಹಾಗೂ ವರದಿಗಳನ್ನು ಸಿದ್ಧಪಡಿಸುವ ಪ್ರಕ್ರಿಯೆಯನ್ನು ಸ್ವಯಂಚಾಲಿತಗೊಳಿಸಲಾಗಿದ್ದು ಅದಕ್ಕೆ ಅಗತ್ಯವಾದ ಗಣಕಯಂತ್ರ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಲಾಗಿದೆ. ಸರಿಯಾದ ಸಮಯದ ಹವಾಮಾನ ಮಾಹಿತಿ, ನಕ್ಷೆ, ವರದಿಗಳು, ಸಲಹೆ ಸೂಚನೆಗಳನ್ನು ಸಂಬಂಧಪಟ್ಟ ಸರ್ಕಾರಿ ಅಧಿಕಾರಿವರ್ಗಕ್ಕೆ, ಸಾರ್ವಜನಿಕರಿಗೆ ಮತ್ತು ರೈತ ಸಮುದಾಯಕ್ಕೆ ಎಸ್.ಎಂ.ಎಸ್.ಗಳ ಮೂಲಕ ರವಾನಿಸಲಾಗುತ್ತಿದೆ ಹಾಗೂ ಅಂತರ್ಜಾಲ ಮಾಧ್ಯಮಗಳಲ್ಲಿಯೂ ನೀಡಲಾಗುತ್ತಿದೆ.

ಈ ಕೇಂದ್ರವು ಕೃಷಿ ಮತ್ತು ತೋಟಗಾರಿಕೆ ಕೈಗೊಳ್ಳುತ್ತಿರುವ ರೈತಬಾಂಧವರಿಗೆ, ಮೀನುಗಾರಿಕೆಗೆ, ಸಾರಿಗೆ, ವಿದ್ಯುತ್, ಇಂಧನ ವಲಯಗಳಿಗೆ, ರಾಜ್ಯ ಹಾಗೂ ಜಿಲ್ಲಾ ಮಟ್ಟದ ವಿಪತ್ತು ನಿರ್ವಹಣಾ ಮಂಡಳಿ ಅಧಿಕಾರಿಗಳಿಗೆ ಹಾಗೂ ಮಾಧ್ಯಮಗಳಿಗೆ ಹವಾಮಾನ ಸಂಬಂಧಿತ ಮಾಹಿತಿ, ಮುನ್ಸೂಚನೆ, ಸಲಹೆಗಳನ್ನು ನಿರಂತರವಾಗಿ ನೀಡುತ್ತಿದೆ. ರಾಜ್ಯದಲ್ಲಿ ಸಂಭವಿಸಬಹುದಾದ ಲಘು ಭೂಕಂಪನಗಳ ಬಗ್ಗೆಯೂ ನಿಗಾವಹಿಸಲು ಈ ಕೇಂದ್ರವು ಉಪಗ್ರಹ ಸಂಪರ್ಕ ಹೊಂದಿದ ಸೌರಶಕ್ತಿ ಆಧಾರಿತ, ೧೪ ಭೂಕಂಪಮಾಪನ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.

**ಹವಾಮಾನ ಮುನ್ಸೂಚನೆ**

ಹವಾಮಾನ ಸಂಬಂಧಿತ ಮಾಹಿತಿ ರವಾನೆ, ಮುನ್ಸೂಚನೆ ರವಾನೆ ಪ್ರಕೃತಿ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಕೇಂದ್ರವು ರಾಜ್ಯದಲ್ಲಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಹವಾಮಾನ ಮುನ್ಸೂಚನೆ ನೀಡುತ್ತಿದೆ. ಈ ಕಾರ್ಯಕ್ಕೆ ದೇಶದ ಪ್ರತಿಷ್ಠಿತ ಸಂಶೋಧನಾ ಕೇಂದ್ರಗಳೊಂದಿಗೆ ಸೇರಿ ಅಗತ್ಯ ತಾಂತ್ರಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿದೆ.

**ಫಲಿತಾಂಶ**

ನೈಸರ್ಗಿಕ ವಿಕೋಪಗಳ ಬಗ್ಗೆ ಸರಿಯಾದ ಸಮಯದಲ್ಲಿ ನಿಖರ ಮಾಹಿತಿ ಲಭ್ಯತೆಯು ನೈಸರ್ಗಿಕ ವಿಕೋಪಗಳಿಂದಾಗುವ ಪರಿಣಾಮಗಳನ್ನು ನಿರ್ವಹಿಸುವಲ್ಲಿ ಪ್ರಮುಖ ಅಂಶವಾಗಿದೆ. ಹವಾಮಾನ ನಿಜ ಸಮಯದ ನಿಖರ ಮಾಹಿತಿ ಹಾಗೂ ಮುನ್ಸೂಚನೆಗಳು ನೈಸರ್ಗಿಕ ವಿಕೋಪಗಳಿಂದಾಗಬಹುದಾದ ಹಾನಿಯನ್ನು ಬಹುಮಟ್ಟಿಗೆ ತಡೆಗಟ್ಟಲು ನೆರವಾಗುತ್ತದೆ. ಮುನ್ನೆಚ್ಚರಿಕೆ ಹಾಗೂ ಮುಂಜಾಗ್ರತಾ ಕ್ರಮಕ್ಕಾಗಿ ವ್ಯಯಿಸಿದ ಖರ್ಚು ಪರಿಹಾರ ಪುನರ್ವಸತಿಗಳಿಗೆ ವ್ಯಯಿಸಿದ ಖರ್ಚಿನ ಅನುಪಾತಕ್ಕೆ ಹೋಲಿಸಿದಾಗ ೧:೧೦೦ ರಷ್ಟಿರುವುದೆಂದು ತಜ್ಞರ ಅಭಿಪ್ರಾಯ.

ಪ್ರಕೃತಿ ವಿಕೋಪಗಳ ಬಗ್ಗೆ ಸಮಯೋಚಿತ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳಲು ಪ್ರಮುಖವಾಗಿ ಭೌಗೋಳಿಕ, ಜಲ ಹಾಗೂ ಹವಾಮಾನ ಸಂಬಂಧಿತ ನೈಸರ್ಗಿಕ ವಿಕೋಪಗಳನ್ನು ಗುರುತಿಸುವ ಸಂವೇದನಾ ಉಪಕರಣಗಳ ಅಳವಡಿಕೆ, ನಿಜ ಸಮಯದ ಮಾಹಿತಿ ಸಂಗ್ರಹಣೆ, ದತ್ತಾಂಶ ಸಂಸ್ಕರಣೆ, ವಿಶ್ಲೇಷಣೆ, ತಂತ್ರಾಂಶ ಅಭಿವೃದ್ಧಿ, ಎಚ್ಚರಿಕೆ ಸಂದೇಶ ಸಿದ್ಧಪಡಿಸುವುದು, ಮಾಹಿತಿ ವಿನಿಮಯ ಹಾಗೂ ಸಂಬಂಧಪಟ್ಟವರಿಗೆ ಮಾಹಿತಿ ರವಾನೆ ಎಲ್ಲವನ್ನೂ ಒಳಗೊಂಡಿರುತ್ತದೆ. ಈ ಸರ್ವಸನ್ನದ್ಧ ವ್ಯವಸ್ಥೆಯನ್ನು ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರವು ಕಾರ್ಯಚಾಲನೆಗೊಳಿಸಿದ್ದು ಎಲ್ಲಾ ವರ್ಗದವರಿಗೆ ಮಾಹಿತಿಯನ್ನು ತಲುಪಿಸುತ್ತಿದೆ.

ಈ ಕೇಂದ್ರದ ಪ್ರಕೃತಿ ವಿಕೋಪ, ಬರ ಉಸ್ತುವಾರಿ ವ್ಯವಸ್ಥೆಯು ದೇಶದಲ್ಲಿಯೇ ಮಾದರಿಯಾಗಿದೆ. ಉದಾಹರಣೆ : ಬರಪೀಡಿತ ಪ್ರದೇಶಗಳನ್ನು ಹೋಬಳಿ

**ಬದುಕು**

ಇಚ್ಛೆಪಡಿಸಿದ್ದನ್ನೆಲ್ಲ
ತಿಂದು
ಬದುಕುವವರಿದ್ದಾರೆ !
ನೋವನ್ನು ಮಾತ್ರವೇ
ತಿಂದು
ಬದುಕುವವರಿದ್ದಾರೆ !

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೯೪




*೨೦೦೯ರ ಪ್ರವಾಹದ ಸಂದರ್ಭದಲ್ಲಿನ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿನ ಚಿತ್ರಣಗಳು*

ಮಟ್ಟದಲ್ಲಿ ಗುರುತಿಸುವುದರ ಜೊತೆಗೆ ಬರ ಪರಿಣಾಮಗಳನ್ನು ತಗ್ಗಿಸುವುದು ಮತ್ತು ಉಪಶಮನ ಕಾರ್ಯಕ್ರಮಗಳಾದ ಬೆಳೆನಷ್ಟ ಅಂದಾಜು, ಬದಲಿ ಬೆಳೆ ಯೋಜನೆ ರೂಪಿಸುವುದು, ಕುಡಿಯುವ ನೀರಿನ ಹಾಗೂ ಮೇವಿನ ಕೊರತೆ ನಿವಾರಣೆ, ಗ್ರಾಮೀಣ ಕೃಷಿ ಕಾರ್ಮಿಕರಿಗೆ ಉದ್ಯೋಗಾವಕಾಶ ಒದಗಿಸುವುದು ಮುಂತಾದ ಕಾರ್ಯರೂಪುರೇಷೆಗಳನ್ನು ಕೈಗೊಳ್ಳಲು ಸರ್ಕಾರಕ್ಕೆ ಅಗತ್ಯ ಮಾಹಿತಿ ಹಾಗೂ ತಾಂತ್ರಿಕ ನೆರವನ್ನು ನೀಡುತ್ತಿದೆ. ಅಲ್ಲದೆ ಕೇಂದ್ರ ಸರ್ಕಾರಕ್ಕೆ ಬರ ಪರಿಸ್ಥಿತಿಯ ಬಗ್ಗೆ ಮನದಟ್ಟು ಮಾಡುವುದು ಹಾಗೂ ಹಣಕಾಸು ಅಗತ್ಯ ನೆರವು ಕೋರಿ ಸಲ್ಲಿಸಲಾಗುವ ಮನವಿ ಸಿದ್ಧಪಡಿಸುವ ಕಾರ್ಯದಲ್ಲಿ ನೆರವು ನೀಡುತ್ತಿದೆ.

ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಕೇಂದ್ರವು ರಾಜ್ಯದಲ್ಲಿ ಬರ ಪರಿಸ್ಥಿತಿಯನ್ನು ನಿರ್ವಹಿಸಲು ರಾಜ್ಯಕ್ಕೆ ಮಳೆ, ಶುಷ್ಕ ವಾತಾವರಣ, ತೇವಾಂಶ ಕೊರತೆ, ಕೃಷಿ ಬಿತ್ತನೆ ಪರಿಸ್ಥಿತಿ, ಬೆಳೆ ಸ್ಥಿತಿಗತಿ, ಪ್ರಮುಖ ಜಲಾಶಯಗಳ ನೀರಿನ ಪ್ರಮಾಣ ಹಾಗೂ ಸಣ್ಣ ಕೆರೆಕಟ್ಟೆಗಳಲ್ಲಿನ ನೀರಿನ ಸಂಗ್ರಹ ಮುಂತಾದವುಗಳ ಬಗ್ಗೆ ವೈಜ್ಞಾನಿಕ ಮಾಹಿತಿಯನ್ನು ಹಾಗೂ ದತ್ತಾಂಶವನ್ನು ನೀಡುವುದರ ಜೊತೆಗೆ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಅಧ್ಯಕ್ಷತೆಯಲ್ಲಿ ನಡೆಯುವ ರಾಜ್ಯಮಟ್ಟದ ಹವಾಮಾನ ಸ್ಥಿತಿಗತಿ ಪರಿಶೀಲನಾ ಸಭೆಗೆ ರಾಜ್ಯ ಸಚಿವ ಸಂಪುಟ ಉಪಸಮಿತಿ ಸಭೆಗೆ ರಾಜ್ಯದ ಬರ ಪರಿಸ್ಥಿತಿಯ ವಿವರವಾದ ಮಾಹಿತಿಯನ್ನು ನೀಡುತ್ತಿದೆ.

ಈ ಕೇಂದ್ರವು ನಿಜಸಮಯದ ಹವಾಮಾನ ಮಾಹಿತಿ ಮತ್ತು ಹವಾಮಾನ ಮುನ್ಸೂಚನೆಯನ್ನು ರಾಜ್ಯದಲ್ಲಿ ಎಲ್ಲಾ ಅಧಿಕಾರಿ ವರ್ಗಕ್ಕೆ ಇಲಾಖೆಯ ಕಾರ್ಯದರ್ಶಿಗಳು, ಜಿಲ್ಲಾಧಿಕಾರಿಗಳು, ತಹಸೀಲ್ದಾರರು, ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯದರ್ಶಿಗಳು, ಕೃಷಿ ಇಲಾಖೆಯ ಜಂಟಿ ಹಾಗೂ ಉಪನಿರ್ದೇಶಕರುಗಳು, ಕೃಷಿ ಅಧಿಕಾರಿಗಳು, ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು, ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಪೊಲೀಸ್ ಅಧಿಕಾರಿಗಳು ಮುಂತಾದವರ ದೂರವಾಣಿಗಳಿಗೆ ಎಸ್.ಎಂ.ಎಸ್. ಮೂಲಕ ತಲುಪಿಸಲಾಗುತ್ತಿದೆ. ಅಲ್ಲದೆ ರೈತಸಂಪರ್ಕ ಕೇಂದ್ರ, ಕೃಷಿ ವಿಜ್ಞಾನ ಕೇಂದ್ರ, ವಿಶ್ವವಿದ್ಯಾನಿಲಯ, ಗೃಹ ಇಲಾಖೆ ಮತ್ತು ಮಾಧ್ಯಮಗಳಿಗೆ ಅಂತರ್ಜಾಲ ತಾಣ (www.ksndmc.org), ಇ-ಮೇಲ್ ಮೂಲಕ ತಲುಪಿಸುತ್ತಿದೆ. ಈ ಕೇಂದ್ರದಿಂದ ನಿಜಸಮಯದಲ್ಲಿ ದೊರೆತ ಮಾಹಿತಿಯು ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲು, ಸಂಪನ್ಮೂಲ ಕ್ರೋಢೀಕರಣ, ಅಗತ್ಯ ಬರ ಪರಿಹಾರ ಯೋಜನೆಗಳನ್ನು ರೂಪಿಸುವುದಕ್ಕೆ ಸಹಕಾರಿಯಾಗುತ್ತಿದೆ.

**೨೪ x ೭ x ೩೬೫ ಸಹಾಯವಾಣಿ "ವರುಣ ಮಿತ್ರ"**

ವೈಜ್ಞಾನಿಕವಾಗಿ ಸಂಗ್ರಹಿಸಿದ ಹವಾಮಾನ ಮಾಹಿತಿ ಹಾಗೂ ಗ್ರಾಮಪಂಚಾಯಿತಿ ಮಟ್ಟದ ಹವಾಮಾನ ಮುನ್ಸೂಚನೆಯನ್ನು ನೇರವಾಗಿ ಜನಸಾಮಾನ್ಯರಿಗೆ ತಲುಪಿಸುವ ಸಲುವಾಗಿ ಈ ಕೇಂದ್ರವು "ವರುಣ ಮಿತ್ರ" – ಸಹಾಯವಾಣಿಯನ್ನು ತೆರೆಯಲಾಗಿದ್ದು ಈ ಸಹಾಯವಾಣಿಯು (೯೨೪೩೩೪೫೪೩೩) ದಿನದ ೨೪ ಗಂಟೆಗಳು ಕಾರ್ಯ ನಿರ್ವಹಿಸುತ್ತಿದೆ. ಜನಸಾಮಾನ್ಯರು ಅದರಲ್ಲೂ ರೈತರು ಈ ಸಹಾಯವಾಣಿಗೆ ಕರೆ ಮಾಡಿ ತಮ್ಮ ಗ್ರಾಮ ಪಂಚಾಯಿತಿಗೆ ಸಂಬಂಧಪಟ್ಟ ಹವಾಮಾನ ಮಾಹಿತಿ ಮತ್ತು ಮುನ್ಸೂಚನೆಯನ್ನು ಪಡೆದುಕೊಳ್ಳುತ್ತಿದ್ದಾರೆ. ರೈತ ಮತ್ತು ಜನಸಮುದಾಯಕ್ಕೆ ವೈಜ್ಞಾನಿಕ ಮಾಹಿತಿ, ಸಲಹೆ, ಸೂಚನೆಯನ್ನು ನೇರವಾಗಿ ನೀಡುವುದರಿಂದ ನೈಸರ್ಗಿಕ ವಿಕೋಪಗಳಿಂದ ಸಂಭವಿಸಬಹುದಾದ ಸಂಭವನೀಯ ನಷ್ಟವನ್ನು ತಗ್ಗಿಸುವುದರ ಜೊತೆಗೆ ಮುಂಜಾಗ್ರತಾ ಕ್ರಮ ಕೈಗೊಳ್ಳಲು ಸಹಾಯವಾಗುತ್ತಿದೆ.

**"ವರುಣ ಮಿತ್ರ" – ೨೪ x ೭ x ೩೬೫ ಸಹಾಯವಾಣಿ ಜನ ಸಮುದಾಯದಿಂದ ಭಾರಿ ಪ್ರಶಂಸೆಗೆ ಕಾರಣವಾಗಲು ಕೆಳಕಂಡ ಅಂಶಗಳನ್ನು ಒಳಗೊಂಡಿದೆ :**

- ✶ ಈ ಕೇಂದ್ರದಿಂದ ಸಾಮಾನ್ಯ ಜನರಿಗೆ ತಿಳಿಯುವಂತೆ ಹವಾಮಾನ ಮಾಹಿತಿಯನ್ನು ಸ್ಥಳೀಯ ಹಾಗೂ ಸರಳ ಭಾಷೆಯಲ್ಲಿ ನೀಡಲಾಗುತ್ತಿದೆ.
- ✶ ನಿಖರ ಮಾಹಿತಿ ಸಕಾಲದಲ್ಲಿ ದೊರೆಯುತ್ತಿರುವುದು ರೈತ-ಜನಸಮುದಾಯದಲ್ಲಿ ವಿಶ್ವಾಸ ಹೆಚ್ಚಿಸಿದೆ.
- ✶ ಜನಸಮುದಾಯವು ವಿಜ್ಞಾನಿಗಳೊಂದಿಗೆ ನೇರವಾಗಿ ಸಂವಾದಿಸಿ ಸಂಬಂಧಪಟ್ಟ ಹವಾಮಾನ ಪರಿಸ್ಥಿತಿ ಹಾಗೂ ವಿದ್ಯಮಾನಗಳನ್ನು ತಿಳಿಯಲು ಅವಕಾಶ ಕಲ್ಪಿಸಲಾಗಿದೆ.
- ✶ ಜನಸಮುದಾಯದ ಪ್ರತಿ ಕರೆಯನ್ನು ಧ್ವನಿಮುದ್ರಿತಗೊಳಿಸಲಾಗುತ್ತಿರುವುದು ಸಹಾಯವಾಣಿಯಿಂದ ನೀಡುವ ಸಲಹೆ ಸೂಚನೆಗಳಲ್ಲಿ ಸುಧಾರಣೆ ಮಾಡಿಕೊಳ್ಳುವುದಕ್ಕೆ ಸಹಾಯವಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ "ವರುಣ ಮಿತ್ರ" ಸಹಾಯವಾಣಿಯ ಕರೆಗಳ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ.

"ವರುಣ ಮಿತ್ರ" – ಸಹಾಯವಾಣಿಯ ಮೂಲಕ ನೀಡುತ್ತಿರುವ ಹವಾಮಾನ ಮುನ್ಸೂಚನೆಯು ರೈತರಿಗೆ ಅವರ ಕೃಷಿ ಕಾರ್ಯಗಳಾದ ಉಳುಮೆ, ಬಿತ್ತನೆ, ಗೊಬ್ಬರ ಚೆಲ್ಲುವುದು, ಔಷಧಿ ಸಿಂಪಡಣೆ ಮತ್ತು ಕುಯ್ಲು ಕಾರ್ಯಗಳಿಗೆ ಸೂಕ್ತ ಸಮಯ ನಿಗದಿಗೊಳಿಸಲು ನೆರವಾಗುತ್ತಿರುವುದರಿಂದ ಸಂಭವಿಸಬಹುದಾದ ಬೆಳೆ ನಷ್ಟವನ್ನು ತಗ್ಗಿಸಲು ಹಾಗೂ ಹೆಚ್ಚಿನ ಇಳುವರಿ ಪಡೆಯಲು ಸಾಧ್ಯವಾಗುತ್ತಿದೆ. ಅಲ್ಲದೆ ಪ್ರತಿಕೂಲ ಹವಾಮಾನ ಪರಿಸ್ಥಿತಿಯಲ್ಲಿ ಮುಂಜಾಗ್ರತಾ ಕ್ರಮ ಕೈಗೊಳ್ಳಲು ನೆರವಾಗಿದೆ.

**ಜಿ. ಎಸ್. ಶ್ರೀನಿವಾಸರೆಡ್ಡಿ** ಮತ್ತು **ಸಿ. ಎನ್. ಪ್ರಭು**
ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ
ಮೇಜರ್ ಸಂದೀಪ್ ಉನ್ನಿಕೃಷ್ಣನ್ ರಸ್ತೆ, ಯಲಹಂಕ
ಬೆಂಗಳೂರು – ೫೬೦ ೦೬೪

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

**HOSATHU** Kannada Monthly /JULY 2017 / ₹ 20 (No. of Pages 64) Date of Publication : 26th of every month
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.